ರಾಮಕೃಷ್ಣ ಮಹಾಸಂಘದ ಏಕೈಕ ಕನ್ನಡ ಮಾಸಪತ್ರಿಕೆ

# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ




Celebrations of Swami Vivekananda's 150th Birth Anniversary (2010 - 2014)

ಮಹಿಳೆಯರ ಸಬಲೀಕರಣ

ಪರಿಹಾರ ಕಾರ್ಯ

ಶೈಕ್ಷಣಿಕ ಸೇವೆ

## ಕ್ರಿಯಾರೂಪಿ ವಿವೇಕಾನಂದ

ವಿಶೇಷ ಸಂಚಿಕೆ

ಗಿರಿಜನರ ಸೇವೆ

ವೈದ್ಯಕೀಯ ಸೇವೆ

RAMAKRISHNA MISSION ASHRAMA

MEDICAL CAMP

₹ 75/-

ಗ್ರಾಮೋದ್ಧಾರ ಕಾರ್ಯಕ್ರಮ

ಜನವರಿ - 2014



# ಶ್ರೀ ರಾಮಕೃಷ್ಣ ವಿದ್ಯಾಶ್ರಮ ಟ್ರಸ್ಟ್ (ರಿ.)



**ವಸತಿ ವಿದ್ಯಾಲಯ**

**'ಎಫ್' ಬ್ಲಾಕ್, ಗೋಪಾಲಗೌಡ ಬಡಾವಣೆ, ಶಿವಮೊಗ್ಗ – 577 205**

E-mail: sriramakrishna.smg@gmail.com

**ಶ್ರೀ ರಾಮಕೃಷ್ಣ ಗಂಡುಮಕ್ಕಳ ವಸತಿ ನಿಲಯ**
ಫೋನ್: 08182–258286
9845560531

**ಶ್ರೀ ರಾಮಕೃಷ್ಣ ಹೆಣ್ಣು ಮಕ್ಕಳ ವಸತಿ ನಿಲಯ**
ಫೋನ್: 08182–256281
9902060960







## ವಸತಿ ನಿಲಯದ ವೈಶಿಷ್ಟ್ಯ

**ಮಾನ್ಯ ವಿದ್ಯಾಭಿಮಾನಿಗಳೇ,**

ಪ್ರತಿಯೊಂದು ಮಗುವಿನಲ್ಲೂ ಪರಮಾತ್ಮನ ಸ್ವರೂಪದ ಆತ್ಮನಿರುತ್ತಾನೆ. ಯೋಗ, ಧ್ಯಾನ, ಭಜನೆ ಹಾಗೂ ಗುರುಮಹಾರಾಜರ ಕಥೆಗಳನ್ನು ಹೇಳಿ ಆತ್ಮ ಜಾಗೃತಗೊಳಿಸಿ ಜವಾಬ್ದಾರಿಯುತ ವ್ಯಕ್ತಿಯನ್ನಾಗಿ ರೂಪಿಸುವುದೇ ಸಂಸ್ಥೆಯ ಮೂಲ ಉದ್ದೇಶ. ಪ್ರತಿ ಮಗುವಿಗೂ **ಪ್ರತ್ಯೇಕ ಕೌನ್ಸಲಿಂಗ್** ಮಾಡಿ ಪ್ರಗತಿ ಕುಂಠಿತವಾಗಲು ಕಾರಣಗಳನ್ನು ಹುಡುಕಿ ಸೂಕ್ತ ತರಬೇತಿಯನ್ನು ನೀಡುವುದು. **ಸದೃಢ ದೇಹದಲ್ಲಿ ಸದೃಢ ಮನಸ್ಸಿಗಾಗಿ ಆಟ, ಊಟ, ಪಾಠ, ಡ್ರಾಯಿಂಗ್, ಕರಾಟೆ, ಸಂಗೀತ, ಭರತನಾಟ್ಯ** ಎಲ್ಲಾ ಚಟುವಟಿಕೆಗಳಲ್ಲಿ ಎಲ್ಲಾ ಮಕ್ಕಳು ಶ್ರದ್ಧೆಯಿಂದ ಭಾಗವಹಿಸುವಂತೆ ಉತ್ತೇಜಿಸುವುದು.

Spoken English, ಭಾಷಣ ಕಲೆ, ಕಾರ್ಯಕ್ರಮ ನಿರೂಪಣೆ ಮತ್ತು ಪ್ರತಿ ಮಗುವು ವೇದಿಕೆಯನ್ನು ಹಂಚಿಕೊಳ್ಳಲು ಸೂಕ್ತ ತರಬೇತಿ ಮತ್ತು ಅವಕಾಶ ನೀಡುವುದು. Smart Class, LCD, Projector, C C T V, ಉತ್ತಮ Lab, ಹಾಗೂ ಗ್ರಂಥಾಲಯವಿದ್ದು ಪ್ರಾಯೋಗಿಕ ಶಿಕ್ಷಣಕ್ಕೆ ಒತ್ತು ಕೊಡುವುದು. ಎಸ್.ಎಸ್.ಎಲ್.ಸಿ.ಯಲ್ಲಿ ಸತತವಾಗಿ 7 ವರ್ಷಗಳಿಂದ ಶೇ. 100ರ ಫಲಿತಾಂಶ ಬರುತ್ತಿದೆ. ತಂದೆ, ತಾಯಿ ಮತ್ತು ಮಕ್ಕಳ ಬಾಂಧವ್ಯ ಪೂಜನೀಯಗೊಳ್ಳಲು **ಶಾಸ್ತ್ರೋಕ್ತವಾಗಿ ಪಾದಪೂಜೆ** ಕಾರ್ಯಕ್ರಮವನ್ನು ಆಚರಿಸುತ್ತೇವೆ.

## 2014–15ರ ಸಾಲಿಗೆ ಪ್ರವೇಶಕ್ಕಿರುವ ತರಗತಿಗಳು

### 5 ಮತ್ತು 8ನೇ ತರಗತಿ ಆಂಗ್ಲ ಮಾಧ್ಯಮ

### ಗಂಡು ಮತ್ತು ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಹಾಸ್ಟೆಲ್ ವ್ಯವಸ್ಥೆ ಇರುತ್ತದೆ.

ಪ್ರವೇಶ ಬಯಸುವವರು ಅಪ್ಲಿಕೇಷನ್ & ಪ್ರಾಸ್ಪೆಕ್ಟಸ್‌ಗಾಗಿ ತಕ್ಷಣ ರೂ. 200ನ್ನು ಡಿ.ಡಿ. ಅಥವಾ ಎಂ.ಓ. ಮೂಲಕ ಕಾರ್ಯದರ್ಶಿ, ಶ್ರೀ ರಾಮಕೃಷ್ಣ ವಿದ್ಯಾಶ್ರಮ ಟ್ರಸ್ಟ್ ಶಿವಮೊಗ್ಗ ಈ ಹೆಸರಿಗೆ ತೆಗೆದು ಮೇಲಿನ ವಿಳಾಸಕ್ಕೆ ಕೊಡಲು ತಿಳಿಸಿದೆ. ಹೆಚ್ಚಿನ ವಿವರಕ್ಕೆ 9845560531, 9035937423, 9964147353, 9449400925 ಸಂಪರ್ಕಿಸಿ



ಇಂತಿ ತಮ್ಮ ಸೇವೆಯಲ್ಲಿ ಸಂತೋಷವನ್ನು ಕಾಣುವ
**ವೆಂಕಟರಮಣ,** ದಾವಣಿಬೈಲು



ಜನವರಿ 2014
ಸಂಪುಟ 15 ಸಂಚಿಕೆ 01

# ವಿವೇಕಪ್ರಭ

## 'ಕ್ರಿಯಾರೂಪಿ ವಿವೇಕಾನಂದ' – ವಿಶೇಷ ಸಂಚಿಕೆ



## ರಾಮಕೃಷ್ಣ ಶಾರದಾ ಶಕ್ತಿ ಕೇಂದ್ರ (ರಿ)

#. 1436, ಕಾಳಿ ಮಂದಿರ ರಸ್ತೆ, ಚಂದ್ರಾ ಬಡಾವಣೆ,
ಬೆಂಗಳೂರು – 560 020. ದೂರವಾಣಿ : 080–23399431



# ಮಹಾಕಾಳೀ ಉತ್ಸವ - 2014

**7–2–2014 ರಿಂದ 9–2–2014**

**ಶ್ರೀಶಾರದಾದೇವಿ ಸ್ಮರಣೋತ್ಸವ, 7–2–2014 ಶುಕ್ರವಾರ:** ಬೆಳಿಗ್ಗೆ 8–00 ರಿಂದ ಮಧ್ಯಾಹ್ನ 12–30ರವರೆಗೆ, ಶ್ರೀ **ಗಣಪತಿ ಹೋಮ ಹಾಗೂ ಶ್ರೀ ಚಂಡೀ ಹೋಮ.** ಸಂಜೆ 6–30ಕ್ಕೆ ಸಾಂಸ್ಕೃತಿಕ ಕಾರ್ಯಕ್ರಮ : **'ಏಗ್ದಾಗೆಲ್ಲಾ ಐತೆ' – ಬೆಳಗೆರೆ ಶ್ರೀ ಕೃಷ್ಣಶಾಸ್ತ್ರಿಗಳ ಮೂಲ ಕಥೆ ಆಧಾರಿತ ನಾಟಕ** ; ರಂಗರೂಪ ಹಾಗೂ ನಿರ್ದೇಶನ : ಕೊರ್ಗಿ ಶಂಕರನಾರಾಯಣ ಉಪಾಧ್ಯಾಯ ಹಾಗೂ ವೃಂದದವರು.

**ಸ್ವಾಮಿ ವಿವೇಕಾನಂದರ ಸ್ಮರಣೋತ್ಸವ, 8–2–2014 ಶನಿವಾರ:** ಬೆಳಿಗ್ಗೆ 10–00 ರಿಂದ 11–00 **'ಸ್ವಾಮಿ ವಿವೇಕಾನಂದರ ವೀರವಾಣಿ'** ಆಯ್ದ ಪ್ರೌಢಶಾಲೆಯ ವಿದ್ಯಾರ್ಥಿಗಳಿಂದ, **ಆಯೋಜಕರು** : ರಾಷ್ಟ್ರಶಕ್ತಿ ಕೇಂದ್ರ (ರಿ.), ಬೆಂಗಳೂರು, 11–00 ರಿಂದ 12–00 : **ಉಪನ್ಯಾಸ:** ಶ್ರೀ ಕೃಷ್ಣ ಉಪಾಧ್ಯಾಯ, ಸುಳ್ಯ. ಖ್ಯಾತ ವಾಗ್ಮಿಗಳು. **ವಿಷಯ** : ಸ್ವಾಮಿಜೀಯ ರಾಷ್ಟ್ರಪ್ರೇಮ, 12–00 ರಿಂದ **ಅಶೀರ್ವಚನ ಹಾಗೂ ಅಧ್ಯಕ್ಷೀಯ ಭಾಷಣ:** ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು, ಅಧ್ಯಕ್ಷರು, ಬೇಲಿಮಠ ಮಹಾಸಂಸ್ಥಾನ, ಬೆಂಗಳೂರು; ಸಂಜೆ 6–45 ಕ್ಕೆ ಸಾಂಸ್ಕೃತಿಕ ಕಾರ್ಯಕ್ರಮ: **'ಹರಿದಾಸ ಭಕ್ತಿ ಭಜನಾ ಸತ್ಸಂಗ'** ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲೆಯ ಶ್ರೀ ಸಚ್ಚಿದಾನಂದ ವಿಠಲದಾಸ, ಶ್ರೀ ಎಸ್. ಆರ್. ರಮೇಶ್ ಹಾಗೂ ವೃಂದದವರಿಂದ.

**ಭಗವಾನ್ ಶ್ರೀ ರಾಮಕೃಷ್ಣ ಸ್ಮರಣೋತ್ಸವ, 9–12–2014 ಭಾನುವಾರ:** ಬೆಳಗ್ಗೆ 10–00 ರಿಂದ 11–15 **ಭಜನಾಮೃತ,** ವಿವೇಕಹಂಸ ಬಳಗ, ಬೆಂಗಳೂರು ಇವರಿಂದ. 11–15 ರಿಂದ 12–15 **ಉಪನ್ಯಾಸ :** ವಚನವೇದದಲ್ಲಿ ಪ್ರಹಸನಗಳು, ಸ್ವಾಮಿ ಯುಕ್ತೇಶಾನಂದಜಿ, ರಾಮಕೃಷ್ಣ ಶಾರದಾಶ್ರಮ, ಪೊನ್ನಂಪೇಟೆ ಇವರಿಂದ. 12–15: **ಆಶೀರ್ವಚನ ಹಾಗೂ ಅಧ್ಯಕ್ಷರಿಂದ ಭಾಷಣ :** ಸ್ವಾಮಿ ಮಹೇಶಾತ್ಮಾನಂದಜಿ, ಮುಖ್ಯಸ್ಥರು, ರಾಮಕೃಷ್ಣ ನೈತಿಕ ಹಾಗೂ ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ, ಮೈಸೂರು; ಸಂಜೆ 6–45 ರಿಂದ 9–00 ರವರೆಗೆ, **'ಲಯ–ಲಹರಿ ತಾಳವಾದ್ಯ'** – ಲಯಕಲಾಪ್ರತಿಭಾಮಣಿ ವಿದ್ವಾನ್ ಶ್ರೀ ಆನೂರು ಅನಂತ ಕೃಷ್ಣಶರ್ಮ ಇವರ ನೇತೃತ್ವದಲ್ಲಿ.



# ವಿವೇಕ ಸ್ಮೃತಿ



-೧-

ಸತ್ಯಲೋಕದಲಿ ಪದ್ಮಪೀಠದಲಿ
ಧ್ಯಾನಲೀನನಿರೆ ಬ್ರಹ್ಮ ;
ದಿವ್ಯದೃಷ್ಟಿಯಿಂ ನವ್ಯಸೃಷ್ಟಿಯಂ
ಗೈವ ಚಿಂತನೆಯ ಕರ್ಮ.
ಮಹಿಮ ಹಿಮಗಿರಿಯ ಗಹನ ಗಹ್ವರದಿ
ದನಿಯು ಮಾರ್ದನಿಸಿ ಬಂತು;
ವೇದಮಾತೆಯರು ರೋದಿಸುತ್ತಿಹರು
ಕರ್ಣಕುಹರ ಕೀಲಿಸಿತು;
"ಕರ್ಮ ಬಿಟ್ಟಿತೋ ಧರ್ಮ ಕೆಟ್ಟಿತೋ
ದೇವರಿಳಿದ ನೆಲದಲ್ಲಿ.
ಭೂತನರ್ತನವು ಪ್ರೇತವರ್ತನವು
ರಕ್ತಬೀಜ ಕುಲವಿಲ್ಲಿ !
ಸಾಮಗಾನದಲಿ ಸೋಮಪಾನದಲಿ
ಹಿಗ್ಗಿಬಾಳ್ದ ಜೀವನದಿ,
ಅಡಿಮೆ ಆತ್ಮನಿಗೆ ದುಡಿಮೆ ದೀನತೆಗೆ
ಬತ್ತಿತಯ್ಯೊ ಜೀವ ನದಿ !
'ಯ ಏಷ ಸುಪ್ತೇಷು ಜಾಗರ್ತಿ
ಕಾಮಂ ಕಾಮಂ ಪುರುಷೋ
ನಿರ್ಮಿಮಾಣಃ
ತದೇವ ಶುಕ್ರಂ ತದ್ ಬ್ರಹ್ಮ
ತದೇವಾಮೃತಮುಚ್ಯತೇ
ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ
ತದು ನಾತ್ಯೇತಿ ಕಶ್ಚನ ಏತದ್ ವೈ ತತ್'
–ಇತಿ ಶ್ರುತಿಯ ಘೋಷದಲಿ
ಸಾವಿತ್ರಿ ಗಾಯತ್ರಿ
ಪುತ್ರಿಯರು ರೋದಿಸಿ
ಪಿತಾಮಹಂ ಕೇಳ್ದು
ಪಾಪಲೇಪದಲಿ ತಾಪಿಸಿತೆ ಪುಣ್ಯಧರಿತ್ರಿ!
ಅಭಯ ಶಿಶುವಂ ರೂಪಿಸಿದ
ಮುದವ ತಾಳ್ದು
ಅಷ್ಟ ವಸುಗಳ ಭಾಗ್ಯ ಸಪ್ತರ್ಷಿಗಳ ತಪಸು
ನಾರದನ ತುಂಬುರನ ಗಾನಶಕ್ತಿ.
ಚಂದ್ರಮೆ ಕಲಾಪುಂಜ
ರವಿರಾಜ ತೇಜಸ್ಸು
ರಮೆಯ ರೂಪವು
ಶಾರದೆಯ ವಚೋಯುಕ್ತಿ.
ಮೂರುಲೋಕಗಳ ಸರ್ವಸ್ವಗಳ ಸಾರಗಳ
ಸಂಗ್ರಹಿಸಿ ಚಿತ್ರಿಸಿದ ಮೂರ್ತಿಯಿಂತು;
ನೂರು ವರ್ಷಗಳ
ಹಿಂದಿನ ಕಾಲ, ಬಂಗಾಳ
ಭುವನೇಶ್ವರಿಯ ಗರ್ಭಕಿಳಿದು ಬಂತು.
"ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ,
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಂ"

-೨-

ದಕ್ಷಿಣೇಶ್ವರದಿ ಪರಮಹಂಸನಿಹ
ರಾಮಕೃಷ್ಣ ಗುರುವರ್ಯ;
ಕಾಳಿ ಕರುಣೆಯನು ಉಂಡು ಮೈಗೊಂಡು
ಕಂಡು ದೇವ ಹಿತಕಾರ್ಯ.
ಅರಸುತಿದ್ದನೋ ಹರಸುತಿದ್ದನೋ
ತಾಯಿ ಮಗುವನೆಂತಂತೆ;
ಗುರುವೆ ! ನಿನ್ನಡಿಗೆ ಬರುವೆನೆಂದನು
ಯುವ ನರೇಂದ್ರಗೀ ಚಿಂತೆ
"ಯೇಯಂ ಪ್ರೇತೇ ವಿಚಿಕಿತ್ಸೇ ಮನುಷ್ಯೇ
ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ
ಏತದ್ ವಿದ್ಯಾಮನುಶಿಷ್ಟಸ್ತ್ವಯಾಹಂ"
ಹಿಂದೆ ಯಮನಿಂದೆ ಪಡೆದ ವರದಿಂದೆ
ಪ್ರೀತಿ ನಚಿಕೇತನೆಂತು;
ಪರಮಹಂಸ ಗುರು ಪಾದಕಮಲ ಮಧು
ಭ್ರಮರನಾದನವನಂತು.
ಗಿರಿಯನೇರಿದನು ಸಿಂಹಧೈರ್ಯದಲಿ
ಭೀರುಹೃದಯ ಬೆರಗಾಗೆ !
ಕಡಲ ದಾಂಟಿದನು ವಜ್ರವೀರ್ಯದಲಿ
ಗರುಡ ಪವನಜರ ಹಾಗೆ.
ಧೀರರಾಗಿ, ಮನ ಶ್ರದ್ಧೆಯಲಿ ಸಾಗಿ
ನುಗ್ಗಿ ಹೋಗಿ ಜಯ ಮುಂದೆ ;
ಮಾನವನ ಶಕ್ತಿ ದೇವರಲಿ ಭಕ್ತಿ
ಕೂಡಿ ಮುಕ್ತಿ ನಿಜವೆಂದೆ.
ಅಂಜದಡಿಯನಿಡು, ಹೆದರಿ ಪಾಪ ಬಿಡು,
ನೋಡು ಮುಂದಿಹುದು ಲಕ್ಷ್ಯ.
ದೇವತ್ವದಂಶ ಮಾನವನ ವಂಶ
ಸೋಹಮ್ಮಿಗುದುವೆ ಭಾಷ್ಯ.
"ಉತ್ತಿಷ್ಠತ ಜಾಗ್ರತ ಪ್ರಾಪ್ಯ
ವರಾನ್ ನಿಬೋಧತ
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ
ದುರ್ಗಂ ಪಥಃ..."
– ಇದು ಯುಗಯುಗದವಾಣಿ,
ಶ್ರೀ ವಿವೇಕಾನಂದ
ಗುರುಘೋಷಿಸಿದ ಚಿರನವೀನ ತತ್ವ ;
ವೇದ ವೇದಾಂತ ಸಿದ್ಧಾಂತ,
ಋಷಿಗೀರ್ವಾಣಿ
ಭಾರತ ನವೋದಯದ ವಿಜಯ ಸತ್ವ

-೩-

ಬಂಗಾರದ ಬಂಗಾಳದಿ
ಜಾಜ್ವಲಿಸಿದ ಜ್ಯೋತಿ ;
ಮೂಡಲು ಪಡುವಲು ಹಚ್ಚಿತು
ರವಿಚಂದ್ರಮ ಕಾಂತಿ.
ಈ ಬೆಳಕನು ಹೊಂಬೆಳಕನು
ಕಂಡುಂಡವರಾವು ;
ಶತಗಾನದ ಸ್ಮೃತಿಗಾನದಿ
ಕವಿಕಾಣ್ಕೆಯ ಹೂವು.
ದೀನರು ದಲಿತ ದರಿದ್ರರು
ದೇವರದೇ ರೂಪು ;
ತಳಿರೇ ಹೂವೇ ಹಣ್ಣೇ
ಅರ್ಪಿಸಲದೆ ಸಾಕು.
ಮೇಲುಂಟೇ? ಕೀಳುಂಟೇ!
ಹರಿಲೀಲಾರಂಗ ;
ಪರ್ದೆರೆಯೇ ಕಿರುದೆರೆಯೆ ?
ಸುರಸಿಂಧು ತರಂಗ
ಕರಿಜನರದು ಬಿಳಿಜನರದು
ಕೆನ್ನೆತ್ತರು ಒಂದು;
ಒಂದೇ ಜಗ ಒಂದೇ ಜನ
ಪರಮಾತ್ಮನ ಬಿಂದು.
ಅಧ್ಯಾತ್ಮವ ತಾರ್ಕಿಕದಲಿ
ಬಿಂಬಿಸಿದ್ಯೆ ಗುರುವೆ !
ಶಿಲೆಯೆಡೆಯಲಿ ಹೊನ್ನಿನ ಹುಡಿ
ತುಂಬಿಸಿ ತೋರಿರುವೆ.
"ಜಾಗ್ರತ್ ಸ್ವಪ್ನ ಸುಷುಪ್ತಿಷು ಸ್ಫುಟತರಾ
ಸಂವಿದುಜ್ಜೃಂಭತೇ
ಯಾ ಬ್ರಹ್ಮಾದಿ ಪಿಪೀಲಿಕಾಂತತನುಷು
ಪ್ರೋತಾ ಜಗತ್ ಸಾಕ್ಷಿಣೀ
ಸೈವಾಹಂ ನ ಚ ದೃಶ್ಯವಸ್ತ್ವಿತಿ
ದೃಢಪ್ರಜ್ಞಾಪಿ ಯಸ್ಯಾಸ್ತಿ ಚೇತ್
ಚಾಂಡಾಲೋಽಸ್ತು ಸ ತು ದ್ವಿಜೋಽಸ್ತು
ಗುರುರಿತ್ಯೇಷಾ ಮನೀಷಾ ಮಮ"
ಬಾಳೆಲ್ಲವು ಬೆಳಕಾಯಿತು
ರವಿತೇಜನ ಕಿರಣ ;
ಲೋಕದಿ ನಾಕವು ನಲಿಯಿತು
ಯತಿರಾಜನ ಕರುಣ
ಎದೆಯೆದೆಯೂ ಗಂಡೆದೆಯೆನೆ
ಭೀರುತೆ ಬೆದರಿತ್ತು ;

ಜನಜನವೂ ಭೀಮಾರ್ಜುನ
ಪಾರುತ ಮಸಗಿತ್ತು.
ಪಾಷಾಣದಿ ಪೂವರಳಿತು
ನಿನ್ನಮೃತ ಸ್ಪರ್ಶ ;
ಮೂರ್ಖತೆ ವಿನಯವನಪ್ಪಿತು
ಜಯ ಸತ್ಯಕೆ ಹರ್ಷ.
ನೀ ಹಚ್ಚಿದ ಬೆಂಕಿಯ ಕಿಡಿ
ಸ್ವಾತಂತ್ರ್ಯಜ್ವಾಲೆ ;
ನೀ ಬಿಚ್ಚಿದ ನಾಡಿನಾ ಗುಡಿ
ಬಾನೆತ್ತರ ಲೀಲೆ.
ಹೊರಹೊರಗೆಯ ಹಿರಿಹಿಗ್ಗುತ
ಪ್ರೇಯವಮೆಚ್ಚಿಹೆವು ;

ಒಳ ಒಳಗೆಯು ಕೊಳೆ ತುಂಬುತ
ಶ್ರೇಯವ ಮುಚ್ಚಿಹೆವು !
"ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಂ
ತತ್ತ್ವಂ ಪೂಷನ್ನಪಾವೃಣು
ಸತ್ಯಧರ್ಮಾಯ ದೃಷ್ಟಯೇ"
ಶತಮಾನದ ಸ್ಮೃತಿಗಾನದಿ
ಮುನಿವರ್ಯನ ಕರೆವೆ ;
ಎನ್ನಾತ್ಮಕೆ ನಿನ್ನಾತ್ಮದ
ಪುಣ್ಯವನೆರೆ ಗುರುವೆ !
ಬಿದ್ದಿಹೆ ತಳಪಾತಾಳಕೆ
ಉದ್ಧರಿಸೆನ್ನೊಡೆಯ,

ನೋವಿಲ್ಲದ ಸಾವಿಲ್ಲದ
ಜೀವಾಮೃತವೆರೆಯ !
ಶರಣಂ ಶ್ರೀಚರಣಂ
ಶ್ರೀಹರಿಹರ ಬ್ರಹ್ಮಾದ್ಯರಿಗೆ,
ಶರಣಂ ಗುರುಚರಣಂ
ಶ್ರೀರಾಮಕೃಷ್ಣಯತಿಪತಿಗೆ
ಶರಣಂ ಶುಭಚರಣಂ
ಶ್ರೀಶಾಶ್ವತವಿಶ್ರುತ ಕೀರ್ತಿಗೆ
ಶರಣಂ ಶತಶರಣಂ
ಶ್ರೀಶತಮಾನದ ಸನ್ಮತಿಗೆ.

– ಕೈಯ್ಯಾರ ಕಿಞ್ಞಣ್ಣ ರೈ

## ಹೊಸ ವರ್ಷದ ಹಾರ್ದಿಕ ಅಭಿನಂದನೆಗಳು

2014

ಮಾನ್ಯರೇ, ನಿಮಗೆಲ್ಲರಿಗೂ ನೂತನ ವರ್ಷದ ಹಾರ್ದಿಕ ಶುಭಾಶಯಗಳು.

'ವಿವೇಕಪ್ರಭ' ಪತ್ರಿಕೆಯು ತನ್ನ 14 ವರ್ಷಗಳ ಸೇವೆಯನ್ನು ಸುಸಂಪನ್ನಗೊಳಿಸಿ, 15ನೇ ವರ್ಷಕ್ಕೆ ಪದಾರ್ಪಣ ಮಾಡುತ್ತಿರುವ ಈ ಶುಭಗಳಿಗೆಯಲ್ಲಿ, ಆತ್ಮೀಯ ಚಂದಾದಾರರಾದ ನಿಮಗೆಲ್ಲರಿಗೂ, ನಿಮ್ಮ ಸಹಕಾರ ಮತ್ತು ಪ್ರೋತ್ಸಾಹಗಳಿಗಾಗಿ ಹಾರ್ದಿಕ ಧನ್ಯವಾದಗಳು.

ಈ ವರ್ಷ ಸ್ವಾಮಿ ವಿವೇಕಾನಂದರ 150ನೇ ಜಯಂತಿ ಮಹೋತ್ಸವವನ್ನು ವಿಶ್ವಾದ್ಯಂತ ಆಚರಿಸಲಾಗುತ್ತಿದೆ. ವಿಶ್ವಮಾನವ ವಿವೇಕಾನಂದರಿಗೆ 'ವಿವೇಕಪ್ರಭ'ವು ತನ್ನದೇ ಆದ ವಿಶಿಷ್ಟರೀತಿಯಲ್ಲಿ ಭಾವಪೂರ್ಣ ಶ್ರದ್ಧಾಂಜಲಿಯನ್ನು ಸಮರ್ಪಿಸುತ್ತಿದೆ. ಈಗ ನಿಮ್ಮ ಕೈಯಲ್ಲಿರುವ 'ಕ್ರಿಯಾರೂಪಿ ವಿವೇಕಾನಂದ' ವಿಶೇಷ ಸಂಚಿಕೆಯು ಆ ಮಹಾಚೇತನದ ಅಡಿದಾವರೆಯಲ್ಲಿ, ವಿವೇಕಪ್ರಭವು ಅರ್ಪಿಸುತ್ತಿರುವ ಭಕ್ತಿಮಾಧುರ್ಯದಿಂದ ತುಂಬಿರುವ ವಾಙ್ಮಯಪುಷ್ಪವಾಗಿದೆ.

ಈ ಸಂದರ್ಭದಲ್ಲಿ, ನಮಗೆ ಎಲ್ಲ ರೀತಿಯಲ್ಲಿಯೂ ಸಹಕರಿಸುತ್ತಿರುವ ನಮ್ಮ ಸಂಪಾದಕ ಮಂಡಲಿಯ ಸದಸ್ಯರಿಗೆ, ನಮ್ಮೆಲ್ಲ ಲೇಖಕಬಳಗಕ್ಕೆ, ಪತ್ರಿಕೆಗೆ ಹೊಸ ಹೊಸ ಚಂದಾದಾರರನ್ನು ನಿಯಮಿತವಾಗಿ ಮಾಡಿಕೊಡುತ್ತಿರುವ ಕರ್ನಾಟಕದಾದ್ಯಂತ ಇರುವ ರಾಮಕೃಷ್ಣ ಆಶ್ರಮಗಳಿಗೆ ಮತ್ತು ಇತರ ಚಂದಾಸಂಗ್ರಾಹಕರಿಗೆ, ಕರಡುಪ್ರತಿಯನ್ನು ಪರಿಷ್ಕರಿಸಲು ಸಹಾಯ ಮಾಡುತ್ತಿರುವವರಿಗೆ, ನಮ್ಮೆಲ್ಲ ಜಾಹೀರಾತುದಾರರಿಗೆ, ವಿವೇಕಪ್ರಭ ಪತ್ರಿಕೆಯ ಮುದ್ರಣಕಾರರಾದ ಬೆಂಗಳೂರಿನ 'ಮಯೂರ್ ಗ್ರಾಫಿಕ್ಸ್' ನ ಮಾಲೀಕರಾದ ಶ್ರೀ ಪಾರ್ಥಸಾರಥಿ ಅವರಿಗೆ, ನಮ್ಮ ಕಾರ್ಯಾಲಯದ ಸಿಬ್ಬಂದಿಗೆ ಸಹಕರಿಸುತ್ತಿರುವ ಹಲವಾರು ಸ್ವಯಂಸೇವಕರಿಗೆ, ಪ್ರತಿ ತಿಂಗಳೂ ಪತ್ರಿಕೆಯ ಪ್ರತಿಗಳನ್ನು ರವಾನಿಸುತ್ತಿರುವ ಮೈಸೂರು ಯಾದವಗಿರಿ ಅಂಚೆಕಛೇರಿಯ ಸಿಬ್ಬಂದಿಗೆ ಮತ್ತು ವಿವೇಕಪ್ರಭ ಪತ್ರಿಕೆಯ ಪ್ರಕಟನೆಯಲ್ಲಿ ಹಲವಾರು ರೀತಿಯಲ್ಲಿ ಪರೋಕ್ಷವಾಗಿ ಮತ್ತು ಅಪರೋಕ್ಷವಾಗಿ ಸೇವೆ ಸಲ್ಲಿಸುತ್ತಿರುವ ಎಲ್ಲ ಸ್ನೇಹಿತರಿಗೂ ಈ ಮೂಲಕ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತಿದ್ದೇವೆ.

ಈ ಸಂತಸದ ಸಂದರ್ಭದಲ್ಲಿ, ಪತ್ರಿಕೆಯ ಉತ್ತರೋತ್ತರ ಅಭಿವೃದ್ಧಿಗೆ ಮತ್ತು ಚಂದಾದಾರರ ಹೆಚ್ಚಳಕ್ಕಾಗಿ ಮುಂದೆಯೂ ನಮಗೆ ಸಹಕಾರ ನೀಡಬೇಕೆಂದು ಹಿತೈಷಿ ಓದುಗರಾದ ತಮಗೆಲ್ಲರಿಗೂ ಕೇಳಿಕೊಳ್ಳುತ್ತೇವೆ.

ಇಂತಿ ಭಗವತ್ಸೇವೆಯಲ್ಲಿ ತಮ್ಮವ
ಸ್ವಾಮಿ ಮುಕ್ತಿದಾನಂದ
ವ್ಯವಸ್ಥಾಪಕ ಸಂಪಾದಕರು

## ವಿವೇಕಪ್ರಭ ಪತ್ರಿಕೆಯ ಪೋಷಕರು

| | | | |
|---|---|---|---|
| ಶ್ರೀ ನಾಗರಾಜು ಕೆ.ಎಸ್. | ಮೈಸೂರು | ಶ್ರೀ ಮುಕುಂದ ಪೈ | ಮಂಗಳೂರು |
| ಶ್ರೀ ಶುಭಕರ ವಿ. | ಮೈಸೂರು | ಶ್ರೀ ಮಹೇಂದ್ರ ವಿ. | ಬೆಂಗಳೂರು |
| ಶ್ರೀ ಮುನಿ ನಾರಾಯಣಪ್ಪ ಎಂ. | ಬೆಂಗಳೂರು | ಶ್ರೀ ಮುಖ್ಯಪ್ರಾಣ ಉಪಾಧ್ಯಾಯ | ಕುಕುಂದೂರು |
| ಶ್ರೀ ರಂಗೇಗೌಡ ಬಿ. | ಪಾವಗಡ | ಶ್ರೀಮತಿ ಸಾವಿತ್ರಿ ಎಂ.ಎಸ್. | ಮೈಸೂರು |
| ಶ್ರೀ ಆನಂದ್ ಬಿ.ಎನ್. | ಬೆಂಗಳೂರು | ಶ್ರೀಮತಿ ಕವಿತಾ ಲಕ್ಷ್ಮೀನಾರಾಯಣ | ಬಳ್ಳಾರಿ |
| ಶ್ರೀ ನಟೇಶ್ ಬಿ.ಎಸ್. | ಬೆಂಗಳೂರು | ಶ್ರೀಮತಿ ಲತಾ ರಂಗನಾಥ್ | ಮೈಸೂರು |
| ಶ್ರೀ ಚಂದ್ರಶೇಖರಯ್ಯ ಕೆ.ಎನ್. | ಬೆಂಗಳೂರು | ಕ್ಯಾಪ್ಟನ್ ಪಂಡಪ್ಪ | ಬೆಂಗಳೂರು |
| ಶ್ರೀ ಚಂದನ್ ಹೆಚ್. ಡಿ. | ತುಮಕೂರು | ಪ್ರೊ. ಗೋಪಾಲಕೃಷ್ಣ ಟ್ರೇಡರ್ಸ್ | ಬೆಂಗಳೂರು |
| ಶ್ರೀ ಕೃಷ್ಣಮೂರ್ತಿ ಎಂ. ಆರ್. | ಬೆಂಗಳೂರು | ಶ್ರೀನಾಗ್ ಬಿ.ಎಸ್. | ಬೆಂಗಳೂರು |
| ಶ್ರೀ ಲೋಕೇಶ್ ಎನ್. | ಮೈಸೂರು | ಶ್ರೀಮತಿ ನಾಗರತ್ನಮ್ಮ ಬಿ.ಎಸ್. | ಬೆಂಗಳೂರು |
| ಶ್ರೀ ಮಂಜುನಾಥ ಡಿ.ಎಸ್. | ದೊಂಬರನಹಳ್ಳಿ | | |

# ‘ಶಿವಜ್ಞಾನೇ ಜೀವಸೇವಾ’ ಎಂಬ ಆಧುನಿಕ ಮಹಾವಾಕ್ಯ

**ಸಂದರ್ಭ:** ೧೮೮೪ನೇ ಇಸವಿಯ ಒಂದು ದಿನ. ಶ್ರೀರಾಮಕೃಷ್ಣರು ವೈಷ್ಣವ ಮತದ ಸಾರಾಂಶವನ್ನು ಭಕ್ತರಿಗೆ ವಿವರಿಸುತ್ತಿದ್ದರು. ಈ ಸಂದರ್ಭದಲ್ಲಿ ಅವರು ಹೀಗೆ ಹೇಳಿದರು: “ಈ ಧರ್ಮವು ತನ್ನ ಅನುಯಾಯಿಗಳಿಗೆ ಮೂರು ಮುಖ್ಯವಾದ ಸಾಧನೆಗಳನ್ನು ಶ್ರದ್ಧೆಯಿಂದ ಪಾಲಿಸಬೇಕೆಂದು ಸೂಚಿಸುತ್ತದೆ. ಅವೆಂದರೆ, ‘ಭಗವಂತನ ನಾಮದಲ್ಲಿ ಪ್ರೀತಿ’, ‘ಎಲ್ಲ ಜೀವರಾಶಿಗಳ ಮೇಲೆಯೂ ದಯೆ’ ಮತ್ತು ‘ಭಕ್ತರ ಸೇವೆ’... ಇಡೀ ಜಗತ್ತು ಶ್ರೀಕೃಷ್ಣನಿಗೆ ಸೇರಿದ್ದೆಂದು ತಿಳಿದುಕೊಂಡು, ಭಕ್ತನು ಎಲ್ಲ ಜೀವಿಗಳ ಮೇಲೆಯೂ ದಯೆಯನ್ನು ತೋರಬೇಕು.” ‘ಎಲ್ಲ ಜೀವಿಗಳ ಮೇಲೆ ದಯೆ’ ಎಂದು ಹೇಳುತ್ತಿದ್ದಂತೆಯೇ, ಶ್ರೀರಾಮಕೃಷ್ಣರು ಹಠಾತ್ತನೆ ಸಮಾಧಿ ನೆಲೆಗೆ ಏರಿನಿಂತರು. ಸ್ವಲ್ಪಕಾಲದ ನಂತರ, ಅವರು ಅರ್ಧಭಾವಾವಸ್ಥೆಗೆ ಇಳಿದುಬಂದು ಹೀಗೆ ನುಡಿದರು: “ಎಲ್ಲ ಜೀವಿಗಳ ಮೇಲೆ ದಯೆಯೇ? ದಯೆಯ ಬಗ್ಗೆ ಮಾತನಾಡುವುದು ಎಷ್ಟು ಮೂರ್ಖತನದ್ದು! ಮಾನವ ಜೀವಿಗಳು ನೆಲದ ಮೇಲೆ ಸರಿದಾಡುವ ಕೀಟಗಳಷ್ಟೇ ಕ್ಷುಲ್ಲಕರಾದವರು. ಹೀಗಿರುವಾಗ ಅವರು, ಇತರರಿಗೆ ದಯೆಯನ್ನು ತೋರುವುದು! ಇದು ಅಬದ್ಧವಾದುದು! ಇದು ದಯೆಯಾಗಿರಲು ಸಾಧ್ಯವಿಲ್ಲ, ಎಲ್ಲರಿಗೂ ಮಾಡುವ ಸೇವೆಯಾಗಿರಬೇಕು. ಎಲ್ಲರನ್ನೂ ಭಗವಂತನ ಅಭಿವ್ಯಕ್ತಿಗಳೆಂದೇ ಗುರುತಿಸಿ, ಅವರನ್ನು ಆ ಭಾವದಲ್ಲಿಯೇ ಸೇವೆ ಮಾಡಿ.” ಕಡೆಯ ಮಾತಿನ ಭಾವವನ್ನು ಮೂಡಿಸಲು ಶ್ರೀರಾಮಕೃಷ್ಣರು ಬಂಗಾಳಿಯಲ್ಲಿ ಉಪಯೋಗಿಸಿದ ಮಾತೇ **‘ಶಿವಜ್ಞಾನೇ ಜೀವಸೇವಾ’** ಎನ್ನುವ ಆಧುನಿಕ ಮಹಾವಾಕ್ಯ.

**ಸ್ವಾಮಿ ವಿವೇಕಾನಂದರ ವಿವರಣೆ :** ನೆರೆದಿದ್ದ ಭಕ್ತರ ಮಧ್ಯೆ ನರೇಂದ್ರನೂ ಇದ್ದನು. ಗುರುದೇವರ ದೂರದೃಷ್ಟಿಯುಳ್ಳ ಮಾತುಗಳಲ್ಲಿನ ಗಹನತೆಯನ್ನು ಆ ಗುಂಪಿನಲ್ಲಿ ಅರಿತವನು ಅವನೊಬ್ಬನೇ. ಶ್ರೀರಾಮಕೃಷ್ಣರು ಸಹಜಪ್ರಜ್ಞೆಯನ್ನು ಪಡೆದುಕೊಂಡಮೇಲೆ ಅವನು ಆ ಕೊಠಡಿಯಿಂದ ಹೊರಬಂದು, ತನ್ನ ಒಬ್ಬ ಸ್ನೇಹಿತನಿಗೆ ಹೀಗೆ ಹೇಳಿದನು: “ನಾನಿಂದು ಗುರುದೇವರ ಆ ಮಾತುಗಳಲ್ಲಿ ಎಂಥ ಅದ್ಭುತವಾದ ಬೆಳಕನ್ನು ಕಂಡುಕೊಂಡೆ, ಗೊತ್ತೇನು! ಸರಳ, ಮಧುರ ಮತ್ತು ಉಲ್ಲಾಸಕರವಾದ ಭಕ್ತಿಯ ಆದರ್ಶವನ್ನು ಎಷ್ಟು ಸುಂದರವಾಗಿ ಅವರು ವೇದಾಂತದ ಜ್ಞಾನದೊಂದಿಗೆ ಸಾಮರಸ್ಯಗೊಳಿಸಿದರು!... ಇಂದು ಗುರುದೇವರು ತಮ್ಮ ಭಾವಸ್ಥಿತಿಯಲ್ಲಿ ನುಡಿದದ್ದು ಸ್ಪಷ್ಟವಾಗಿದೆ: ವೇದಾಂತವನ್ನು ಕಾಡಿನಿಂದ ಮನೆಗೆ ತಂದು, ಅದನ್ನು ದಿನನಿತ್ಯದ ಬಾಳಿನಲ್ಲಿ ಅನುಷ್ಠಾನಗೊಳಿಸಬೇಕು. ಎಲ್ಲ ಜೀವರನ್ನೂ ಭಗವಂತನೆಂದೇ ಸೇವೆಮಾಡಿದಾಗ ಜನರು ಪರಿಶುದ್ಧಗೊಳ್ಳುತ್ತಾರೆ. ಮತ್ತು ಬಹಳ ಬೇಗನೆ, ತಾವು ಆನಂದಮಯ ಪರಮಾತ್ಮನ ಅಂಶಗಳೆಂಬ ಅನುಭವವನ್ನು ಪಡೆದುಕೊಳ್ಳುತ್ತಾರೆ.”

ಶ್ರೀರಾಮಕೃಷ್ಣರ ನುಡಿಗಳಿಗೆ ಸ್ವಾಮಿ ವಿವೇಕಾನಂದರು ನೀಡಿದ ವಿವರಣೆಯು ಅತ್ಯಂತ ಮಹತ್ವದ್ದು. ಏಕೆಂದರೆ, ಅವರು ಮುಂದೆ ವೇದಾಂತವನ್ನು ಅನುಷ್ಠಾನ ಧರ್ಮವೆಂದು ಪ್ರಸ್ತುತಪಡಿಸಿದ್ದಕ್ಕೆ ಇದೇ ಆಧಾರವಾಗಿದೆ. ಸ್ವಾಮೀಜಿಯ ಪ್ರಕಾರ, ಇದುವರೆಗೂ ಲೌಕಿಕ ಜಗತ್ತಿಗೆ ವಿಮುಖವಾಗಿರುವುದೂ ಹಾಗೂ ಮಾನವೀಯ ಸಂವೇದನೆಗಳಿಗೆ ಅವಕಾಶವೇ ಇಲ್ಲದ್ದೂ ಎಂದು ಪರಿಗಣಿಸಲ್ಪಟ್ಟ ವೇದಾಂತ ಜ್ಞಾನಕ್ಕೆ, ಶ್ರೀರಾಮಕೃಷ್ಣರು ಹೊಸದೊಂದು ದೃಷ್ಟಿಕೋನವನ್ನೇ ನೀಡಿದ್ದಾರೆ. ಇತರರ ಸೇವೆ ಮಾಡುವುದಕ್ಕೆ ಇಚ್ಛೆಪಡುವ ಒಬ್ಬ ವ್ಯಕ್ತಿಯು ತಾನು ಇತರರಿಗಿಂತ ಶ್ರೇಷ್ಠ ಎಂಬ ಭಾವನೆಯನ್ನು ತ್ಯಜಿಸಬೇಕು; ಕೋಪ, ದ್ವೇಷ ಮತ್ತು ಅಹಂಕಾರಗಳನ್ನು ಬಿಟ್ಟುಬಿಡಬೇಕು. ಅದಲ್ಲದೇ ತನ್ನ ಮನಸ್ಸಿನಲ್ಲಿ ಮೂಡಿಬರಬಹುದಾದ ‘ದಯೆಯ ಭಾವನೆ’ಯಿಂದ ಕೂಡ ಮುಕ್ತನಾಗಬೇಕು. ಕಳಂಕಿತ ಮನಸ್ಸೇ ಮೇಲಿನ ಎಲ್ಲ ಕ್ಷುಲ್ಲಕ ಭಾವನೆಗಳ ಆಕರವಾಗಿದೆ. ಹೀಗಾಗಿ ಎಲ್ಲ ಜೀವಿಗಳ ಸೇವೆ ಮಾಡುವುದರ ಮೂಲಕ ವ್ಯಕ್ತಿಯೊಬ್ಬನು ತನ್ನ ಚಿತ್ತಶುದ್ಧಿಯನ್ನು ಮಾಡಿಕೊಳ್ಳಲು ಪ್ರಯತ್ನಿಸಬೇಕು.

ಇದಲ್ಲದೆ, ಶ್ರೀರಾಮಕೃಷ್ಣರು ಭಕ್ತಿಮಾರ್ಗದ ಮೇಲೆ ವಿಶೇಷ ಬೆಳಕನ್ನು ಬೀರಿದರು ಎಂದೂ ಸ್ವಾಮೀಜಿ ಹೇಳುತ್ತಾರೆ. ಪ್ರತಿಯೊಬ್ಬ ಜೀವಿಯಲ್ಲಿಯೂ ಭಗವಂತನನ್ನು ಕಾಣಲು ಸಾಧ್ಯವಾದಾಗ ಮಾತ್ರವೇ ಪರಾಭಕ್ತಿ ಸಿದ್ಧಿಸುವುದು. ಮುಂದೊಮ್ಮೆ ತಾವು ಕೊಲೊಂಬೋದಲ್ಲಿ ನೀಡಿದ ಭಾಷಣದಲ್ಲಿ ಅವರು ಹೀಗೆ ಅಭಿಪ್ರಾಯಪಡುತ್ತಾರೆ: “ಶಿವನನ್ನು ಲಿಂಗದಲ್ಲಿ ಮಾತ್ರ ನೋಡದೆ, ಎಲ್ಲೆಡೆಯಲ್ಲಿಯೂ, ಎಲ್ಲರಲ್ಲಿಯೂ ಅವನನ್ನು ನೋಡಿದಾಗ ಮಾತ್ರವೇ ನಿಮ್ಮ ಶಿವಭಕ್ತಿ ಪರಿಪೂರ್ಣವಾಗುತ್ತದೆ. ಎಲ್ಲೆಲ್ಲಿಯೂ ಯಾರು ಹರಿಯನ್ನು ನೋಡಬಲ್ಲನೋ, ಆತನೇ ನಿಜವಾದ ಹರಿಭಕ್ತ. ನೀವು ನಿಜವಾದ ಶಿವಭಕ್ತರಾದರೆ ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ಅವನನ್ನೇ ನೋಡಬೇಕು” (ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೩, ಪುಟ ೧೧).

ಗುರುದೇವರ ವಾಣಿಗಳು ಕರ್ಮಯೋಗ ಮತ್ತು ರಾಜಯೋಗಗಳ ಅನುಷ್ಠಾನಕ್ಕೆ ಹೊಸ ಅರ್ಥವನ್ನು ನೀಡಿದವು ಎಂದು ಸ್ವಾಮೀಜಿ ಅಭಿಪ್ರಾಯಪಡುತ್ತಾರೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳುವಂತೆ (೩:೫), ಯಾರೊಬ್ಬನೂ ಒಂದು ಕ್ಷಣವೂ ಕರ್ಮವಿಲ್ಲದೆ ಇರಲಾರನು. ಆದ್ದರಿಂದ ಪ್ರತಿಯೊಂದು ಕಾರ್ಯವನ್ನೂ ಭಗವಂತನ ಆರಾಧನೆಯೆಂಬಂತೆ ಮಾಡಬೇಕಾದ್ದು ಎಲ್ಲರ ಕರ್ತವ್ಯವಾಗಿದೆ. ಹೀಗೆ ಮಾಡುವುದರಿಂದ ಮಾತ್ರವೇ ಅವರು ಆಧ್ಯಾತ್ಮಿಕ ಗುರಿಯನ್ನು ತಲುಪಬಲ್ಲರು.

ಮೇಲೆ ಹೇಳಿದ ಘಟನೆಯನ್ನು ಶ್ರೀರಾಮಕೃಷ್ಣರ ಬಗೆಗಿನ ಅಧಿಕೃತ ಜೀವನಚರಿತ್ರೆಯಾದ 'ಶ್ರೀರಾಮಕೃಷ್ಣ ಲೀಲಾಪ್ರಸಂಗ'ದಿಂದ ಉದ್ಧರಿಸಲಾಗಿದೆ. ಇದನ್ನು ಬರೆದವರು ಸ್ವತಃ ಶ್ರೀರಾಮಕೃಷ್ಣರ ಪ್ರತ್ಯಕ್ಷ ಶಿಷ್ಯರಾದ ಸ್ವಾಮಿ ಶಾರದಾನಂದಜಿ ಅವರು. ಈ ಪುಸ್ತಕದಲ್ಲಿ, ರಾಜಯೋಗವನ್ನು ಕುರಿತಾದ ಶ್ರೀರಾಮಕೃಷ್ಣರ ಉಕ್ತಿಗಳ ಬಗ್ಗೆ ಸ್ವಾಮೀಜಿಯವರ ಅಭಿಪ್ರಾಯವನ್ನೇನೂ ದಾಖಲಿಸಿಲ್ಲ. ಆದರೆ, ಪರೋಕ್ಷವಾಗಿ ನಾವು ಅವರ ಉದ್ದೇಶವೇನೆಂದು ಅರಿತುಕೊಳ್ಳಬಹುದು. ಧ್ಯಾನಾಭ್ಯಾಸಕ್ಕೆ ಅತ್ಯವಶ್ಯಕವಾದ ಏಕಾಗ್ರತಾ ಶಕ್ತಿಯು ಚಿತ್ತಶುದ್ಧಿಯಿಂದ ಮಾತ್ರವೇ ಸಿದ್ಧಿಸುತ್ತದೆ. ಈ ಚಿತ್ತಶುದ್ಧಿಯಾದರೋ, ಸುದೀರ್ಘವಾದ ಮತ್ತು ನಿರಂತರವಾದ ಸೇವೆಯ ಅಭ್ಯಾಸದಿಂದ ಮಾತ್ರ ಲಭಿಸುತ್ತದೆ. ಸೇವೆಯನ್ನು ನಾವು ನಮ್ಮ ಬಾಳಿನ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡಾಗ ಮಾತ್ರ ಇದು ಸಾಧ್ಯ. ಇದು ಸಾಂಪ್ರದಾಯಿಕ ವೇದಾಂತದ ಅಭಿಪ್ರಾಯಕ್ಕೆ ಪೂರಕವಾಗಿಯೇ ಇದೆ. ಏಕೆಂದರೆ, ಕರ್ಮಯೋಗವು ಚಿತ್ತಶುದ್ಧಿಗೆ ಏಕಮಾತ್ರ ಸಾಧನವೆಂದು ಅದು ಕೂಡ ಪ್ರತಿಪಾದಿಸುತ್ತದೆ.

**ಮಾನವನಲ್ಲಿರುವ ಭಗವಂತನ ಸೇವೆ :** ಸ್ವಾಮಿ ವಿವೇಕಾನಂದರು ತಮ್ಮ ಯೌವನದ ದಿನಗಳಲ್ಲಿ ವ್ಯಕ್ತಪಡಿಸಿದ ಮೇಲಿನ ಚಿಂತನೆಗಳು ಮುಂದೆ ಅವರು ನೀಡಿದ ಉಪನ್ಯಾಸಗಳು, ಪತ್ರಗಳು ಮತ್ತು ಸಂಭಾಷಣೆಗಳಲ್ಲಿ ಯುಗಪ್ರವರ್ತಕ ಭಾವನೆಗಳಾಗಿ ವಿಕಾಸಗೊಂಡಿದ್ದನ್ನು ನಾವು ಕಾಣುತ್ತೇವೆ. ಸ್ವಾಮೀಜಿ ಇಡೀ ಭಾರತ ದೇಶದ ಮುಂದೆ, ಅದರಲ್ಲೂ ತಮ್ಮ ಸಹೋದರ ಸಂನ್ಯಾಸಿಗಳ ಮುಂದೆ ಇರಿಸಿದ ಈ ಆದರ್ಶವು ನಿಜವಾಗಿಯೂ ಕ್ರಾಂತಿಕಾರಕವಾದುದು. ಆದ್ದರಿಂದಲೇ ಶ್ರೀರಾಮಕೃಷ್ಣರ ಅತಿ ನಿಕಟ ಅನುಯಾಯಿಗಳಲ್ಲಿ ಕೆಲವರಿಗೆ, ಆಧ್ಯಾತ್ಮಿಕ ಜೀವನದಲ್ಲಿ ಈ ಧ್ಯೇಯದ ಮಹತ್ವವನ್ನು ಮತ್ತು ಪ್ರಸ್ತುತತೆಯನ್ನು ಅರ್ಥಮಾಡಿಕೊಂಡು ಪ್ರಶಂಸಿಸಲು ಕಷ್ಟವೆನಿಸಿತು. ಅಂಥ ಒಬ್ಬ ವ್ಯಕ್ತಿಯೆಂದರೆ, ಶ್ರೀರಾಮಕೃಷ್ಣ ವಚನವೇದದ ಕರ್ತೃವಾದ ಮಹೇಂದ್ರನಾಥ ಗುಪ್ತ.

ಒಮ್ಮೆ ಮಾತುಕತೆಯ ಮಧ್ಯೆ ಮಹೇಂದ್ರನಾಥ ಗುಪ್ತರು ಸ್ವಾಮೀಜಿಯನ್ನು ಕೇಳಿದರು: "ನೀವು ಸೇವೆ, ದಾನ ಮತ್ತು ಲೋಕಹಿತಗಳ ಬಗ್ಗೆ ಮಾತನಾಡುತ್ತೀರಿ. ಇವೆಲ್ಲವೂ ಇರುವುದು, ಎಲ್ಲರಿಗೂ ಗೊತ್ತಿರುವಂತೆ, ಮಾಯೆಯ ಹಂದರದೊಳಗೆಯೇ. ವೇದಾಂತದ ಪ್ರಕಾರ ಮಾನವನ ಗುರಿ ಮಾಯೆಯ ಬಂಧನವನ್ನು ಕಡಿದುಹಾಕಿ ಮುಕ್ತಿಯನ್ನು ಪಡೆದುಕೊಳ್ಳುವುದಷ್ಟೇ. ಅದನ್ನು ಮಾಡದೆ, ಮನಸ್ಸನ್ನು ಲೌಕಿಕ ವ್ಯವಹಾರದಲ್ಲಿ ಸಿಲುಕಿಸುವ ಸಂಗತಿಗಳನ್ನೇಕೆ ತಾನೇ ಬೋಧಿಸಬೇಕು?" ಈ ಪ್ರಶ್ನೆಗೆ ಒಂದು ನಿಮಿಷ ಕೂಡ ಕಸಿವಿಸಿ ಹೊಂದದೆ ಸ್ವಾಮೀಜಿ ಹೀಗೆ ಉತ್ತರಿಸಿದರು: "ಹಾಗಾದರೆ ಮುಕ್ತಿಯ ಭಾವನೆ ಕೂಡ ಮಾಯೆಯ ಹಂದರದಲ್ಲಿ ಇಲ್ಲವೇನು? ಆತ್ಮವು ಯಾವತ್ತೂ ಸ್ವತಂತ್ರವೇ ಎಂದು ವೇದಾಂತ ಬೋಧಿಸುವುದಿಲ್ಲವೇನು? ಹಾಗಾದರೆ, ಮುಕ್ತಿಗಾಗಿ ಏಕೆ ತಾನೇ ಪ್ರಯತ್ನಪಡಬೇಕು, ಹೇಳಿ?"

ಸ್ವಾಮೀಜಿಯ ಈ ಗಮನಾರ್ಹವಾದ ಉತ್ತರವು, ಸೇವೆಯು ಆಧ್ಯಾತ್ಮಿಕ ಸಾಧನೆಯ ಪರಿಧಿಯ ಹೊರಗಿದೆ ಎಂದು ಭಾವಿಸುವವರಿಗೆಲ್ಲರಿಗೂ ಕಣ್ಣು ತೆರೆಸುವಂಥದ್ದು. ಹಾಗೆಯೇ ಸ್ವಾಮಿ ವಿವೇಕಾನಂದರ ಸೇವಾದರ್ಶವು ಉಪನಿಷತ್ತುಗಳು ಮತ್ತು ಭಗವದ್ಗೀತೆಯ ಆಶಯಕ್ಕೆ ಪೂರಕವಾಗಿರುವುದು ಸ್ಪಷ್ಟವಾಗಿಯೇ ಇದೆ. 'ಸೂಕ್ತವಾದ ಕರ್ಮವನ್ನು ಮಾಡುತ್ತಲೇ ಒಬ್ಬನು ನೂರು ವರ್ಷಗಳ ಕಾಲ ಬಾಳಲು ಇಚ್ಛಿಸಬೇಕು' ಎಂದು ಈಶಾವಾಸ್ಯ ಉಪನಿಷತ್ತು ಘೋಷಿಸುತ್ತದೆ. ಹಾಗೆಯೇ ಭಗವದ್ಗೀತೆ ಕೂಡ, ಜ್ಞಾನಿಯೂ ಸಹ 'ಲೋಕಸಂಗ್ರಹ' ಅಂದರೆ, ಲೋಕದ ಹಿತಕ್ಕಾಗಿ ಕೆಲಸ ಮಾಡಬೇಕೆಂದು ನಿಸ್ಸಂದೇಹವಾಗಿ ಆದೇಶವಿತ್ತಿದೆ. ಸಾಮಾನ್ಯ ಮುಮುಕ್ಷುಗಳ ವಿಷಯದಲ್ಲಿ ಭಗವದ್ಗೀತೆಯು ಕರ್ಮರಾಹಿತ್ಯವನ್ನು ಸರ್ವಥಾ ನಿಷೇಧಿಸುತ್ತದೆ. ಎಲ್ಲ ಕರ್ತವ್ಯಗಳನ್ನೂ ಭಗವಂತನ ಕಾರ್ಯದಂತೆ ಮಾಡಬೇಕೆಂದು **(ಮತ್ಕರ್ಮ)** ಅದು ಬೋಧಿಸುತ್ತದೆ. ಹಾಗೆಯೇ ಭಗವಂತನ ಪಾದ ಪದ್ಮಗಳಲ್ಲಿ ಕರ್ಮಗಳನ್ನೂ ಅದರ ಫಲಗಳನ್ನೂ ಸಮರ್ಪಣೆ ಮಾಡಿಬಿಡಲು ಪ್ರೋತ್ಸಾಹಿಸುತ್ತದೆ. ಹಾಗೆಯೇ ಭಗವದ್ಗೀತೆಯು ಅಂಥ ಕೆಲಸಗಳನ್ನು, ಭಗವಂತನೊಬ್ಬನೇ ಶ್ರೇಷ್ಠ ಆರಾಧ್ಯದೈವನೆಂದು ಬಗೆದು **(ಮತ್ಪರಮ)**, ಆತನನ್ನು ತುಷ್ಟಿಗೊಳಿಸುವ ಏಕಮಾತ್ರ ಉದ್ದೇಶದಿಂದ ಮಾಡಬೇಕೆಂದು ವಿಧಿಸುತ್ತದೆ.

**ಮಹಾವಾಕ್ಯದ ಸಾಂಪ್ರದಾಯಿಕ ವಿವರಣೆ :** ಸಾಂಪ್ರದಾಯಿಕ ವೇದಾಂತದಲ್ಲಿ ಉಪನಿಷತ್ತಿನ ಬೋಧನೆಗಳ ಸಾರಸರ್ವಸ್ವವೆಂದು ಹೇಳಲಾಗುವ ನಾಲ್ಕು ಮಹಾವಾಕ್ಯಗಳನ್ನು ಕಾಣುತ್ತೇವೆ. ಅವೆಂದರೆ, 'ಅಯಮಾತ್ಮಾ ಬ್ರಹ್ಮ', 'ಅಹಂ ಬ್ರಹ್ಮಾಸ್ಮಿ', 'ತತ್ತ್ವಮಸಿ' ಮತ್ತು 'ಪ್ರಜ್ಞಾನಂ ಬ್ರಹ್ಮ'. ಅವನ್ನು ಅಖಂಡಾರ್ಥಕ ಬೋಧಕ ವಾಕ್ಯಗಳೆಂದು ಕರೆಯುತ್ತಾರೆ. ಅಂದರೆ ಈ ವಾಕ್ಯಗಳು ಜೀವಾತ್ಮ ಮತ್ತು ಪರಮಾತ್ಮರ ಐಕ್ಯತೆಯನ್ನು ಸ್ಪಷ್ಟವಾಗಿ ಬೋಧಿಸುತ್ತವೆ. ಇದೇ ವಿಧಾನವನ್ನು ಅನುಸರಿಸಿ, ಶ್ರೀರಾಮಕೃಷ್ಣರ ಹೇಳಿಕೆಯಾದ 'ಶಿವಜ್ಞಾನೇ ಜೀವಸೇವಾ' ವಾಕ್ಯವೂ ಕೂಡ ಅಖಂಡಾರ್ಥಕ ಬೋಧಕ ವಾಕ್ಯವೆಂದೇ ನಾವು ಖಂಡಿತವಾಗಿಯೂ ಪ್ರತಿಪಾದಿಸಬಹುದು. ಹಾಗೆಂದೇ, ಮಹಾವಾಕ್ಯವನ್ನು ವಿವರಿಸುವ ಸಾಂಪ್ರದಾಯಿಕ ವಿಧಾನವನ್ನು ಈ ವಾಕ್ಯಕ್ಕೂ ನಾವು ಧಾರಾಳವಾಗಿ ಅಳವಡಿಸಿಕೊಳ್ಳಬಹುದು.

'ತತ್ ತ್ವಮ್ ಅಸಿ' ಎಂಬ ಮಹಾವಾಕ್ಯದಲ್ಲಿ ಮೊದಲ ಹಂತವೆಂದರೆ, 'ತತ್' ಮತ್ತು 'ತ್ವಂ' ಪದಗಳ ವಾಚ್ಯಾರ್ಥ ಮತ್ತು ಲಕ್ಷ್ಯಾರ್ಥಗಳನ್ನು ಕಂಡುಹಿಡಿಯುವುದು. ವಾಚ್ಯಾರ್ಥವೆಂದರೆ ಮೇಲುನೋಟಕ್ಕೆ ಕಾಣಬರುವ ಪ್ರಾಥಮಿಕ ಅರ್ಥ. ಲಕ್ಷ್ಯಾರ್ಥವೆಂದರೆ, ಅದರ ಮೂಲಕ ಸೂಚಿತವಾದ ಅಥವಾ ಸಂಕೇತಿಸಲ್ಪಟ್ಟಿರುವ ಅಂತರಾರ್ಥ. 'ತತ್' ಪದದ ವಾಚ್ಯಾರ್ಥ ಸೃಷ್ಟಿಕರ್ತನಾದ ಭಗವಂತ ಅಥವಾ ಈಶ್ವರ. 'ತ್ವಂ' ಪದದ ವಾಚ್ಯಾರ್ಥವೆಂದರೆ ವ್ಯಕ್ತಿಗತವಾದ ಆತ್ಮ ಅಥವಾ ಜೀವಿ. ಕೇವಲ ವಾಚ್ಯಾರ್ಥದ ದೃಷ್ಟಿಯಿಂದ ನಾವು ಈಶ್ವರ ಮತ್ತು ಜೀವಿಯ ಐಕ್ಯತೆಯನ್ನು ಕಲ್ಪಿಸಿಕೊಳ್ಳಲಾರೆವು. ಅದಕ್ಕಾಗಿ ನಾವು ಇವೆರಡು ಪದಗಳ ('ತತ್' ಮತ್ತು 'ತ್ವಂ' ) ಲಕ್ಷ್ಯಾರ್ಥಕ್ಕೆ ಮೊರೆಹೋಗಬೇಕಾಗುತ್ತದೆ.

'ತತ್' ಮತ್ತು 'ತ್ವಂ' – ಎರಡೂ ಪದಗಳ ಲಕ್ಷ್ಯಾರ್ಥವು, ಈಶ್ವರ ಮತ್ತು ಜೀವಿ – ಎರಡಕ್ಕೂ ಆಧಾರಭೂತವಾದ ಪರಿಶುದ್ಧ ಚೈತನ್ಯವೆಂದು ವೇದಾಂತ ಹೇಳುತ್ತದೆ. ಈ ಲಕ್ಷ್ಯಾರ್ಥವನ್ನು ಪಡೆಯಲು 'ಭಾಗ–ತ್ಯಾಗ–ಲಕ್ಷಣ ವಿಧಾನ' ವನ್ನು ಅನುಸರಿಸಬೇಕು. ಅಂದರೆ, ವಾಚ್ಯಾರ್ಥದ ಒಂದು ಭಾಗವನ್ನು ಮಾತ್ರ ತೆಗೆದುಕೊಂಡು, ಇನ್ನೊಂದು ಭಾಗವನ್ನು ಬಿಟ್ಟುಬಿಡುವುದು. ವೇದಾಂತದ ಪ್ರಕಾರ 'ಈಶ್ವರ'ನೆಂದರೆ ಸಮಷ್ಟಿ ಅಜ್ಞಾನ ಅಥವಾ ಮಾಯೆಯಿಂದ ಕೂಡಿದ ಚೈತನ್ಯ. 'ಜೀವಿ'ಯೆಂದರೆ ವ್ಯಷ್ಟಿ ಅಜ್ಞಾನ ಅಥವಾ ಅವಿದ್ಯೆ ಯಿಂದ ಕೂಡಿದ ಚೈತನ್ಯ. ಇದರಲ್ಲಿ 'ಮಾಯೆ' ಮತ್ತು 'ಅವಿದ್ಯೆ' – ಇವೆರಡೂ ಪಾರಮಾರ್ಥಿಕ ಸತ್ಯಕ್ಕೆ ವಿರುದ್ಧವಾಗಿವೆ. ಹೀಗಾಗಿ 'ತತ್' ಮತ್ತು 'ತ್ವಂ' – ಎರಡೂ ಪದಗಳ ಲಕ್ಷ್ಯಾರ್ಥಗಳಲ್ಲಿ ಅವುಗಳನ್ನು ತ್ಯಜಿಸಬೇಕು. ಆಗ ಉಳಿಯುವುದು ಏನು? ಪರಿಶುದ್ಧ ಚೈತನ್ಯ ಮಾತ್ರ. ಇದೇ 'ತತ್' ಮತ್ತು 'ತ್ವಂ' ಪದಗಳ ಲಕ್ಷ್ಯಾರ್ಥ. ಹೀಗೆ ಚೈತನ್ಯಾತ್ಮಕವಾಗಿ ಮಾತ್ರವೇ ಈಶ್ವರ ಮತ್ತು ಜೀವಿಗಳ ಅಖಂಡತೆಯನ್ನು ತೋರಿಸಬಹುದು ಎಂದು ವೇದಾಂತವು ಪ್ರತಿಪಾದಿಸುತ್ತದೆ.

**ಶಿವಜ್ಞಾನೇ ಜೀವಸೇವಾ – ಇದರ ವಿವರಣೆ** : ಈಗ ನಾವು 'ಶಿವಜ್ಞಾನೇ ಜೀವಸೇವಾ' ವಾಕ್ಯವನ್ನು ಮೇಲಿನ ವಿಧಾನಕ್ಕೆ ಅನುಸಾರವಾಗಿ ವಿವರಿಸಲು ಪ್ರಯತ್ನಿಸೋಣ. ಆ ಮೂಲಕ ಈ ವಾಕ್ಯದ ಸರಿಯಾದ ಮತ್ತು ಕರಾರುವಾಕ್ಕಾದ ಅರ್ಥವನ್ನು ಕಂಡು ಹಿಡಿಯಲು ಪ್ರಯತ್ನಿಸೋಣ. ಅದಕ್ಕಾಗಿ ನಾವು ಈ ವಾಕ್ಯದ ಪ್ರತಿ ಯೊಂದು ಪದವನ್ನೂ ಪರೀಕ್ಷಿಸಿ ನೋಡಬೇಕಾಗುತ್ತದೆ.

'ಶಿವ' ಎನ್ನುವುದು ಸಾಪೇಕ್ಷದ ನೆಲೆಯಲ್ಲಿ ಪರಮಸತ್ಯದ ಆವಿರ್ಭಾವ. ಆದ್ದರಿಂದ 'ಶಿವ' ಪದದ ವಾಚ್ಯಾರ್ಥ 'ಈಶ್ವರ' ಅಥವಾ ಸಗುಣದೇವರು. ಇದರ ಲಕ್ಷ್ಯಾರ್ಥ, ನಾವು ಹಿಂದೆಯೇ ನೋಡಿದಂತೆ, ಪರಿಶುದ್ಧ ಚೈತನ್ಯ. ಇದೇ ರೀತಿ, 'ಜೀವಿ' ಎನ್ನುವ ಪದದ ವಾಚ್ಯಾರ್ಥ ವ್ಯಕ್ತಿಗತವಾದ ಆತ್ಮ ಅಥವಾ ಜೀವಾತ್ಮ; ಪರಿಶುದ್ಧ ಚೈತನ್ಯವೇ ಲಕ್ಷ್ಯಾರ್ಥ. ನಾವು 'ಶಿವ' ಮತ್ತು 'ಜೀವಿ' – ಈ ಎರಡರ ಐಕ್ಯವನ್ನು ಕೇವಲ ವಾಚ್ಯಾರ್ಥದ ಮೇಲೆ ನಿರ್ಧರಿಸಲು ಸಾಧ್ಯವಿಲ್ಲ. ಅದಕ್ಕಾಗಿ ನಾವು ಹಿಂದೆ ಹೇಳಿದ ವಿಧಾನವನ್ನು ಅನುಸರಿಸಬೇಕು; ಆ ಮೂಲಕ ಈ ಎರಡೂ ಪದಗಳ ಲಕ್ಷ್ಯಾರ್ಥವು 'ಪರಿಶುದ್ಧ ಚೈತನ್ಯ'ವೇ ಎಂದು ನಿರ್ಧರಿಸಬೇಕು.

ಇದರಿಂದ ಸ್ಪಷ್ಟವಾಗುವುದು ಇಷ್ಟು: 'ಶಿವ' ಮತ್ತು 'ಜೀವಿ' ಶಬ್ದಗಳಿಂದ ಶ್ರೀರಾಮಕೃಷ್ಣರು ಸಂಕೇತಿಸುತ್ತಿರುವುದು ಪರಿಶುದ್ಧ ಚೈತನ್ಯವನ್ನೇ. ಈ ನಿರಪೇಕ್ಷ ಸತ್ಯವನ್ನು ವೇದಾಂತದ ಪರಿಭಾಷೆಯಲ್ಲಿ 'ಬ್ರಹ್ಮನ್' ಎಂದು ಕರೆಯುತ್ತಾರೆ. ಇದೇ ನಿಜವಾಗಿಯೂ ಶ್ರೀರಾಮ ಕೃಷ್ಣರ ಅಭಿಪ್ರಾಯವೇ? ಇದನ್ನು ಶ್ರೀರಾಮಕೃಷ್ಣರ ಸ್ವಂತ ಮಾತುಗಳ ಮೂಲಕವೇ ಸಮರ್ಥಿಸಬಹುದು. ಒಂದು ಕಡೆ ಶ್ರೀರಾಮಕೃಷ್ಣರೇ ಈ ಬಗ್ಗೆ ಹೀಗೆ ಹೇಳುತ್ತಾರೆ: "ಇರುವುದು 'ಏಕಮೇವಾದ್ವಿತೀಯಂ' ಎಂದರೆ ಕೇವಲ ಒಂದೇ ಒಂದು. ಅದೇ ಪರಬ್ರಹ್ಮ. ಎಲ್ಲಿಯವರೆಗೆ ಭಗವಂತ ನಮ್ಮಲ್ಲಿ 'ಅಹಂ' ಎಂಬುದನ್ನು ಇಟ್ಟಿರುತ್ತಾನೋ, ಅಲ್ಲಿಯವರಗೆ ಆತ ನಮಗೆ ತೋರಿಸಿಕೊಡುತ್ತಾನೆ, ತಾನು ಆದ್ಯಾಶಕ್ತಿಯ ರೂಪದಿಂದ ಸೃಷ್ಟಿ–ಸ್ಥಿತಿ–ಪ್ರಳಯ ಮಾಡುತ್ತಿರುವುದಾಗಿ... ಮೊದಮೊದಲು ಬ್ರಹ್ಮ ಮತ್ತು ಆದ್ಯಾಶಕ್ತಿ – ಇವೆರಡೂ ಎರಡು ವಸ್ತುಗಳು ಎಂಬ ಬೋಧೆಯಾಗುತ್ತದೆ. ಆದರೆ ಬ್ರಹ್ಮಜ್ಞಾನ ದೊರೆತನಂತರ ಅವು ಎರಡು ಎಂಬ ಬೋಧೆಯಾಗದು. ಆಗ ಅಭೇದ ಎಂಬ ಬೋಧೆ – ಒಂದೇ ಎಂಬ ಬೋಧೆ; ಏಕಮೇವಾದ್ವಿತೀಯಂ – ಅದ್ವೈತ ಎಂಬ ಬೋಧೆ" (ಶ್ರೀರಾಮಕೃಷ್ಣ ವಚನವೇದ, ಪೂರ್ವಾರ್ಧ, ಪುಟ ೨೧೭, ಐದನೆಯ ಮುದ್ರಣ, ೧೯೮೭).

**ಜ್ಞಾನ ಮತ್ತು ಸೇವೆ** : ಶ್ರೀರಾಮಕೃಷ್ಣರ ವಾಕ್ಯದಲ್ಲಿ 'ಶಿವ' ಮತ್ತು 'ಜೀವಿ' ಪದಗಳ ಮಹತ್ವವನ್ನು ತಿಳಿದುಕೊಂಡೆವು. ಈಗ ಇನ್ನುಳಿದ ಶಬ್ದಗಳಾದ 'ಜ್ಞಾನ' ಮತ್ತು 'ಸೇವಾ' – ಈ ಪದಗಳ ಮಹತ್ವವನ್ನು ತಿಳಿದುಕೊಳ್ಳೋಣ. ಶ್ರೀರಾಮಕೃಷ್ಣರು ಈ ವಾಕ್ಯದಲ್ಲಿ 'ಶಿವ' ಮತ್ತು 'ಜೀವಿ'ಗಳ ಅಖಂಡತ್ವವನ್ನು ಮಾತ್ರವೇ ಪ್ರತಿಪಾದಿಸುವುದಿಲ್ಲ, ಜ್ಞಾನ ಮತ್ತು ಸೇವೆಗಳೂ ಕೂಡ ಒಂದೇ ಎನ್ನುವುದನ್ನೂ ಒತ್ತಿಹೇಳುತ್ತಾರೆ.

'ಜ್ಞಾನ' ಪದದ ವಾಚ್ಯಾರ್ಥ ಬ್ರಹ್ಮಜ್ಞಾನ ಅಥವಾ ಪರಮಸತ್ಯದ ಜ್ಞಾನ ಎಂದು. ಹಾಗೆಯೇ, 'ಸೇವಾ' ಎಂಬ ಪದದ ವಾಚ್ಯಾರ್ಥ 'ಭೇದಭಾವನೆ'ಯಿಂದ ಇತರರಿಗೆ ಸಹಾಯ ಮಾಡುವುದು. ಆದರೆ ವೇದಾಂತವು ಬ್ರಹ್ಮವು ಜ್ಞಾನರೂಪವಾದದ್ದೇ ಎಂದು ಸುಸ್ಪಷ್ಟವಾಗಿ ಹೇಳುವುದು. ಹೀಗಾಗಿ 'ಜ್ಞಾನ' ಪದದ ಲಕ್ಷ್ಯಾರ್ಥ ಪರಿಶುದ್ಧ ಚೈತನ್ಯವೇ ಆಗಿದೆ.

ಇನ್ನು 'ಸೇವಾ' ಪದದ ಲಕ್ಷ್ಯಾರ್ಥವನ್ನು ಕುರಿತು ಆಲೋಚಿ ಸೋಣ. ಯಾವುದೇ ಭೇದಭಾವನೆ ಇಲ್ಲದೆ ಅಥವಾ ತಾನು ಬೇರೆ – ಸಹಾಯ ಪಡೆಯುತ್ತಿರುವವನು ಬೇರೆ ಎಂಬ ಪ್ರತ್ಯೇಕತೆಯ ಭಾವನೆ ಇಲ್ಲದೆ, ಇತರರಿಗೆ ಸಹಾಯ ಮಾಡುವುದೇ ಸೇವೆಯ ಲಕ್ಷ್ಯಾರ್ಥ. ಇದು ಹೇಗೆ ಸಾಧ್ಯ? ಸೇವೆ ಮಾಡುವನು ಎಲ್ಲೆಲ್ಲಿಯೂ ಚೈತನ್ಯವನ್ನೇ ಪರಿಭಾವಿಸಿದಾಗ ಮಾತ್ರ ಇದು ಸಾಧ್ಯ. ಹೀಗಾಗಿ ಪರಿಶುದ್ಧ ಚೈತನ್ಯವೇ ಸೇವೆಯ ಲಕ್ಷ್ಯಾರ್ಥವೂ ಕೂಡ ಎಂದು ನಾವು ಅರ್ಥಮಾಡಿಕೊಳ್ಳಬಹುದು.

ಇಲ್ಲಿ ಶ್ರೀರಾಮಕೃಷ್ಣರು ಸೂಚಿಸುತ್ತಿರುವುದೇನು? ಜ್ಞಾನ ಮತ್ತು ಪರಿಪೂರ್ಣ ರೂಪದ ಸೇವೆ ಬೇರೆ ಬೇರೆ ಅಲ್ಲ, ಅವೆರಡೂ ಒಂದೇ ಎಂದು. ಇವೆರಡೂ ಕೂಡ ಪರಮ ತತ್ತ್ವ ಅಥವಾ ಪರಿಶುದ್ಧ ಚೈತನ್ಯದ ಅನುಭವವನ್ನೇ ತಂದುಕೊಡುವುದು. ಸಾಂಪ್ರದಾಯಿಕ ವೇದಾಂತವು ಸಮಾಧಿ ನೆಲೆಯಲ್ಲಿ, 'ಜ್ಞಾನ', ಜ್ಞೇಯ' (ಜ್ಞಾನದ ವಸ್ತು) ಮತ್ತು 'ಜ್ಞಾತೃ' (ಜ್ಞಾನವನ್ನು ತಿಳಿದುಕೊಳ್ಳುವವನು) – ಇವುಗಳ ಭೇದವು ನಶಿಸಿಹೋಗುವುದು ಮತ್ತು ಅಖಂಡ ಚೈತನ್ಯದ ಅನುಭವ ಮಾತ್ರವೇ ಆಗುವುದು ಎಂದು ಹೇಳುತ್ತದೆ. ಇದೇ ರೀತಿ, ಪರಿಪೂರ್ಣ ಸೇವೆಯೂ ಕೂಡ ಅದೇ ರೀತಿಯ ನಿರಪೇಕ್ಷ ಸ್ಥಿತಿಗೆ ನಮ್ಮನ್ನು ಕರೆದುಕೊಂಡು ಹೋಗುತ್ತದೆ. ಆ ಸ್ಥಿತಿಯಲ್ಲಿ 'ಸೇವೆ ಮಾಡುವವನು', 'ಸೇವೆ ಮಾಡಿಸಿಕೊಳ್ಳುವವನು' ಮತ್ತು 'ಸೇವೆ' – ಈ ಮೂರರ ನಡುವಣ ಭೇದಗಳು ನಶಿಸಿ, ಎಲ್ಲವೂ ಅಖಂಡ ಚೈತನ್ಯವೇ ಎಂಬ ಅನುಭವವಾಗುತ್ತದೆ.

**'ಜ್ಞಾನೇ ಸೇವಾ'** : ಶ್ರೀರಾಮಕೃಷ್ಣರ ವಾಕ್ಯದಲ್ಲಿರುವ ಪದಗಳನ್ನು ಪರೀಕ್ಷಿಸಿದ ಮೇಲೆ ನಾವೀಗ ಅವುಗಳ ಒಟ್ಟಾರೆ ಮಹತ್ವವನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಅದನ್ನು ಸರಳ ಶಬ್ದಗಳಲ್ಲಿ ಹೀಗೆ ಹೇಳಬಹುದು: **"ಸೇವೆಯು ನಿಜವಾಗಿಯೂ ಪರಿಪೂರ್ಣ ವಾಗುವುದು, ಅದನ್ನು ಜೀವನೇ ಶಿವ ಎಂಬ ಜ್ಞಾನದಿಂದ ಕೈಗೊಂಡಾಗ ಮಾತ್ರ."** ಈ ಜ್ಞಾನವಿಲ್ಲದಿದ್ದರೆ, ಸೇವೆಗೆ ಯಾವ ಆಧ್ಯಾತ್ಮಿಕ ಮೌಲ್ಯವೂ ಇಲ್ಲದಾಗುತ್ತದೆ; ಇತರರಿಗೆ ಸಹಾಯ

ಮಾಡುವ ಬರಡು ಲೌಕಿಕ ಕ್ರಿಯೆಯಾಗುತ್ತದೆ. ಹೀಗೆ 'ಶಿವಜ್ಞಾನೇ ಜೀವಸೇವಾ' ವಾಕ್ಯದ ಮೂಲಕ ಶ್ರೀರಾಮಕೃಷ್ಣರು ಎಲ್ಲಬಗೆಯ ಸೇವಾ ಚಟುವಟಿಕೆಗಳಿಗೆ ಆಧ್ಯಾತ್ಮಿಕ ಆಯಾಮವನ್ನು ನೀಡುತ್ತಾರೆ. ಶ್ರೀರಾಮಕೃಷ್ಣ ವಚನವೇದದಲ್ಲಿ ಕಾಣಬರುವ ಅವರ ಹಲವಾರು ಉಕ್ತಿಗಳಲ್ಲಿ ಈ ಭಾವನೆ ಸ್ಪಷ್ಟವಾಗಿ ಹೊರಹೊಮ್ಮಿರುವುದನ್ನು ಗುರುತಿಸಬಹುದು. ಅವುಗಳಲ್ಲಿ ಕೆಲವು ಹೀಗಿದೆ:

"ಸಂಸಾರಿ ನಿಜವಾದ ಭಕ್ತನಾದರೆ, ಆತ ಅನಾಸಕ್ತನಾಗಿ ತನ್ನ ಕೆಲಸಕಾರ್ಯಗಳನ್ನು ಮಾಡುತ್ತಾನೆ. ತನ್ನ ಕರ್ಮದ ಫಲ ಲಾಭದಾಯಕವಾಗಿದ್ದರೂ ಸರಿಯೇ, ನಷ್ಟದಾಯಕವಾಗಿದ್ದರೂ ಸರಿಯೇ ಎಲ್ಲವನ್ನೂ ಭಗವಂತನಿಗೆ ಅರ್ಪಿಸಿಬಿಡುತ್ತಾನೆ. ಹಗಲಿರುಳೂ ಭಕ್ತಿಗಾಗಿ ಪ್ರಾರ್ಥನೆ ಮಾಡುತ್ತಾನೆ. ಮತ್ತೆ ಬೇರಾವುದಕ್ಕೂ ಪ್ರಾರ್ಥನೆ ಮಾಡುವುದಿಲ್ಲ. ಇದಕ್ಕೇ ನಿಷ್ಕಾಮಕರ್ಮ ಎಂದು ಹೆಸರು. ಅಂದರೆ ಅನಾಸಕ್ತಿಯಿಂದ ಕೆಲಸ ಮಾಡುವುದು. **ಸಂನ್ಯಾಸಿಯೂ ಎಲ್ಲಾ ಕೆಲಸಗಳನ್ನು ನಿಷ್ಕಾಮಭಾವನೆಯಿಂದ ಮಾಡಬೇಕು. ಆದರೆ ಆತ ಸಂಸಾರಿಗಳ ಹಾಗೆ ಪ್ರಾಪಂಚಿಕ ಕರ್ಮಗಳನ್ನು ಮಾಡಬೇಕಾಗಿರುವುದಿಲ್ಲ.**

"ಸಂಸಾರಿ ನಿಷ್ಕಾಮಭಾವನೆಯಿಂದ ಯಾರಿಗಾದರೂ ದಾನ ಮಾಡಿದರೆ, ಅದು ತನ್ನ ಉಪಕಾರಕ್ಕಾಗಿಯೇ ವಿನಾ ಪರರ ಉಪಕಾರಕ್ಕಲ್ಲ. ಸರ್ವಭೂತಗಳಲ್ಲಿಯೂ ಭಗವಂತನಿರುವುದರಿಂದ ಆತನ ಸೇವೆ ಮಾಡಿದಂತೆಯೇ ಆಗುತ್ತದೆ. ಹರಿಯ ಸೇವೆ ಮಾಡಿದರೆ ಅದು ತನಗೇ ಉಪಕಾರ ಮಾಡಿಕೊಂಡಂತಾಗುವುದೇ ಹೊರತು ಬೇರೆಯವರಿಗಲ್ಲ. ಸರ್ವಭೂತಗಳಲ್ಲಿಯೂ ಹರಿಯ ಸೇವೆ – ಬರೀ ಮನುಷ್ಯನಲ್ಲಿ ಮಾತ್ರವೇ ಅಲ್ಲ, ಎಲ್ಲಾ ಜೀವ ಜಂತುಗಳಲ್ಲಿಯೂ ಹರಿಯ ಸೇವೆ ಯಾರೇ ಆಗಲಿ ಮಾಡಿದರೆ, ಮತ್ತು ಆತನಿಗೆ ಹೆಸರು ಬೇಕಾಗದೆ, ಕೀರ್ತಿ ಬೇಕಾಗದೆ, ಸತ್ತ ಬಳಿಕ ಸ್ವರ್ಗಕ್ಕೆ ಹೋಗಬೇಕು ಎಂಬ ಇಚ್ಛೆ ಇಲ್ಲದೆ ಇದ್ದರೆ, ಯಾರಿಗೆ ಸೇವೆ ಮಾಡುತ್ತಿದ್ದಾನೆಯೋ ಅವರಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸದೇ ಇದ್ದರೆ, ಮತ್ತು ಇವೇ ಮೊದಲಾದ ರೀತಿಯಾಗಿ ಸೇವೆ ಮಾಡಿದರೆ, ಆತ ನಿಷ್ಕಾಮಕರ್ಮವನ್ನು, ಅನಾಸಕ್ತಕರ್ಮವನ್ನು ಮಾಡಿದಂತೆ ಆಗುತ್ತದೆ. ಕರ್ಮಯೋಗ ಎನ್ನುವುದು ಇದೇ.

"ಅದಕ್ಕಾಗಿಯೇ ನಾನು ಹೇಳುವುದು. ಯಾರು ಅನಾಸಕ್ತಿಯಿಂದ ಈ ವಿಧವಾಗಿ ಕರ್ಮ ಮಾಡುತ್ತಾನೋ, ಯಾರು ದಯಾಪರನೋ ಮತ್ತು ದಾನಿಯೋ – ಆತ ತನಗೆ ಶ್ರೇಯಸ್ಸನ್ನು ತಂದುಕೊಳ್ಳುತ್ತಾನೆ. ಯಾರು ಜೀವರಿಗಾಗಿ ಚಂದ್ರ, ಸೂರ್ಯ, ತಂದೆತಾಯಿ, ಹೂವು ಹಣ್ಣು ಧಾನ್ಯ ಸೃಷ್ಟಿಸಿದ್ದಾನೆಯೋ, ಆ ಭಗವಂತನೇ ಪರರಿಗೆ ಉಪಕಾರ ಮಾಡಲು, ಪರರಿಗೆ ಶ್ರೇಯಸ್ಸನ್ನು ತರಲು ಹಕ್ಕುದಾರನಾಗುತ್ತಾನೆ. ತಂದೆತಾಯಿಗಳಲ್ಲಿ ಕಾಣಬರುವ ಒಲುಮೆ ಮೊದಲು ಅವನಿಗೆ ಸೇರಿದುದೇ ಆಗಿದೆ; ಜೀವಿಗಳ ರಕ್ಷಣೆಗಾಗಿಯೇ ಆತ ಅವರಿಗೆ ಅದನ್ನು ಕೊಟ್ಟಿದ್ದಾನೆ. ದಯಾಳುವಿನಲ್ಲಿ ಕಾಣಬರುವ ದಯೆ ಕೂಡ ಆತನದೇ; ನಿಸ್ಸಹಾಯಕ ಜೀವಿಗಳ ರಕ್ಷಣೆಗಾಗಿ ಅವರಿಗೆ ಆತ ಅದನ್ನು ಕೊಟ್ಟಿದ್ದಾನೆ. ನೀನು ದಯೆತೋರು, ಬಿಡು; ಆತ ಒಂದಲ್ಲ ಒಂದು ವಿಧವಾಗಿ ತನ್ನ ಕೆಲಸವನ್ನು ಮಾಡಿಸಿಕೊಂಡುಬಿಡುತ್ತಾನೆ. ಆತನ ಕಾರ್ಯ ಮಾತ್ರ ಎಂದಿಗೂ ನಿಲ್ಲದು" (ಶ್ರೀರಾಮಕೃಷ್ಣ ವಚನವೇದ, ಉತ್ತರಾರ್ಧ, ಪುಟ ೧೬೮–೧೯೯, ಐದನೆಯ ಮುದ್ರಣ, ೧೯೮೭).

ಈ ಆಧುನಿಕ ಯುಗಕ್ಕೆ ಅದೆಂಥ ಅದ್ಭುತವಾದ ಆದರ್ಶ! ಶ್ರೀರಾಮಕೃಷ್ಣರ ಪ್ರತಿಭೆ, ಪ್ರಾಚೀನ ವೇದಾಂತದ ಸತ್ಯಗಳನ್ನು ಅವರು ಅಚ್ಚುಕಟ್ಟಾಗಿ ಆಧುನಿಕ ಸಂದರ್ಭಕ್ಕೆ ಸಂಯೋಜಿಸಿರುವುದರಲ್ಲಿದೆ. ಇದೇ ರಾಮಕೃಷ್ಣ ಮಹಾಸಂಘದ ಸಂನ್ಯಾಸಿಗಳ ವ್ಯಕ್ತಿಗತ ಆಧ್ಯಾತ್ಮಿಕ ಆದರ್ಶವೂ ಹೌದು. ಹಾಗಿಲ್ಲದಿದ್ದರೆ, ಅವರು ಮಾಡುವ ಸೇವಾಕಾರ್ಯಗಳಲ್ಲಿ ಯಾವ ಹುರುಳೂ ಇಲ್ಲದ ಹಾಗೆ ಆಗಿಬಿಡುತ್ತದೆ. ಈ ಧ್ಯೇಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡೇ ಅವರು ತಮ್ಮ ಕಾರ್ಯಗಳನ್ನು ಹೃದಯಪೂರ್ವಕವಾಗಿ ಮಾಡುತ್ತಾರೆ. ಆ ಮೂಲಕ ಅವುಗಳನ್ನು ಆಧ್ಯಾತ್ಮಿಕ ಸಾಧನೆಯಾಗಿ ಪರಿವರ್ತಿಸಿಕೊಳ್ಳುತ್ತಾರೆ. ಇಂಥ ಉದಾತ್ತ ಸೇವೆಯು, ಸಾಂಪ್ರದಾಯಿಕ ಸಾಧನೆಗಳಾದ ಜಪ, ಧ್ಯಾನ, ತಪಸ್ಸು ಮತ್ತು ಸ್ವಾಧ್ಯಾಯಗಳಿಗಿಂತ ಎಳ್ಳಷ್ಟೂ ಕಡಮೆಯಾದುದಲ್ಲ.

**ಉಪಸಂಹಾರ :** ಶಿವಭಾವದಿಂದ ಜೀವಿಗಳ ಸೇವೆಯನ್ನು ಮಾಡಬೇಕೆಂಬ ಶ್ರೀರಾಮಕೃಷ್ಣರ ಈ ಉನ್ನತ ಸ್ತರದ ಬೋಧನೆಗೆ, ಸ್ವಾಮಿ ವಿವೇಕಾನಂದರೇ ಸ್ವತಃ ಮನೋಹರವಾದ ತಾತ್ತ್ವಿಕ ವಿವರಣೆಯನ್ನು ಕೊಡುವುದರೊಂದಿಗೆ, ಉದಾತ್ತ ಅನುಷ್ಠಾನದ ಆಯಾಮವನ್ನೂ ನೀಡಿದ್ದಾರೆ. ಸ್ವಾಮೀಜಿ ಸೇವೆಯನ್ನು ಒಂದು ಜೀವನ ವಿಧಾನವಾಗಿ ಮಾಡಿದರು ಮತ್ತು ನಿಸ್ವಾರ್ಥ ಸೇವೆಯ ಈ ಆದರ್ಶವನ್ನು ಆಧ್ಯಾತ್ಮಿಕ ಸಾಧನೆಯಾಗಿ ಹೇಗೆ ಪರಿವರ್ತಿಸಬಹುದು ಎಂದೂ ಹೇಳಿಕೊಟ್ಟರು. ಗುರುದೇವರು ಬೋಧಿಸಿದ ತಾತ್ತ್ವಿಕ ವಿಚಾರವನ್ನು, ಅವರ ಲೋಕೋತ್ತರ ಶಿಷ್ಯಪುಂಗವರಾದ ಸ್ವಾಮಿ ವಿವೇಕಾನಂದರು ಅನುಷ್ಠಾನಪ್ರದವನ್ನಾಗಿ ಮಾಡಿದರು ಮತ್ತು ಈ ಸಂದೇಶವನ್ನು ಇಡೀ ಮಾನವತೆಯ ಕಲ್ಯಾಣಕ್ಕಾಗಿ ಜಗತ್ತಿನಾದ್ಯಂತ ಪ್ರಸಾರ ಮಾಡಿದರು. ರಾಮಕೃಷ್ಣ ಮಿಷನ್ ನಡೆಸುತ್ತಿರುವ ಆಸ್ಪತ್ರೆಗಳು, ಶಾಲೆಗಳು, ತರಬೇತಿ ಕೇಂದ್ರಗಳು ಮುಂತಾದವುಗಳಲ್ಲಿ ನಾವು ಆಧ್ಯಾತ್ಮಿಕ ವಾತಾವರಣದಿಂದ ಕೂಡಿದ ಶಾಂತಿಯುತ ಪರಿಸರವನ್ನು ಅನುಭವಿಸುತ್ತೇವೆ. ಇದಕ್ಕೆ ಕಾರಣ, ಈ ಎಲ್ಲ ಚಟುವಟಿಕೆಗಳಿಗೆ ಆಧಾರವಾಗಿ ಇರುವುದು ಶ್ರೀರಾಮಕೃಷ್ಣರು ಮತ್ತು ಅವರ ಬೋಧನೆಗಳೇ. ಈ ಎಲ್ಲ ಸೇವಾಕ್ಷೇತ್ರಗಳಲ್ಲಿ ಕೆಲಸಮಾಡುತ್ತಿರುವ ಸಂನ್ಯಾಸಿಗಳಿಗೆ ಎಲ್ಲರಲ್ಲೂ – ಪುರುಷರಾಗಿರಲಿ ಅಥವಾ ಮಹಿಳೆಯರಾಗಿರಲಿ – ಭಗವಂತನನ್ನೇ ಕಂಡು ಸೇವೆ ಮಾಡುವಂತೆ ಪ್ರೇರೇಪಿಸುತ್ತಿರುವವರು ಸ್ವತಃ ಶ್ರೀರಾಮಕೃಷ್ಣರೇ.



**ಒಂದು ಬಿನ್ನಹ**

**ಈ ಸಂಚಿಕೆಯಲ್ಲಿ ರಾಮಕೃಷ್ಣ ಮಿಷನ್ ಮತ್ತು ಇತರ ಕೆಲವು ಸೇವಾಸಂಸ್ಥೆಗಳ ಸೇವಾಕಾರ್ಯಗಳನ್ನು ಪ್ರಾತಿನಿಧಿಕವಾಗಿ ಮಾತ್ರವೇ ಪ್ರಸ್ತುತಪಡಿಸಲಾಗಿದೆ. ಸ್ವಾಮಿ ವಿವೇಕಾನಂದರ ಸೇವಾದರ್ಶದ ಪ್ರತಿರೂಪಗಳಾಗಿರುವ ಇನ್ನೂ ನೂರಾರು ಸಂಸ್ಥೆಗಳು ದೇಶದಾದ್ಯಂತ ಇವೆ. ಅವುಗಳಲ್ಲಿ ಕೆಲವು ಸಂಸ್ಥೆಗಳ ಪುಣ್ಯಕಥೆಯನ್ನು ಮುಂದಿನ ಸಂಚಿಕೆಗಳಲ್ಲಿ ಪ್ರಕಟಿಸಲಾಗುವುದು.**

**– ಸಂ.**

# ಸಂಗೀತ ಮತ್ತು ವಿವೇಕಾನಂದರು

ಸ್ವಾಮಿ ಹರ್ಷಾನಂದ

**ಸ್ವಾಮಿ ವಿವೇಕಾನಂದರ ಜೀವನದ ಅತ್ಯಂತ ಸಕ್ರಿಯಾತ್ಮಕ ಅಂಶವೆಂದರೆ ಸಂಗೀತ. ಅವರು ಶ್ರೇಷ್ಠ ಸಂಗೀತಜ್ಞ ರಾಗಿದ್ದುದಲ್ಲದೆ, ಸುಮಧುರ ಗಾಯಕರಾಗಿದ್ದರು. ಭಾರತೀಯ ಸಂಸ್ಕೃತಿಯ ಅನುಪಮ ಅಂಗವಾಗಿದ್ದ ಸಂಗೀತದ ಆರಾಧಕರಾಗಿದ್ದ ಸ್ವಾಮೀಜಿಯವರ ಜೀವನದ ಈ ವಿಶಿಷ್ಟ ಅಂಶವನ್ನು ಚೇತೋಹಾರಿಯಾಗಿ ನಮಗೆ ತಿಳಿಸಿಕೊಟ್ಟಿರುವ ಪೂಜ್ಯ ಸ್ವಾಮಿ ಹರ್ಷಾನಂದಜಿ ಮಹಾರಾಜ್ ಅವರು ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರು. ಸಂಸ್ಕೃತ, ಕನ್ನಡ ಮತ್ತು ಇಂಗ್ಲಿಷ್‌ಗಳಲ್ಲಿ ಉದ್ದಾಮ ಪಂಡಿತರಾಗಿರುವ ಇವರು ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಸ್ವತಃ ಉತ್ತಮ ಮಟ್ಟದ ಸಂಗೀತಕಾರರೂ ಹೌದು.**

"ಸಂಗೀತವು ಮಾನವಕುಲದ ವಿಶ್ವವ್ಯಾಪಿ ಪರಿಭಾಷೆ" ಎಂಬುದು ಲಾಂಗ್‌ಫೆಲೊ ಕವಿಯ ಉದ್ಗಾರ. ಅದು ದೇವದೂತರ ವಾಕ್ಕು ಎಂದು ಹೇಳಲಾಗಿದೆ. "ಸಂಗೀತವು ಅನಾಗರಿಕ ನರಪಶುವನ್ನು ಸಹ ಮೋಹಗೊಳಿಸುವ ಸೊಬಗನ್ನು ಹೊಂದಿದೆ" ಎಂಬುದು ಜೇಮ್ಸ್ ಬ್ರಾಮ್‌ಸ್ಟನ್‌ನ ಅಭಿಪ್ರಾಯ. ಇನ್ನು ಷೇಕ್ಸ್‌ಪಿಯರ್ ಮಹಾಶಯನು ತನ್ನ **ಮರ್ಚೆಂಟ್ ಆಫ್ ವೆನಿಸ್** (*Merchant of Venice*) ನಾಟಕದಲ್ಲಿ, "ಆಂತರ್ಯದಲ್ಲಿ ಗಾನರಸದ ಅಭಿರುಚಿ ಇರದ, ಮಧು ಮಧುರವಾದ ಗಾನದ ಅಲೆಗಳಿಂದಲೂ ಮನ ಚಲಿಸದವನಾದ ಮಾನವನು ದೇಶದ್ರೋಹಕ್ಕೆ, ಸ್ವಹಿತವನ್ನೇ ಸಾಧಿಸಿಕೊಳ್ಳುವ ತಂತ್ರಕ್ಕೆ, ಲೂಟಿ ಸುಲಿಗೆ ಮಾಡುವ ಹೀನಕಾರ್ಯಕ್ಕೆ ಯೋಗ್ಯನು" ಎಂದು ಹೇಳಿದ್ದಾನೆ. "ಎಲ್ಲಾ ಉಪದೇಶಗಳಿಗಿಂತಲೂ ಒಂದು ಗಾನವು ಹೆಚ್ಚುಕಾಲ ಸ್ಮರಣೆಯಲ್ಲಿರುವುದು" ಎಂಬುದು ಹೆನ್ರಿ ಗೈಲ್ಸ್‌ನ ಮಾತು. ಮಾನವಕುಲದ ಜೀವನದಲ್ಲಿ ಸಂಗೀತದ ಹಿರಿಮೆಯನ್ನು ಸಾರಲು ಈ ಮೇಧಾವಿಗಳ ಮಾತುಗಳೇ ಸಾಕು.

ಇತಿಹಾಸಪೂರ್ವದ ಭಾರತದ ಹೃದಯದಲ್ಲಿ ಸಂಗೀತದ ಉಗಮವು ಮರೆಮಾಚಲ್ಪಟ್ಟಿದೆ. ಋಗ್ವೇದದ ಮತ್ತು ಸಾಮವೇದದ ಕಾಲದ ಹಿಂದಿನವರೆಗೂ ಅದರ ಮೂಲವನ್ನು ಅರಸಬಹುದು; ಅಂದರೆ ಕ್ರಿ.ಪೂ ೪೫೦೦ರಿಂದ ಕ್ರಿ.ಪೂ. ೨೦೦೦ದ ಕಾಲಮಾನದಷ್ಟು ಹಿಂದಕ್ಕೆ ಹೋಗಬಹುದು. ಸಂಗೀತವು ಉಳಿದ ದೇಶಗಳಲ್ಲಿ ಇನ್ನೂ ವಿಕಸನ ಹಂತದ ಪ್ರಾರಂಭಾವಸ್ಥೆಯಲ್ಲಿದ್ದಾಗ, ಅಂದರೆ ಜಾನಪದ ಗೀತೆಗಳಲ್ಲಿಯೇ ಉಳಿದಿದ್ದಾಗ, ಭಾರತೀಯ ಸಂಗೀತವು ಒಂದು ವ್ಯವಸ್ಥಿತ ಶಾಸ್ತ್ರವಾಗಿ ಶ್ರುತಿ, ಸ್ವರ, ರಾಗ, ಲಯ ಮತ್ತು ತಾಳದ ಪರಿಕಲ್ಪನೆಗಳೊಂದಿಗೆ ಎತ್ತರಕ್ಕೆ ಬೆಳೆದಿತ್ತು. **ನಾರದ ಪರಿವ್ರಾಜಕ** ಮತ್ತು **ಗರ್ಭ** ಮುಂತಾದ ಉಪನಿಷತ್ತುಗಳಲ್ಲಿ ಸಂಗೀತದಲ್ಲಿ ಸಪ್ತಸ್ವರಗಳ ಪದ್ಧತಿ ಇದ್ದಿತೆಂಬುದಕ್ಕೆ ಸ್ಪಷ್ಟವಾದ ಉಲ್ಲೇಖಗಳಿವೆ.

ಪ್ರಾಚೀನ ಭಾರತದ ಇತರ ಕಲೆ ಮತ್ತು ವಿಜ್ಞಾನ ಶಾಸ್ತ್ರಗಳಂತೆ, ಸಂಗೀತ ಮತ್ತು ನಾಟ್ಯಗಳು (ಪ್ರಾಥಮಿಕ ಹಂತದಲ್ಲಿ ಇವು ಒಂದೇ ಕಲೆಯ ಎರಡು ಭಾಗಗಳಾಗಿದ್ದವು) ಸಹ ಧರ್ಮವನ್ನೇ ಆಧಾರವಾಗಿ ಹೊಂದಿದ್ದವು. ಅವು ಧರ್ಮವನ್ನೇ ಮುಖ್ಯಲಕ್ಷಣವನ್ನಾಗಿ ಹೊಂದಿದ್ದು, ಅವನ್ನು

ಭಗವಂತನಲ್ಲಿ ಭಕ್ತಿಗಾಗಿ ಮತ್ತು ಅವನ ಸಾಕ್ಷಾತ್ಕಾರಕ್ಕಾಗಿ ಒಂದು ಸಾಧನವನ್ನಾಗಿ ಬಳಸುತ್ತಿದ್ದರು. 'ನಾದೋಪಾಸನ' (ಸಂಗೀತದ ಮೂಲಕ ಧ್ಯಾನ) ಎಂದು ಪ್ರಚಲಿತವಾಗಿದ್ದ ಅದನ್ನು, ಧಾರ್ಮಿಕ ಜೀವನದಲ್ಲಿ ವಿಶೇಷ ಫಲಕಾರಿಯಾದ ಉಪಾಸನೆಯೆಂದು ಪರಿಗಣಿಸುತ್ತಿದ್ದರು. ಪ್ರಾಚೀನ ಋಷಿಗಳಾದ ನಾರದ, ತುಂಬುರರು, ತುಲಸೀದಾಸರು, ಮೀರಾಬಾಯಿ, ಕಬೀರ್, ನಾನಕ್, ರಾಮಪ್ರಸಾದ್, ಕಮಲಾಕಾಂತ, ತುಕಾರಾಮ್, ಪುರಂದರದಾಸರು ಮತ್ತು ತ್ಯಾಗರಾಜರೇ ಮೊದಲಾದ ಐತಿಹಾಸಿಕ ವ್ಯಕ್ತಿಗಳು ನಾದೋಪಾಸನೆಯಿಂದ ಅಪೇಕ್ಷಿತ ಫಲವನ್ನು ಪಡೆದ ಉಜ್ವಲ ರತ್ನಗಳು. ಈ ಶ್ರೇಷ್ಠಸಂತರು ಮತ್ತು ಭಗವಂತನ ಸೇವಕರು ಸಂಗೀತ ಕಲೆಯನ್ನು ಭಗವಂತನ ಸಾಕ್ಷಾತ್ಕಾರಕ್ಕಾಗಿ ಒಂದು ಸಾಧನವಾಗಿ ಉಪಯೋಗಿಸಿಕೊಂಡಿದ್ದರಲ್ಲದೆ, ನಮ್ಮ ಧಾರ್ಮಿಕ ಇತಿಹಾಸದ ಕಠಿಣ ಪರಿಸ್ಥಿತಿಯಲ್ಲಿ ಜನಸಾಮಾನ್ಯರಲ್ಲಿ ನೈಜಧರ್ಮದ ಪ್ರಸಾರಕ್ಕಾಗಿಯೂ ಬಳಸಿಕೊಂಡರು. ಹೀಗೆ ಭಕ್ತಿಯೇ ಪ್ರಧಾನ ಗುಣವನ್ನಾಗಿ ಉಳ್ಳ ಭಾರತೀಯ ಸಂಗೀತವನ್ನು 'ಭಜನೆಗಳು' ಎಂದು ಸಮುಚಿತವಾಗಿ ಕರೆಯಬಹುದಾಗಿದೆ.

ಒಂದು ಭಜನೆಯು ಪರಿಪೂರ್ಣವಾಗಬೇಕಾದರೆ ಅದು ಕೆಲವು ಅಗತ್ಯ ನಿಯಮಗಳನ್ನು ಹೊಂದಿರಲೇಬೇಕು. ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು: ಮಧುರವಾದ ಧ್ವನಿ, ಪಕ್ಕವಾದ್ಯಗಳು, ಸಂಗೀತಶಾಸ್ತ್ರದ ನಿಯಮಗಳ ಪರಿಜ್ಞಾನ, ಉತ್ತಮ ಮಟ್ಟದ ಗೀತ ರಚನೆ, ಸ್ಪಷ್ಟ ಉಚ್ಚಾರ, ಮತ್ತು ಭಕ್ತಿ. ಸುಶ್ರಾವ್ಯ ಕಂಠವೇ ಭಜನೆಯ ಜೀವಾಳ. ಅದಿಲ್ಲದಿದ್ದರೆ ಭಜನೆಯು ಭಜನೆಯೇ ಅಲ್ಲ. ಅದು ಗಣಿತಶಾಸ್ತ್ರದ ಸಂಖ್ಯೆ '೧' ರಂತೆ. ತದನಂತರ ಶೂನ್ಯಗಳು (ಸೊನ್ನೆ) ಹಿಂಬಾಲಿಸುವುವು. ಈ ಶೂನ್ಯಗಳು ಅರ್ಥ ಪಡೆಯಲು ಮತ್ತು ಸಂಖ್ಯೆಯ ಬೆಲೆ ವೃದ್ಧಿಯಾಗಲು ಪ್ರಾರಂಭದಲ್ಲಿಯೇ ಸಂಖ್ಯೆ '೧' ಇರಬೇಕು. ಇಲ್ಲದಿದ್ದರೆ ಅವು ಕೇವಲ ಶೂನ್ಯಗಳು ಮಾತ್ರವೇ. ಅಂತೆಯೇ ಪಕ್ಕವಾದ್ಯಗಳ ಸಹಕಾರ, ಸಂಗೀತದ ತಂತ್ರ ಇತ್ಯಾದಿಗಳು ಭಜನೆಯ ಸೊಬಗನ್ನು ಹೆಚ್ಚಿಸಬೇಕಾದರೆ, ಸುಶ್ರಾವ್ಯ ಕಂಠವಿದ್ದರೆ ಮಾತ್ರ ಸಾಧ್ಯ.

ಗಾಯಕನ ಕಂಠವು ಮಧುರವಾಗಿ, ಹಿತಕರವಾಗಿ ಹಾಗೂ ಪಕ್ಕವಾದ್ಯಗಳಾದ ತಂಬೂರಿ, ತಬಲ, ಸರೋದ್, ಸಿತಾರ್, ವೀಣಾ, ಪಿಟೀಲು ಇತ್ಯಾದಿಗಳಿಗೆ ಶ್ರುತಿಬದ್ಧವಾಗಿ ಹೊಂದಿಕೊಂಡಿದ್ದರೆ ಅದು ನಿಸ್ಸಂಶಯವಾಗಿ ಒಟ್ಟು ಪರಿಣಾಮವನ್ನು ಹೆಚ್ಚಿಸುತ್ತದೆ. ಸಂಗೀತಶಾಸ್ತ್ರದ ಜ್ಞಾನ ಮತ್ತು ತಂತ್ರಗಾರಿಕೆಗಳು ಸೂಕ್ತವಾಗಿ ಮಿಳಿತಗೊಂಡರೆ ಅವು ಇಡೀ ಗೋಷ್ಠಿಗೆ ಮೆರುಗನ್ನು ನೀಡುತ್ತವೆ.

ಗಾಯಕನು ಹಾಡುತ್ತಿರುವ ಕೃತಿಯು ಕಾವ್ಯಮಯವಾಗಿಲ್ಲದೆ ಇದ್ದರೆ ಮತ್ತು ಸೂಕ್ಷ್ಮಭಾವನೆಗಳಿಂದ ಶ್ರೀಮಂತವಾಗಿಲ್ಲದೆ ಇದ್ದರೆ ಈ ಎಲ್ಲ ಮೇಳಗಳು ನಿರರ್ಥಕ. ಒಂದು ಒಳ್ಳೆಯ ಕೃತಿಯನ್ನು ಭಾವಪೂರಿತವಾಗಿ, ಶುದ್ಧ ನಿಚ್ಚಳ ಕಂಠದಲ್ಲಿ ಹಾಡಿ, ಶ್ರುತಿಯಲ್ಲಿ ಅಡಕವಾಗಿರುವ ನೈಜ ಅರ್ಥ ಮತ್ತು ಭಾವನೆಗಳನ್ನು ಹೊರಹೊಮ್ಮಿಸಿದರೆ ಅದರ ಒಟ್ಟು ಪರಿಣಾಮ ಅದ್ಭುತವಾಗಿರುತ್ತದೆ.

ಸ್ವಾಮಿ ವಿವೇಕಾನಂದರಿಗೆ, ಸಂಗೀತಕ್ಕೆ ಮೂಲಭೂತವಾದ ಜ್ಞಾನವು ಪ್ರಕೃತಿದತ್ತವಾಗಿತ್ತು. ಈ ಕೊಡುಗೆಯನ್ನು ಸ್ವಾಮಿ ವಿವೇಕಾನಂದರು ತಮ್ಮ ಆಳವಾದ ಸಂಗೀತಜ್ಞಾನದಿಂದ, ಕೌಶಲ್ಯದಿಂದ ಮತ್ತು ಸತತ ಅಭ್ಯಾಸದಿಂದ ಮತ್ತಷ್ಟು ಸುಸಂಸ್ಕೃತ ಗೊಳಿಸಿಕೊಂಡಿದ್ದರು.

ಅವರಿಗೆ ಶ್ರೀಮಂತವಾದ, ಜೀವತುಂಬಿದ ಅತಿ ಮಧುರ ವಾದ – ಚೀನೀಯರ ಗಂಟೆಯ ಸುಮಧುರ ನಿನಾದಕ್ಕೆ ತತ್ಸಮವಾದ – ಧ್ವನಿಯು ಅವರ ತಂದೆತಾಯಿಗಳಿಂದ ಬಳುವಳಿಯಾಗಿ ಬಂದಿತ್ತು.

ಈ ಅನುಪಮವಾದ ಕಂಠಶ್ರೀಗೆ ಶ್ರೀರಾಮಕೃಷ್ಣರು ಮನಸೋತು ನರೇಂದ್ರನಾಥರನ್ನು ಆಗಾಗ್ಗೆ ಹಾಡಲು ಪ್ರಚೋದಿಸುತ್ತಿದ್ದರು. ನರೇಂದ್ರರು ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಸಮ್ಮುಖದಲ್ಲಿ ಹಾಡಿದ ಮೊಟ್ಟಮೊದಲನೆಯ ಕೃತಿಯೇ ಶ್ರೀರಾಮಕೃಷ್ಣರನ್ನು ಆಳವಾದ ಸಮಾಧಿಗೆ ಏರಿಸಿತು. ಮೌಂಟ್ ಅಬುವಿನಲ್ಲಿ ನಡೆದ ಈ ಮುಂದಿನ ಘಟನೆಯು ಅವರ ಕಂಠಮಾಧುರ್ಯಕ್ಕೆ ಬೆಳಕು ಚೆಲ್ಲುತ್ತದೆ:

"ಸ್ವಾಮಿ ವಿವೇಕಾನಂದರು ಬಹುಬೇಗನೆ ಬಹುಸಂಖ್ಯೆಯ ಶಿಷ್ಯರನ್ನು ಸಂಪಾದಿಸಿದರು. ಸಂಜೆಯ ವೇಳೆ ಈ ಶಿಷ್ಯ ರೊಡನೆ ವಾಯುವಿಹಾರಕ್ಕೆ ಹೋಗುತ್ತಿದ್ದರು. ಒಂದು ದಿನ ಅವರು ಆ ಗಿರಿಧಾಮದ ಅತ್ಯಂತ ಮನೋಹರವಾದ ಪ್ರಕೃತಿಸೌಂದರ್ಯವನ್ನು ತೋರಿಸುವ ಬೈಲಿ ನಡೆ ಪಥದಲ್ಲಿ, ಶಿಷ್ಯರೊಡನೆ ವಿಹಾರ ನಡೆಸುತ್ತಿದ್ದರು. ಆ ಸ್ಥಳದ ಕೆಳಗೆ ಮೌಂಟ್‌ಅಬುವಿನ ಸರೋವರವು ಹರಡಿಕೊಂಡಿತ್ತು. ಸ್ವಾಮೀಜಿ ತಮ್ಮ ಶಿಷ್ಯರೊಡನೆ ನಡೆದಾಟವನ್ನು ನಿಲ್ಲಿಸಿ, ಅಲ್ಲಿಯೇ ಶಿಲೆಗಳ ನಡುವೆ ಕುಳಿತರು. ನಂತರ ಅವರು ಹಾಡಲು ಉಪಕ್ರಮಿಸಿದರು. ಅವರ ಗಾಯನವು ತಾಸುಗಟ್ಟಲೆ ಮುಂದುವರೆಯಿತು. ಕೆಲವು ಯೂರೋಪಿಯನ್ನರು ಸಹ ಸಂಜೆಯ ವಾಯುವಿಹಾರಕ್ಕೆ ಬಂದಿದ್ದರು. ಅವರು ಸ್ವಾಮೀಜಿ ಯವರ ಮಧುರವಾದ ಗಾನವನ್ನು ಕೇಳಿ ಆಕರ್ಷಿತರಾಗಿ ಗಾಯಕನ ದರ್ಶನಕ್ಕಾಗಿ ಗಂಟೆಗಟ್ಟಲೆ ಕಾಯುತ್ತಿದ್ದರು. ಕಡೆಗೊಮ್ಮೆ ಸ್ವಾಮೀಜಿ ಕೆಳಗಿಳಿದುಬಂದರು. ಆ ಎಲ್ಲ ಯೂರೋಪಿಯನ್ನರು ಸ್ವಾಮೀಜಿಯನ್ನು ಅವರ ಮಧುರ ಕಂಠಕ್ಕಾಗಿ ಹಾಗೂ ಭಾವಪರವಶವಾದ ಗಾನಕ್ಕಾಗಿ ಅಭಿನಂದಿ ಸಿದರು."

ಸ್ವಾಮೀಜಿಯವರು ವಿದ್ಯಾರ್ಥಿಯಾಗಿದ್ದಾಗಲೇ ಸಂಗೀತದಲ್ಲಿ ಪ್ರಾವೀಣ್ಯವನ್ನು ಪಡೆದಿದ್ದರು. ಅವರು ಶ್ರೇಷ್ಠ ಸಂಗೀತಗಾರರಾಗಿದ್ದ ಅಹಮದ್ ಖಾನ್ ಮತ್ತು ಬೇನಿ ಗುಪ್ತರವರ ಶಿಷ್ಯರಾಗಿ ಹಾಡುಗಾರಿಕೆಯನ್ನೂ, ವಾದ್ಯಸಂಗೀತವನ್ನೂ ಕ್ರಮಬದ್ಧವಾಗಿ

ಸುಮಾರು ಐದು ವರ್ಷಗಳು ಕಲಿತು ಅಭ್ಯಾಸ ಮಾಡಿದ್ದರು. ಅವರು ಗಾಯನದಲ್ಲಿ ಹೆಚ್ಚು ಪ್ರವೀಣರಾಗಿದ್ದರೂ, ಅನೇಕ ವಾದ್ಯಗಳನ್ನೂ ನುಡಿಸಬಲ್ಲವರಾಗಿದ್ದರು. ಭಜನೆಗಳನ್ನು ಹಾಡುವುದರಲ್ಲಿ ನಿಪುಣರಾಗಿದ್ದರು. ಅವರಿಗೆ ಬಂಗಾಳಿ, ಹಿಂದಿ, ಉರ್ದು, ಪರ್ಷಿಯನ್ ಮತ್ತು ಸಂಸ್ಕೃತ ಭಾಷೆಗಳ ಅನೇಕ ಕೃತಿಗಳು ಕಂಠಸ್ಥವಾಗಿದ್ದವು. ಅವರ ಗೆಳೆಯನೊಬ್ಬನು ಬಂಗಾಳಿ ಭಾಷೆಯ ಹಾಡುಗಳನ್ನು ಸಂಪಾದಿಸಿ ಪ್ರಕಟಿಸಲು ಉದ್ಯುಕ್ತನಾದಾಗ, ಆ ಪುಸ್ತಕಕ್ಕೆ ವಿಸ್ತಾರವಾದ ಮುನ್ನುಡಿಯನ್ನು ಬರೆದುಕೊಟ್ಟು, ಅದರಲ್ಲಿ ಭಾರತೀಯ ಸಂಗೀತದ ಜ್ಞಾನ ಮತ್ತು ತಂತ್ರಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಈ ವಿದ್ವತ್‌ಪೂರ್ಣ ಮುನ್ನುಡಿಯಲ್ಲಿ ಸ್ವಾಮೀಜಿಯವರ ಸಂಗೀತ ಕ್ಷೇತ್ರದಲ್ಲಿನ ಅಪಾರ ವಿದ್ವತ್ತಿನ ಸೂಚನೆ ದೊರಕುತ್ತದೆ.

ಭಾಗಲ್ಪುರದ ಶ್ರೀ ಮನ್ಮಥನಾಥ ಚೌಧುರಿಯವರ ಗೃಹದಲ್ಲಿ ನಡೆದ ಈ ಕೆಳಕಂಡ ಘಟನೆಯು ಸ್ವಾಮೀಜಿಯವರಲ್ಲಿದ್ದ ಪರಿಪೂರ್ಣ ಗಾಯಕನನ್ನು ಪರಿಚಯಿಸುತ್ತದೆ: “೧೮೯೦ನೇ ಇಸವಿ ಆಗಸ್ಟ್ ತಿಂಗಳ ಒಂದು ದಿನ ಉಷಃಕಾಲದಲ್ಲಿ ಸ್ವಾಮಿ ವಿವೇಕಾನಂದರು ಸ್ವಾಮಿ ಅಖಂಡಾನಂದರ ಜೊತೆಗೂಡಿ ಅನಿರೀಕ್ಷಿತವಾಗಿ ನಮ್ಮ ಮನೆಗೆ ಬಂದರು. ಅವರಿಬ್ಬರೂ ಸಾಮಾನ್ಯ ಸಾಧುಗಳೆಂದೆಣಿಸಿ ನಾನು ಅವರ ಬಗ್ಗೆ ಹೆಚ್ಚು ಗಮನ ಕೊಡಲಿಲ್ಲ... ಒಮ್ಮೆ ಸ್ವಾಮೀಜಿ ತಮ್ಮಲ್ಲಿಯೇ ಒಂದು ರಾಗವನ್ನು ಗುನುಗಿಕೊಳ್ಳುತ್ತಿರುವುದನ್ನು ಗಮನಿಸಿದೆ. ಅವರು ಹಾಡಬಲ್ಲರೇ ಎಂದು ಅವರನ್ನು ಕೇಳಿದೆ. ಸ್ವಾಮೀಜಿ ‘ಎಲ್ಲೋ ಸ್ವಲ್ಪ’ ಎಂದುತ್ತರಿಸಿದರು. ನಮ್ಮೆಲ್ಲರ ಬಲವಂತಕ್ಕೆ ಸ್ವಾಮೀಜಿ ಹಾಡಲು ತೊಡಗಿದರು. ವಿದ್ಯೆಯ ಜೊತೆಗೆ ಸಂಗೀತದಲ್ಲೂ ಅವರ ಅದ್ಭುತ ಪಾಂಡಿತ್ಯವನ್ನು ಕಂಡು ಬೆರಗಾದೆ. ಮರುದಿನ ಅವರು ಹಾಡಲು ಒಪ್ಪಿಗೆ ಕೊಟ್ಟರೆ ಕೆಲವು ಗಾಯಕರನ್ನು ಮತ್ತು ಸಂಗೀತಗಾರರನ್ನು ಆಮಂತ್ರಿಸಬಹುದೇ ಎಂದು ಕೇಳಿದೆ. ಅವರು ಸಮ್ಮತಿ ಸೂಚಿಸಿದರು. ನಾನು ಅನೇಕ ಸಂಗೀತಗಾರರನ್ನು – ಅವರಲ್ಲಿ ಹಲವು ಉಸ್ತಾದರೂ ಇದ್ದರು – ಆಮಂತ್ರಿಸಿದೆ. ಕಛೇರಿಯು ೯ ಅಥವಾ ೧೦ ಗಂಟೆಗೆ ಮುಗಿಯಬಹುದೆಂದು ಯೋಚಿಸಿ ನಾನು ಅತಿಥಿಗಳಿಗೆ ರಾತ್ರಿಯ ಭೋಜನ ವ್ಯವಸ್ಥೆಯನ್ನು ಮಾಡಿರಲಿಲ್ಲ. ಸ್ವಾಮೀಜಿಯವರು ಎಡೆಬಿಡದೆ ರಾತ್ರಿ ಎರಡು ಅಥವಾ ಮೂರು ಗಂಟೆಯವರೆಗೆ ಹಾಡಿದರು. ಎಲ್ಲರೂ ಮಂತ್ರಮುಗ್ಧರಾಗಿ ಹಸಿವು ಬಾಯಾರಿಕೆಗಳ ಪರಿವೆಯೇ ಇಲ್ಲದೆ, ಕಾಲದ ಅರಿವೂ ಇಲ್ಲದೆ ಕುಳಿತಿದ್ದರು! ಯಾರೂ ಕುಳಿತ ಜಾಗದಿಂದ ಅಲ್ಲಾಡದೆ, ಮನೆಗೆ ಹೋಗಬೇಕೆಂಬ ಯೋಚನೆಯೂ ಇಲ್ಲದೆ ಕುಳಿತಿದ್ದರು. ಕೈಲಾಶ್‌ಬಾಬು ಸ್ವಾಮೀಜಿಯವರಿಗೆ ಪಕ್ಕವಾದ್ಯ ನುಡಿಸುತ್ತಿದ್ದರು. ಕಡೆಗೆ ಅವರ ಬೆರಳುಗಳು ಮರಗಟ್ಟಿದಂತಾಗಿ ಎಲ್ಲ ಸಂವೇದನೆಯನ್ನೂ ಕಳೆದುಕೊಂಡು ವಾದ್ಯವನ್ನು ಮುಂದೆ ನುಡಿಸಲು ಆಗದೆ ಸುಮ್ಮನೆ ಕುಳಿತುಬಿಟ್ಟರು. ಸ್ವಾಮೀಜಿಯವರ ಈ ಅತಿಮಾನುಷಶಕ್ತಿಯನ್ನು ನಾನು ಹಿಂದೆ ಯಾರೊಬ್ಬರಲ್ಲೂ ಕಂಡಿರಲಿಲ್ಲ; ಮುಂದೆ ನೋಡುವ ನಿರೀಕ್ಷಣೆಯಲ್ಲೂ ಇರಲಿಲ್ಲ. ಮರುದಿನ ಸಂಜೆ ಹಿಂದಿನ ರಾತ್ರಿಯ ಅತಿಥಿಗಳು ಮತ್ತು ಆಮಂತ್ರಣವಿಲ್ಲದ ಅನೇಕರು ಮನೆಯಲ್ಲಿ ನೆರೆದಿದ್ದರು. ವಾದ್ಯಗಾರನೂ ಬಂದಿದ್ದ. ಆದರೆ ಸ್ವಾಮೀಜಿ ಆ ದಿನ ಹಾಡಲೇ ಇಲ್ಲ. ಎಲ್ಲರಿಗೂ ಅತ್ಯಂತ ನಿರಾಸೆಯಾಯಿತು.”

ಈ ಲೇಖನವು ಸಂಗೀತದ ಬಗ್ಗೆ ಸ್ವಾಮೀಜಿಯವರ ದೃಷ್ಟಿಕೋನವನ್ನು ತಿಳಿಸದೆ ಮುಗಿಯಲಾರದೆಂದೆನಿಸುತ್ತದೆ. ಸ್ವಾಮೀಜಿ ತಮ್ಮ ‘ಭಕ್ತಿಯೋಗದ ಉಪನ್ಯಾಸ’ಗಳಲ್ಲಿ, ಸಂಗೀತವು ಮಾನವನ ಮನಸ್ಸಿನ ಮೇಲೆ ಪ್ರಚಂಡ ಪರಿಣಾಮವನ್ನು ಬೀರುತ್ತದೆ ಎಂದು ಘೋಷಿಸಿದ್ದಾರೆ:

“ಸಂಗೀತವು ಮಾನವ ಮನಸ್ಸಿನ ಮೇಲೆ ಅದ್ಭುತ ಶಕ್ತಿಯನ್ನು ಬೀರುತ್ತದೆ. ಅದು ಏಕಾಗ್ರತೆಯನ್ನು ಕ್ಷಣಕಾಲದಲ್ಲಿ ತರಬಲ್ಲದು. ದಡ್ಡರು, ಅಜ್ಞಾನಿಗಳು, ದೀನರು, ಪಶುಸಮಾನ ಮಾನವರು – ಇವರಲ್ಲಿ ಯಾರೊಬ್ಬರೂ ಇತರ ಸಮಯದಲ್ಲಿ ತಮ್ಮ ಮನಸ್ಸನ್ನು ಕ್ಷಣಕಾಲವೂ ಹತೋಟಿಯಲ್ಲಿ ಇಡಲಾರರೋ ಅವರು, ರಸಭರಿತ ಗಾನವನ್ನು ಕೇಳಿದ ಮರುಕ್ಷಣವೇ ಅದರಿಂದ ಆಕರ್ಷಿತರಾಗಿ ಏಕಾಗ್ರ ಮನಸ್ಸುಳ್ಳವರಾಗುವರು. ಪ್ರಾಣಿಗಳೂ ಸಹ ಸಂಗೀತದಿಂದ ಪರವಶವಾಗುವುವು.”

‘ರಾಮಾಯಣ’ವನ್ನು ಕುರಿತು ಕ್ಯಾಲಿಫೋರ್ನಿಯಾದಲ್ಲಿ ಉಪನ್ಯಾಸ ನೀಡುತ್ತಿದ್ದಾಗ, ಸ್ವಾಮೀಜಿ, ಭಾರತದಲ್ಲಿ ಸಂಗೀತ ಮತ್ತು ನಾಟ್ಯಗಳನ್ನು ಸಹ ಧರ್ಮವೆಂದೇ ಜನ ಪರಿಭಾವಿಸಿದ್ದಾರೆ ಎಂದು ಹೇಳಿದ್ದಾರೆ.

“ಭಾರತದಲ್ಲಿ ನಾಟಕವು ಬಹಳ ಪವಿತ್ರ ಕಲೆಯಾಗಿತ್ತು. ನಾಟಕ ಮತ್ತು ಸಂಗೀತವನ್ನು ಧರ್ಮವೆಂದೇ ಜನ ತಿಳಿದಿದ್ದಾರೆ. ಮನತುಂಬಿ ಹಾಡುವ ಯಾವುದೇ ಒಂದು ಹಾಡಿನಿಂದ ಮುಕ್ತಿಯನ್ನು ಪಡೆಯಬಹುದು.

“ಧ್ಯಾನದಿಂದ ತಲುಪುವ ಗುರಿಯನ್ನೇ ಸಂಗೀತವು ತಲುಪಿಸುತ್ತದೆ ಎಂದು ಸರ್ವರ ಅಭಿಪ್ರಾಯ.”

ಸ್ವಾಮೀಜಿಯವರು ಅಮೆರಿಕದ ಮಹಿಳೆಯೊಬ್ಬರಿಗೆ ಬರೆದ ಪತ್ರದಲ್ಲಿ ಗಾನವನ್ನು ಪೂಜೆಗೆ ಹೋಲಿಸುತ್ತಾರೆ: “ಸಂಗೀತವು ಕಲೆಗಳಲ್ಲಿ ಅತ್ಯಂತ ಉನ್ನತ ಕಲೆ. ಅದನ್ನು ಅರಿತವರಿಗೆ ಅದೇ ಉತ್ತಮ ಪೂಜೆ.”

ಸ್ವಾಮೀಜಿ ತಮ್ಮ ಉಪನ್ಯಾಸದ ತರಗತಿಯೊಂದರಲ್ಲಿ ಪರಿಪೂರ್ಣ ಸಂಗೀತದ ರಹಸ್ಯವನ್ನು ಹೀಗೆ ವಿವರಿಸುತ್ತಾರೆ: “ಧ್ರುಪದ್ ಮತ್ತು ಖಯಾಲ್‌ಗಳಲ್ಲಿ ವಿಶೇಷ ಜ್ಞಾನವಿದೆ. ಆದರೆ ಕೀರ್ತನೆಗಳಲ್ಲಿ ನಿಜವಾದ ಸಂಗೀತವಿದೆ; ಏಕೆಂದರೆ ಅದರಲ್ಲಿ ಭಾವವಿದೆ. ಭಾವವೇ ಆತ್ಮ; ಭಾವವೇ ಎಲ್ಲದರ ರಹಸ್ಯ. ಧ್ರುಪದ್ ಮುಂತಾದ್ದರಲ್ಲಿ ಇರುವ ಜ್ಞಾನವನ್ನು ಕೀರ್ತನೆಗೆ ಜೋಡಿಸಿದರೆ. ಆಗ ಪರಿಪೂರ್ಣ ಸಂಗೀತ ಅರಳುತ್ತದೆ.”

ಪಾಶ್ಚಿಮಾತ್ಯ ಸಂಗೀತದಲ್ಲಿ ತರಬೇತಿ ಇಲ್ಲದ ಭಾರತೀಯರಿಗೆ ಅದು 'ಊಳಿಡುವ ನರಿಗಳ ಕೂಗಿನಂತಿರುತ್ತದೆ.' ಪಾಶ್ಚಿಮಾತ್ಯ ದೇಶಗಳಿಗೆ ಭೇಟಿ ನೀಡುವ ಮುನ್ನ ಸ್ವಾಮೀಜಿಯವರಿಗೂ ಇದೇ ಅಭಿಪ್ರಾಯವಿತ್ತು. ಅಲ್ಲಿಗೆ ಹೋದಮೇಲೆ ಅವರು ಆಸಕ್ತಿ ವಹಿಸಿ ಆ ಸಂಗೀತವನ್ನು ಕೇಳಲಾರಂಭಿಸಿದರು. ಅದರ ಸೂಕ್ಷ್ಮತೆಗಳನ್ನು ಗಮನವಿಟ್ಟು ಅಧ್ಯಯನ ಮಾಡತೊಡಗಿದರು. ಇದರಿಂದಾಗಿ ಅದರಲ್ಲಿ ಅವರಿಗೆ ಒಲವುಂಟಾಯಿತು. ಆ ಸಂಗೀತದಲ್ಲಿನ ಸಾಮರಸ್ಯದ ಪರಿಪೂರ್ಣತೆಯನ್ನು ಕಂಡು ಮೆಚ್ಚುಗೆಯಾಯಿತು. ಅವರ ಅಭಿಪ್ರಾಯದಂತೆ ಭಾರತೀಯ ಸಂಗೀತದಲ್ಲಿ ಈ ಸಾಮರಸ್ಯದ ಕೊರತೆಯಿದೆ.

ಸ್ವಾಮೀಜಿಯವರ ನಿಖರವಾದ ದೃಷ್ಟಿಯಲ್ಲಿ ನೈಜ ಭಾರತೀಯ ಸಂಗೀತವು 'ಧ್ರುಪದ್' ಮತ್ತು 'ಕೀರ್ತನೆ'ಗಳಲ್ಲಿ ಅಡಗಿದೆ. ಇಸ್ಲಾಂ ಸಂಸ್ಕೃತಿಯ ಪ್ರಭಾವ ಬೀಳುವುದಕ್ಕೆ ಮುನ್ನ, ಈ ಎರಡೂ ಕಾಲಕಾಲಕ್ಕೆ ಸುಧಾರಣೆ ಮತ್ತು ಬೆಳವಣಿಗೆಗಳನ್ನು ಕಂಡು ಸರಿಯಾದ ಪಥದಲ್ಲಿ ಸಾಗುತ್ತಿದ್ದುವು. ಇಸ್ಲಾಂ ಸಂಸ್ಕೃತಿಯ ಪ್ರಭಾವದಿಂದಾಗಿ ಅವು ವಿರೂಪಗೊಂಡು ಸ್ವಂತಿಕೆಯನ್ನು ಕಳೆದುಕೊಂಡವು. ಈ ಅಭಿಪ್ರಾಯವನ್ನು ಸ್ವಾಮೀಜಿ ಪದೇಪದೇ ಹೇಳುತ್ತಿದ್ದರು.

ಸ್ವಾಮಿ ವಿವೇಕಾನಂದರು ಒಬ್ಬ ಕವಿಯೂ ಆಗಿದ್ದರು. ಅವರು ಸಂಸ್ಕೃತ ಮತ್ತು ಬಂಗಾಳಿ ಭಾಷೆಯಲ್ಲಿ ಕೆಲವು ಸ್ತೋತ್ರಗಳನ್ನು ರಚಿಸಿರುವುದಲ್ಲದೆ, ಬಂಗಾಳಿ ಭಾಷೆಯಲ್ಲಿ ಕೆಲವು ಗೀತೆಗಳನ್ನು ರಚಿಸಿದ್ದಾರೆ. ಅವರ **'ನಿಖಿಲ–ಭುವನ–ಜನ್ಮ'** (ಶಿವಸ್ತೋತ್ರ), **'ಕಾ ತ್ವಂ ಶಿವೇ ಶುಭಕರೇ'** (ದೇವೀಸ್ತುತಿ) ಮತ್ತು **'ಆಚಂಡಾಲಾಪ್ರತಿಹತರಯೋ'** (ಶ್ರೀರಾಮಕೃಷ್ಣರ ಸ್ತೋತ್ರ) ಎಂಬ ರಚನೆಗಳು ಸಾಹಿತ್ಯ ಸೊಬಗಿನ ಹಾಗೂ ಅಧ್ಯಾತ್ಮ ಮತ್ತು ಭಕ್ತಿಭಾವಗಳ, ಅಪೂರ್ವ ಸಮಾಗಮವಾಗಿವೆ. ಅವರ ಇನ್ನೊಂದು ಪ್ರಸಿದ್ಧ ಕೃತಿ **'ಓಂ ಹ್ರೀಂ ಋತಂ...'** ಎಂದು ಆರಂಭವಾಗುವ ಶ್ರೀರಾಮಕೃಷ್ಣರ ಮೇಲಿನ ರಚನೆಯನ್ನು ರಾಮಕೃಷ್ಣ ಸಂಘದ ಎಲ್ಲ ಕೇಂದ್ರಗಳಲ್ಲೂ ಸಂಜೆಯ ಆರತಿಯ ವೇಳೆ ಹಾಡುತ್ತಾರೆ.

ಅವರು ಬಂಗಾಳಿ ಭಾಷೆಯಲ್ಲಿ ರಚಿಸಿರುವ **'ಖಂಡನ–ಭವ–ಬಂಧನ...'** ಸ್ತೋತ್ರವು ಅತಿ ಪ್ರಸಿದ್ಧವಾದುದು. ಇದನ್ನು ರಾಮಕೃಷ್ಣ ಮಠದ ಎಲ್ಲಾ ಶಾಖಾಕೇಂದ್ರಗಳಲ್ಲೂ ಸಂಜೆ ಆರತಿಯ ವೇಳೆ ಹಾಡುತ್ತಾರೆ. ಈ ಸ್ತೋತ್ರವು ತನ್ನ ಗಮನಾರ್ಹವಾದ ಇಂಪಾದ ರಾಗಕ್ಕೆ ಪ್ರಸಿದ್ಧವಾಗಿದ್ದು ವೃಂದಗಾನಕ್ಕೆ ಆದರ್ಶಪ್ರಾಯವಾಗಿದೆ. ಇದನ್ನು ಪಕ್ಕವಾದ್ಯಗಳೊಡನೆ, ಮೃದಂಗ ಮತ್ತು ತಾಳಗಳೊಡನೆ ವೃಂದಗಾನವಾಗಿ ಭಕ್ತಸ್ತೋಮದ ಜೊತೆ ಹಾಡಿದರೆ ಅದು ಚೇತೋಹಾರಿಯೂ ಸ್ಫೂರ್ತಿದಾಯಕವೂ ಆಗುವುದು.

ಸ್ವಾಮೀಜಿಯವರು ಪರಾತ್ಪರ ಬ್ರಹ್ಮವನ್ನು ಕುರಿತು ರಚಿಸಿದ **'ಏಕರೂಪ ಅರೂಪ ನಾಮ'** ಎಂಬ ಹಾಡು ಮತ್ತು ಶಿವ ಮಹಾದೇವನನ್ನು ಕುರಿತು ರಚಿಸಿದ **'ತಾಥೈಯ್ಯ'** ಮತ್ತು **'ಹರ ಹರ ಭೂತನಾಥ'** ಎಂಬ ಹಾಡುಗಳು ಮಧುರವೂ, ಸುಶ್ರಾವ್ಯವೂ, ಲಯಬದ್ಧವೂ ಆಗಿವೆ.

ಹೀಗೆ ನಾವು ಸ್ವಾಮಿ ವಿವೇಕಾನಂದರು ಅಧ್ಯಾತ್ಮಗುರು, ಸಮಾಜಸುಧಾರಕ, ದೇಶಭಕ್ತ, ಪ್ರಕಾಂಡಪಂಡಿತ, ಪ್ರಚಂಡವಾಗ್ಮಿ, ಮತ್ತು ಶ್ರೇಷ್ಠ ಲೇಖಕರಾಗಿದ್ದಂತೆ ಶ್ರೇಷ್ಠ ಸಂಗೀತಗಾರರೂ ಆಗಿದ್ದರೆಂದು ನೋಡಬಹುದು.



## ವಿವೇಕಾನಂದ ಘಟನಾವಳಿ

• ಸ್ವಾಮಿ ವಿವೇಕಾನಂದರನ್ನು ಕುರಿತು ಮಿ. ಫ್ರಾನ್ಸಿಸ್ ಲೆಗೆಟ್ ಹೀಗೆ ಹೇಳುತ್ತಾರೆ: "ನಾನು ಭೇಟಿಯಾದ ಸರ್ವಶ್ರೇಷ್ಠ ವ್ಯಕ್ತಿಯೇ ಅವರು." "ನೀವು ಹೀಗೆ ಹೇಳಲು ಕಾರಣವೇನು?" ಎಂದು ಅವರನ್ನು ಪ್ರಶ್ನಿಸಿದಾಗ ಅವರು ಹೀಗೆ ಹೇಳುತ್ತಾರೆ: "ಸ್ವಾಮೀಜಿಯವರಲ್ಲಿ common sense (ಸಾಮಾನ್ಯ ಜ್ಞಾನ) ವಿಶೇಷವಾಗಿತ್ತು. 'ಧರ್ಮ' ಎನ್ನುವುದು ಯಾವುದೇ ವಿಚಿತ್ರ ಸ್ಥಿತಿ ಅಲ್ಲ. ಅದು ವ್ಯಕ್ತಿಯೊಬ್ಬನ ಜೀವನದ ಉನ್ನತವಾದ ಆಯಾಮ. ಸ್ವಾಮೀಜಿಯವರು ಸದಾ ಪರಮಾನಂದದಲ್ಲಿ ಇರುತ್ತಿದ್ದರು. ಏಕೆಂದರೆ ತಾವು 'ದೈವತ್ವದ ಮೂರ್ತರೂಪ' ಎಂಬ ಅರಿವು ಅವರಿಗೆ ಸದಾಕಾಲವೂ ಜಾಗೃತವಾಗಿತ್ತು. ಈ ಅರಿವನ್ನು ಅವರು ಇತರರಿಗೂ ಧಾರಾಳವಾಗಿ ನೀಡಬಲ್ಲವರಾಗಿದ್ದರು."

• ಸ್ವಾಮೀಜಿಯ ಅನುಯಾಯಿಯಾದ ಮಿಸ್ ಮ್ಯಾಕ್ಲೌಡ್ ಸಾಮಾನ್ಯವಾಗಿ ಆರು ತಿಂಗಳು ಭಾರತದಲ್ಲಿ ಹಾಗೂ ಆರು ತಿಂಗಳು ಅಮೇರಿಕದಲ್ಲಿರುತ್ತಿದ್ದರು. ಬಹುಶಃ ೧೯೩೦ ರಲ್ಲಿ ಆಕೆ ಕೊಲ್ಕತಾಗೆ ಹೋಗುವ ದಾರಿಯಲ್ಲಿ ಮದ್ರಾಸಿಗೆ ಬಂದಿದ್ದರು. ಆಕೆ ಟ್ಯಾಕ್ಸಿಯಲ್ಲಿ ಬಂದರಿನಿಂದ ಮದ್ರಾಸ್ ಆಶ್ರಮಕ್ಕೆ ಬಂದಾಗ ಮಧ್ಯಾಹ್ನ ೧.೩೦ ಗಂಟೆಯಾಗಿತ್ತು. ದೇವಾಲಯ ಮುಚ್ಚಿತ್ತು. ಅಧ್ಯಕ್ಷರಾದ ಸ್ವಾಮಿ ಶರ್ವಾನಂದರ ಹತ್ತಿರ, "ನಾನು ಸ್ವಾಮೀಜಿಯವರ ಕೋಣೆಗೆ ಹೋಗಬೇಕಾಗಿದೆ" ಎಂದರು ಮ್ಯಾಕ್ಲೌಡ್. ಸ್ವಾಮಿ ಶರ್ವಾನಂದರು ವಿನಯದಿಂದ, "ಸ್ವಾಮೀಜಿ ಈಗ ವಿಶ್ರಾಂತಿ ಪಡೆಯುತ್ತಿದ್ದಾರೆ. ನೀವು ೪.೦೦ ಗಂಟೆಯವರೆಗೆ ಕಾಯಬೇಕಾಗುತ್ತದೆ" ಎಂದರು. "ಸ್ವಾಮೀಜಿಯವರಿಗೆ ವಿಶ್ರಾಂತಿ! ಇದೇನು ಮೂರ್ಖತನ! ಸ್ವಾಮೀಜಿಯವರು ಬದುಕಿದ್ದರೆ ನನ್ನನ್ನು ಬರಮಾಡಿಕೊಳ್ಳಲು ಬಂದರಿಗೇ ಬರುತ್ತಿದ್ದರು. ನೀವು ಹೇಳುತ್ತಿದ್ದೀರಿ, ಅವರು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾರೆಂದು! ಕೋಣೆಯ ಬಾಗಿಲನ್ನು ತೆರೆಯಿರಿ" ಎಂದರು ಮ್ಯಾಕ್ಲೌಡ್. ಕಡೆಗೆ ಸ್ವಾಮಿ ಶರ್ವಾನಂದರು ಸ್ವಾಮೀಜಿಯವರ ಕೋಣೆಯ ಬಾಗಿಲನ್ನು ತೆರೆಯಲು ಪೂಜಾರಿಗೆ ಹೇಳಿದರು. ಸ್ವಾಮೀಜಿಯವರ ಭಾವಚಿತ್ರವನ್ನು ದಿಂಬಿನ ಮೇಲೆ ಕೂರಿಸಲಾಯಿತು. ಮ್ಯಾಕ್ಲೌಡ್ ಹೋಗಿ ಸ್ವಾಮೀಜಿಯವರ ಸನ್ನಿಧಿಯ ಹತ್ತಿರ ಕಣ್ಣುಮುಚ್ಚಿ ಕುಳಿತುಕೊಂಡರು. ಸ್ವಲ್ಪಹೊತ್ತಾದ ಮೇಲೆ ಮಠದಿಂದ ಬಂದರಿಗೆ ಮರಳಿದರು. ಪ್ರೇಮದ ಬಲ ಅಂಥದು! ಈ ಅಮೇರಿಕದ ಮಹಿಳೆಯ ಪ್ರಾಮಾಣಿಕ ಪ್ರೇಮವು ಸಾಂಪ್ರದಾಯಿಕ ಹಿಂದೂ ಆಶ್ರಮದ ಬಿಗಿ ನಿಯಮಗಳನ್ನೂ ಬದಲಾಯಿಸುವಂತೆ ಮಾಡಿತಲ್ಲ!

(ಸಂಗ್ರಹ: *ಸ್ವಾಮಿ ಚೇತನಾನಂದ;* ಅನುವಾದ: ಮಾತಾ ತ್ಯಾಗಮಯೀ)

# ರಾಷ್ಟ್ರ ಜಾಗೃತಿಯ ಹರಿಕಾರ

## ಸ್ವಾಮಿ ವಿವೇಕಾನಂದ

ಸ್ವಾಮಿ ಭಜನಾನಂದ

ಸ್ವಾಮಿ ವಿವೇಕಾನಂದರು ಭಾರತೀಯ ರಾಷ್ಟ್ರೀಯತೆಯ ಪ್ರಪ್ರಥಮ ಪ್ರತಿಪಾದಕರಲ್ಲಿ ಒಬ್ಬರು. ಇವರ ರಾಷ್ಟ್ರೀಯತೆಯ ಸಿದ್ಧಾಂತವು ವಿಶಾಲವಾಗಿತ್ತು; ರಾಷ್ಟ್ರಜೀವನದ ಸಕಲ ಅಂಶಗಳನ್ನೂ ತನ್ನ ತೆಕ್ಕೆಯಲ್ಲಿ ತಂದುಕೊಂಡಿತ್ತು. ಹಾಗೆಯೇ ಅತ್ಯಂತ ಮಾನವೀಯವಾಗಿಯೂ, ಅನುಷ್ಠಾನಪ್ರದವಾಗಿಯೂ ಇತ್ತು. ಇದಕ್ಕಿಂತಲೂ ಹೆಚ್ಚಿನದಾಗಿ, ಸ್ವಾಮೀಜಿ ಪ್ರತಿಪಾದಿಸಿದ ರಾಷ್ಟ್ರೀಯತೆಯು ಈ ನಾಡಿನ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಚೈತನ್ಯವನ್ನು ಪ್ರಖರವಾಗಿ ಸಂಕೇತಿಸುತ್ತಿತ್ತು. ಈ ಎಲ್ಲ ಅಂಶಗಳನ್ನು ವಿದ್ವತ್ಪೂರ್ಣವಾಗಿ, ಸಾಮಾಜಿಕ, ಐತಿಹಾಸಿಕ ಮತ್ತು ತಾತ್ತ್ವಿಕ ದೃಷ್ಟಿಯಿಂದ ಚರ್ಚಿಸಿರುವ ಪೂಜ್ಯ ಸ್ವಾಮೀಜಿಯವರು ರಾಮಕೃಷ್ಣ ಮಹಾಸಂಘದ ಸಹಾಯಕ ಕಾರ್ಯದರ್ಶಿಗಳು; ತಮ್ಮ ಅಪಾರ ವಿದ್ವತ್ತಿಗೆ ಮತ್ತು ಅನುಭಾವಕ್ಕೆ ಹೆಸರುವಾಸಿಯಾದವರು. ಮೂಲ ಆಂಗ್ಲ ಲೇಖನದ ಅನುವಾದ : ಸಂ.

**ಹೆ**ಚ್. ಜಿ. ವೇಲ್ಸ್ ಅವರು The Outline of History ಎಂಬ ಪುಸ್ತಕವನ್ನು ಬರೆದಿದ್ದಾರೆ. ಅದು ಬಹಳ ಪ್ರಸಿದ್ಧವಾದ ಗ್ರಂಥ. ಅದರಲ್ಲಿ ಒಂದು ಅಧ್ಯಾಯವಿದೆ. ಅದರ ಹೆಸರು "ಯೂರೋಪಿಯನ್ನರ ಬೌದ್ಧಿಕ ಪುನಶ್ಚೇತನ' (The Intellectual Revival of Europeans). ಯೂರೋಪಿನ ಜನರ ಸಮಷ್ಟಿ ಮಾನಸವು ೧೨, ೧೩ ಮತ್ತು ೧೪ನೇ ಶತಮಾನಗಳಲ್ಲಿ ಹೇಗೆ ಜಾಗೃತಿಯನ್ನು ಹೊಂದಿತು ಎನ್ನುವುದನ್ನು ಈ ಅಧ್ಯಾಯವು ವಿವರಿಸುತ್ತದೆ. ಈ ಜಾಗೃತಿಯ ಪರಿಣಾಮವಾಗಿ, 'ಜ್ಞಾನವನ್ನು ಪ್ರೀತಿಸುವುದು' ಮತ್ತು 'ಜ್ಞಾನವನ್ನು ಗಳಿಸಿಕೊಳ್ಳಲು ಪ್ರಯತ್ನಪಡುವುದು' – ಇವು ಜನಸಾಮಾನ್ಯರಲ್ಲಿ ಪಸರಿಸಲು ಆರಂಭವಾಯಿತು. ಧಾರ್ಮಿಕ ಹೋರಾಟಗಳ (Crusades) ಮೂಲಕ ಯೂರೋಪು ಖಂಡ ಮಧ್ಯ ಏಷಿಯಾದ ಅಭಿವೃದ್ಧಿಶೀಲ ನಾಗರಿಕತೆಯ ಜೊತೆಗೆ ಸಂಪರ್ಕಕ್ಕೆ ಬಂದಿತು. ಇದೇ ಈ ಬಗೆಯ ಬೌದ್ಧಿಕ ಜಾಗೃತಿಗೆ ಕಾರಣವಾಯಿತು. ಈ ಸಂಪರ್ಕದಿಂದಾಗಿ ಯೂರೋಪಿಯನ್ನರು ಪ್ರಾಚೀನ ಗ್ರೀಕ್ ತತ್ತ್ವಶಾಸ್ತ್ರ ಮತ್ತು ಗ್ರೀಕ್ ಸಾಹಿತ್ಯವನ್ನು ಪುನರನ್ವೇಷಿಸಿದರು; ಅರಾಬಿಕ್ ಸಂಖ್ಯೆಗಳನ್ನು ಮತ್ತು ಕಾಗದದ ತಯಾರಿಕೆಯನ್ನು ಕಲಿತುಕೊಂಡರು.

ಇವೆಲ್ಲವೂ ಯೂರೋಪಿನಲ್ಲಿ ಬೌದ್ಧಿಕ ಜಾಗೃತಿಯನ್ನು ಉಂಟುಮಾಡಿತು. ಆಕ್ಸ್‌ಫರ್ಡ್, ಪ್ಯಾರಿಸ್, ಬೊಲೊಗ್ನಾ ಮತ್ತಿತರ ಪಟ್ಟಣಗಳಲ್ಲಿ ವಿಶ್ವವಿದ್ಯಾನಿಲಯಗಳು ತಲೆಯೆತ್ತಿದವು. ಮಠಮಾನ್ಯಗಳು ಕೂಡ ಜ್ಞಾನಕೇಂದ್ರಗಳಾಗಿ ಪರಿಣಮಿಸಿದವು, ಜ್ಞಾನಾನ್ವೇಷಣೆಯ ಧ್ಯೇಯವನ್ನು ಹೊತ್ತು, ಜನರು ಯೂರೋಪಿನ ವಿವಿಧ ಭಾಗಗಳಲ್ಲಿ ಸಂಚರಿಸಲಾರಂಭಿಸಿದರು. ಪುಸ್ತಕಗಳಿಗೆ ಹೆಚ್ಚಿನ ಬೇಡಿಕೆ ಇತ್ತು. ಮುದ್ರಣ ಕೌಶಲ್ಯ ಯೂರೋಪಿನವರಿಗೆ ೧೫ನೇ ಶತಮಾನದ ತನಕ ಗೊತ್ತಿಲ್ಲದಿದ್ದುದರಿಂದ, ಪುಸ್ತಕಗಳೆಲ್ಲ ಹಸ್ತಲಿಪಿಬದ್ಧವಾಗಿದ್ದವು ಮತ್ತು ಅವನ್ನು ಕೈಯಲ್ಲಿಯೇ ಪ್ರತಿ ಮಾಡಲಾಗುತ್ತಿತ್ತು.

ಈ ಬೌದ್ಧಿಕ ಜಾಗೃತಿಯೇ ಮುಂಬರುವ ಶತಮಾನಗಳಲ್ಲಿ ಪುನರುಜ್ಜೀವನ (Renaissance), ಇದರಿಂದ ಉಂಟಾದ ವಿಜ್ಞಾನದ ಬೆಳವಣಿಗೆ, ಯಂತ್ರಗಳ ಆವಿಷ್ಕಾರ, ಜ್ಞಾನೋದಯ (Enlightenment), ಕೈಗಾರಿಕಾ ಕ್ರಾಂತಿ, ಸಾಮಾಜಿಕ ಮತ್ತು ರಾಜಕೀಯ ಏರಿಳಿತಗಳು, ಸಾಗರೋತ್ತರ ಪ್ರಯಾಣ, ಭೂಗೋಳದ ದೂರದ ಸ್ಥಳಗಳಲ್ಲಿ ವಸಾಹತುಶಾಹಿಗಳ ನಿರ್ಮಾಣ – ಇವೆಲ್ಲಕ್ಕೂ ಕಾರಣವಾಗಿ ಯೂರೋಪಿಯನ್ನರಿಗೆ ಅಪಾರ ಸಂಪತ್ತನ್ನೂ ಮತ್ತು ಅಧಿಕಾರವನ್ನೂ ಗಳಿಸಿಕೊಳ್ಳಲು ಅನುವು ಮಾಡಿಕೊಟ್ಟಿತು. ಹಾಗೆಯೇ ದಕ್ಷಿಣ ಅಮೆರಿಕಾ, ಏಷಿಯಾ ಮತ್ತು ಆಫ್ರಿಕಾದ ಜನರನ್ನು ತಮ್ಮ ಆಳ್ವಿಕೆಯಲ್ಲಿ ಇಟ್ಟುಕೊಳ್ಳುವುದಕ್ಕೆ ಸಹಾಯಮಾಡಿತು.

## ಭಾರತೀಯ ರಾಷ್ಟ್ರೀಯ ಜಾಗರಣ

ಈ ರೀತಿಯಲ್ಲಿ ಎಂದು ಯೂರೋಪಿನ ಮಾನಸದಲ್ಲಿ ಜಾಗೃತಿಯುಂಟಾಯಿತೋ, ಅದೇ ಸಮಯದಲ್ಲಿ ಭಾರತೀಯ ಮಾನಸವು ನಿದ್ರಾವಸ್ಥೆಗೆ ಹೋಯಿತೆಂಬುದು ಇತಿಹಾಸದ ಒಂದು ವಿರೋಧಾಭಾಸ. ಈ ರಾಷ್ಟ್ರೀಯ ನಿಷ್ಕ್ರಿಯತೆಯು ಸುಮಾರು ಏಳುನೂರು ವರ್ಷಗಳ ಕಾಲದವರೆಗೆ ಚಾಲ್ತಿಯಲ್ಲಿತ್ತು. ಹನ್ನೆರಡನೆಯ ಶತಮಾನದ ತನಕ, ಭಾರತವು ಜಗತ್ತಿನಲ್ಲಿಯೇ ಅತಿ ದೊಡ್ಡ ಶ್ರೀಮಂತ ದೇಶವಾಗಿತ್ತೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಆ ಕಾಲಮಾನದಲ್ಲಿ ಒಟ್ಟಾರೆ ಜಾಗತಿಕ ಉತ್ಪನ್ನಾಂಶದ (GDP) ಮೂರನೆಯ ಒಂದು ಭಾಗದಷ್ಟನ್ನು ಭಾರತವೇ ಉತ್ಪಾದಿಸುತ್ತಿತ್ತು. ಆದರೆ ೧೧ನೆಯ ಶತಮಾನ ಮೊದಲ್ಗೊಂಡು, ವಿದೇಶೀಯರ ದಬ್ಬಾಳಿಕೆಗೆ ತುತ್ತಾದಾಗ, ಅದರ ಆರ್ಥಿಕ ಪರಿಸ್ಥಿತಿ ಹದಗೆಡುತ್ತ ಬಂದಿತು. ೧೯ನೆಯ ಶತಮಾನದಲ್ಲಿ ಒಟ್ಟಾರೆ ಜಾಗತಿಕ ಉತ್ಪನ್ನಾಂಶದಲ್ಲಿ ಭಾರತದ ಪಾಲು ಶೇಕಡ ೨೫ ರಷ್ಟು ಮಾತ್ರವೇ ಇತ್ತು. ಈ ಸಮಯದಲ್ಲಿ ಚೀನಾದೇಶವು ಭಾರತವನ್ನು ಹಿಂದಕ್ಕೆ ಹಾಕಿತು. ಹಾಗೂ ಪಶ್ಚಿಮ ಯೂರೋಪಿನ ಪಾಲು ಅಧಿಕವಾಗುತ್ತಸಾಗಿತು. ೧೭೦೦ರ ನಂತರ, ಅಂದರೆ ಬ್ರಿಟಿಷರು ಭಾರತವನ್ನು ಆಕ್ರಮಿಸಿದಾಗ, ಭಾರತವು ಜಗತ್ತಿನ ಅತಿ ಬಡದೇಶಗಳಲ್ಲಿ ಒಂದಾಗಿಬಿಟ್ಟಿತು.

ಈ ಅವನತಿಯು ಕೇವಲ ಆರ್ಥಿಕ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿರಲಿಲ್ಲ. ಎಲ್ಲ ಕ್ಷೇತ್ರಗಳಲ್ಲಿಯೂ ಅದು ಕಂಡುಬಂತು. ಜಾತಿ ನಿಯಮಗಳು ಕಠಿಣವಾಗತೊಡಗಿದವು. ಇದರ ಫಲವಾಗಿ ಅತಿ ದೊಡ್ಡ ಸಂಖ್ಯೆಯ ಜನರು ಸಮಾಜದ ಮುಖ್ಯವಾಹಿನಿಯಿಂದ ಬಹಿಷ್ಕೃತರಾದರು. ಅವರನ್ನು 'ಅಸ್ಪೃಶ್ಯರು' ಎಂದು ಪರಿಗಣಿಸಲಾಯಿತು. ಜಾತಿಗಳು ಒಡೆದು ಉಪಜಾತಿಗಳು ಹುಟ್ಟಿಕೊಂಡವು. ಈ ಉಪಜಾತಿಗಳ ನಡುವೆಯೂ ವಿವಾಹ ಮತ್ತು ಸಾಮೂಹಿಕ ಭೋಜನಗಳು ನಿಷಿದ್ಧವಾದವು. ಇದರ ಫಲವಾಗಿ ಸಾಮಾಜಿಕ ಸಂಘಟನೆಯು ನಷ್ಟವಾಯಿತು. ಮೌರ್ಯ ಮತ್ತು ಗುಪ್ತ ಚಕ್ರಾಧಿಪತ್ಯಗಳ ನಂತರ, ಭಾರತವು ಸಣ್ಣ ಸಣ್ಣ ರಾಜ್ಯಗಳಾಗಿ ವಿಭಜನೆ ಹೊಂದಿತು. ಅವು ಪರಸ್ಪರ ಕಾದಾಡಲು ಆರಂಭಿಸಿದವು. ಇದರ ಫಲವಾಗಿ ರಾಷ್ಟ್ರೀಯ ಏಕತೆಗೂ ಧಕ್ಕೆ ಒದಗಿತು. ಸ್ತ್ರೀಯರಿಗೆ ವಿದ್ಯಾಭ್ಯಾಸವನ್ನು ನಿರಾಕರಿಸಲಾಯಿತು. ಹೀಗಾಗಿ ಜನಸಂಖ್ಯೆಯ ಒಂದು ಬೃಹತ್ ಭಾಗದ ಜನರು ನಿರಕ್ಷರಸ್ಥರಾದರು. ಜನರ ಆಧ್ಯಾತ್ಮಿಕ ಜೀವನವು ಕಂದಾಚಾರ, ಪುರೋಹಿತಶಾಹಿತನ, ದೇವಮಂದಿರದ ವ್ಯಭಿಚಾರ, ಭ್ರಷ್ಟ ಧಾರ್ಮಿಕ ಗುಂಪುಗಳು ಮತ್ತು ಅನೈತಿಕ ಆಚರಣೆಗಳು –ಇವುಗಳಿಂದ ದೂಷಿತವಾಯಿತು. ವಿಜ್ಞಾನ, ಕಲೆ, ಸಾಹಿತ್ಯ, ತತ್ತ್ವಶಾಸ್ತ್ರ – ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ಬೌದ್ಧಿಕ ಸೃಜನಾತ್ಮಕತೆಯು ಕಳೆಗುಂದಿತು. ಹತ್ತನೆಯ ಶತಮಾನದ ತರುವಾಯ ಭಾರತೀಯ ಮಾನಸದಲ್ಲಿ ಪ್ರಕೃತಿಯ ಬಗ್ಗೆ ಆಸಕ್ತಿ ಮತ್ತು ನೈಸರ್ಗಿಕ ಜಗತ್ತಿನ ಕಡೆಗೆ ಮುಕ್ತ ಒಲವುಗಳು ಕ್ಷೀಣಿಸಿದವು. ಬ್ರಿಟಿಷ್ ಲೇಖಕರಾದ ನೈಪಾಲ್ ಅವರು ಹೇಳುವಂತೆ, ಒಂದು ರೀತಿಯ 'ಸಮಷ್ಟಿ ಜಡತೆ'ಯು ಭಾರತೀಯ ಮಾನಸವನ್ನು ಆಕ್ರಮಿಸಿಬಿಟ್ಟಿತು. ಹದಿನೆಂಟನೆಯ ಶತಮಾನದವರೆಗೂ, ಭಾರತವು ನಿದ್ರಿಸುತ್ತಿರುವ ದೈತ್ಯನಂತೆ ಕಂಡುಬಂದಿತು.

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಈ ಸುಪ್ತದೈತ್ಯನು ಜಾಗೃತಗೊಳ್ಳುವ ಲಕ್ಷಣಗಳನ್ನು ತೋರತೊಡಗಿದನು. ಮಧ್ಯಪೂರ್ವ ರಾಷ್ಟ್ರಗಳ ಅಭಿವೃದ್ಧಿ ಹೊಂದಿದ ಸಂಸ್ಕೃತಿಯ ಜೊತೆಗಿನ ಸಂಪರ್ಕವು ಹದಿಮೂರನೆಯ ಮತ್ತು ಹದಿನಾಲ್ಕನೆಯ ಶತಮಾನಗಳಲ್ಲಿ ಯೂರೋಪಿನ ಮಾನಸವನ್ನು ಬಡಿದೆಬ್ಬಿಸಿತು. ಅದೇ ರೀತಿ, ಪಾಶ್ಚಿಮಾತ್ಯ ಸಂಸ್ಕೃತಿಯ ಜೊತೆಗಿನ ಸಂಸರ್ಗವು ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತೀಯ ಮಾನಸವನ್ನು ಜಾಗೃತಗೊಳಿಸಿತು. ಈ ಭಾರತೀಯ ರಾಷ್ಟ್ರೀಯ ಜಾಗರಣದ ಬಗ್ಗೆ ಮೊಟ್ಟಮೊದಲು ಧ್ವನಿಯೆತ್ತಿದವರೆಂದರೆ ಸ್ವಾಮಿ ವಿವೇಕಾನಂದರು. ದಕ್ಷಿಣ ಭಾರತದ ನಗರವಾದ ರಾಮನಾಡಿನಲ್ಲಿ ೧೮೯೭ರಲ್ಲಿ ಮಾಡಿದ ತಮ್ಮ ಭಾಷಣದಲ್ಲಿ ಸ್ವಾಮೀಜಿ ಹೀಗೆ ಹೇಳುತ್ತಾರೆ:

"ಸುದೀರ್ಘ ರಾತ್ರಿಯು ಕಡೆಗೆ ಇಂದು ಕೊನೆಗಾಣುವಂತೆ ತೋರುತ್ತಿದೆ. ಬಹುಕಾಲದ ಕಷ್ಟಸಂಕಟಗಳು ಕೊನೆಗೆ ಇಂದು ಸಮಾಪ್ತಿಗೊಳ್ಳುವಂತಿದೆ... ಅದೋ ನೋಡಿ, ನಿದ್ರಿಸುವುದು ಜಾಗೃತವಾಗುತ್ತಿದೆ... ನಮ್ಮೀ ಮಾತೃಭೂಮಿಯು ತನ್ನ ದೀರ್ಘ ನಿದ್ರೆಯನ್ನು ತ್ಯಜಿಸಿ ಜಾಗೃತವಾಗುತ್ತಿರುವುದನ್ನು ಕುರುಡರು ಮಾತ್ರ ಕಾಣಲಾರರು... ಆಕೆ ಇನ್ನು ನಿದ್ದೆ ಹೋಗುವುದಿಲ್ಲ. ಯಾವ ಬಾಹ್ಯಶಕ್ತಿಯೂ ಇನ್ನು ಆಕೆಯನ್ನು ಹಿಮ್ಮೆಟ್ಟಿಸಲಾರದು. ಏಕೆಂದರೆ ಆ ಮಹಾಕಾಳಿಯು ಪ್ರತಿಷ್ಠಾಪನೆಗೊಳ್ಳುತ್ತಿದ್ದಾಳೆ" (*ಕೃತಿಶ್ರೇಣಿ, ಸಂ. ೩, ಪುಟ ೩೬*).

'ಮಹಾಕಾಳಿ'ಯಾದ ಭಾರತದ ಜಾಗರಣದ ಕಥನವೇ, ಸ್ವಾಮಿ ವಿವೇಕಾನಂದರು ಈ ಜಾಗೃತಿಯಲ್ಲಿ ವಹಿಸಿದ ಪಾತ್ರವೇ ಈ ಲೇಖನದ ವಿಷಯ.

## ಭಾರತೀಯ ರಾಷ್ಟ್ರೀಯ ಜಾಗರಣಕ್ಕೆ ವಿವೇಕಾನಂದರ ಕೊಡುಗೆಗಳು

ಹತ್ತೊಂಬತ್ತನೆಯ ಶತಮಾನದಲ್ಲಿ ಸ್ವಾಮೀಜಿ ಗೈದ ಮಹಾನ್ ಸಾಧನೆಯನ್ನು ಅರ್ಥಮಾಡಿಕೊಳ್ಳಲು ಅಂದಿನ ಭಾರತದ, ಅದರಲ್ಲೂ ಬಂಗಾಳ ಪ್ರದೇಶದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಪರಿಸ್ಥಿತಿಯ ಬಗ್ಗೆ ತಿಳಿದುಕೊಳ್ಳುವುದು ಅವಶ್ಯ. ಈ ಬಗ್ಗೆ ಪ್ರಸಿದ್ಧ ವಿದ್ವಾಂಸರು ಈಗಾಗಲೇ ಹಲವಾರು ಅಧ್ಯಯನಗಳನ್ನು ನಡೆಸಿದ್ದಾರೆ. ಇಲ್ಲಿ ನಾವು ನಮ್ಮದೇ ಆದ ಅಧ್ಯಯನವನ್ನು ನಡೆಸಿದ್ದೇವೆ. ಅದರ ಆಧಾರದ ಮೇಲೆ ಸ್ವಾಮಿ ವಿವೇಕಾನಂದರು ಈ ಕೆಳಗಿನ ಕೊಡುಗೆಗಳನ್ನು ನೀಡಿದರು ಎಂಬ ನಿರ್ಧಾರಕ್ಕೆ ಬಂದಿದ್ದೇವೆ.

೧. **ರಾಷ್ಟ್ರೀಯ ಪ್ರಜ್ಞೆಯ ಸೃಷ್ಟಿ :** ಹತ್ತೊಂಬತ್ತನೆಯ ಶತಮಾನದಲ್ಲಿದ್ದ ಸಮಾಜ ಸುಧಾರಣಾ ಸಂಸ್ಥೆಗಳು ಮತ್ತು ಸಾಮಾಜಿಕ ಮುಖಂಡರು ಪ್ರಾದೇಶಿಕ ಆಂದೋಲನಗಳನ್ನು ಮಾತ್ರವೇ ಪ್ರತಿನಿಧಿಸುತ್ತಿದ್ದರು. ಅವರು ರಾಷ್ಟ್ರೀಯ ಐಕಮತ್ಯವನ್ನಾಗಲಿ ಅಥವಾ ರಾಷ್ಟ್ರೀಯ ಪ್ರಜ್ಞೆಯನ್ನಾಗಲಿ ಸೃಜಿಸಲಿಲ್ಲ.

ಹಾಗಿರದಿದ್ದರೂ ಕೂಡ, ಆ ದಿನಗಳ ಕಡೆಗೆ ನಾವು ದೃಷ್ಟಿ ಹಾಯಿಸಿದಾಗ, ನಮಗೆ ತೋರುವುದು ಏನೆಂದರೆ, ಅಂದಿನ ಧಾರ್ಮಿಕ ಆಂದೋಲನಗಳ ಮುಖಂಡರ ಸೀಮಿತ ವ್ಯಾಪ್ತಿ. ಜಾಗತಿಕ ದೃಷ್ಟಿಕೋನವಿರಲಿ, ಅವರು ರಾಷ್ಟ್ರೀಯ ದೃಷ್ಟಿಕೋನವನ್ನೂ ಬೆಳೆಸಿಕೊಂಡಿರಲಿಲ್ಲ. ಇದಕ್ಕೆ ಪ್ರತಿಯಾಗಿ, ಪ್ರಾರಂಭಿಕ ಹಂತದಿಂದಲೇ ಸ್ವಾಮಿ ವಿವೇಕಾನಂದರು ರಾಷ್ಟ್ರೀಯ ಮನೋಭಾವನೆಯನ್ನು ಹೊಂದಿದ್ದರು. ಅದಾದರೋ ಅವರ ವಿಶ್ವಾತ್ಮಕ ಮನೋಭಾವದ ಒಂದು ಭಾಗವೇ ಆಗಿತ್ತು.

ಸ್ವಾಮಿ ವಿವೇಕಾನಂದರನ್ನು ಭಾರತೀಯ ರಾಷ್ಟ್ರೀಯತೆಯ ಪ್ರಪ್ರಥಮ ಪ್ರತಿಪಾದಕರೆಂದು ಹಲವಾರು ವಿದ್ವಾಂಸರು ಮತ್ತು ಚಿಂತಕರು ಪರಿಗಣಿಸುತ್ತಾರೆ. Encyclopaedia of Social Sciences ಎಂಬ ಸಮಾಜಶಾಸ್ತ್ರದ ವಿಶ್ವಕೋಶದಲ್ಲಿ ಫ್ಲೋರೆನ್ಸ್ ಮಿಶ್‌ನನ್ ಎಂಬ ವಿದ್ವಾಂಸರು ಹೀಗೆ ಬರೆಯುತ್ತಾರೆ: "ವಿವೇಕಾನಂದರು ಒಂದು ದೃಷ್ಟಿಯಲ್ಲಿ ನೂತನ ಭಾರತೀಯ ರಾಷ್ಟ್ರೀಯತೆಯ ಅಪ್ರಜ್ಞಾಪೂರ್ವಕ (unconscious) ಪ್ರವಾದಿ. ಅವರ ತತ್ತ್ವಗಳ ಪ್ರಭಾವವನ್ನು ಈ ರಾಷ್ಟ್ರೀಯತೆಯ ಭಾವನೆಯು ತೋರ್ಪಡಿಸುತ್ತದೆ." ("Vivekananda was in a sense the unconscious prophet of the new Indian Nationalism, whose ideology shows the impress of his doctrines.") ಪ್ರಸಿದ್ಧ ಇತಿಹಾಸಕಾರರೂ ವಿದ್ವಾಂಸರೂ ಆದ ಶ್ರೀ ಆರ್. ಸಿ. ಮಜುಂದಾರ್ ಅವರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಇನ್ನೊಬ್ಬ ಇತಿಹಾಸಕಾರರಾದ ಶ್ರೀ ಆರ್. ಜಿ. ಪ್ರಧಾನ್ ಅವರನ್ನು ಉಲ್ಲೇಖಿಸುತ್ತ ಅವರು ಹೀಗೆ ಬರೆಯುತ್ತಾರೆ: "ಸ್ವಾಮಿ ವಿವೇಕಾನಂದರನ್ನು ಭಾರತೀಯ ರಾಷ್ಟ್ರೀಯತೆಯ ಜನಕರೆಂದು ಕರೆಯಬಹುದು. ಬಹುಮಟ್ಟಿಗೆ ಅದನ್ನು ಸೃಷ್ಟಿಸಿದವರು ಅವರೇ. ಇದಲ್ಲದೆ ಅವರ ಜೀವನವು ಈ ರಾಷ್ಟ್ರೀಯತೆಯ ಅತ್ಯುನ್ನತವಾದ ಮತ್ತು ಉದಾತ್ತವಾದ ಮೌಲ್ಯಗಳ ಮೂರ್ತರೂಪವೇ ಆಗಿದೆ." ಇದೇ ಬಗೆಯ ನಿಲುವನ್ನು ಹೆಸರುವಾಸಿಯಾದ ಇತಿಹಾಸಜ್ಞರೂ ಹಾಗೂ ವಿದ್ವಾಂಸರೂ ಆದ ರೆವೆರೆಂಡ್ ಸಿ.ಎಫ್. ಆಂಡ್ರ್ಯೂಸ್ ಅವರು ವ್ಯಕ್ತಪಡಿಸುತ್ತಾರೆ. ಆಂಗ್ಲೇಯರಾದ ಇವರು ಕ್ರೈಸ್ತ ಮಿಶನರಿಯಾಗಿ ಭಾರತಕ್ಕೆ ಬಂದರು. ಆದರೆ ಮುಂದೆ ಮಹಾತ್ಮ ಗಾಂಧಿಯವರ ಅನುಯಾಯಿಯಾದರು. ಅವರು ಹೀಗೆ ಹೇಳುತ್ತಾರೆ: "ಸ್ವಾಮೀಜಿಯವರ ನಿರ್ಭೀತ ದೇಶಭಕ್ತಿಯು ಭಾರತದಾದ್ಯಂತವೂ ರಾಷ್ಟ್ರೀಯ ಆಂದೋಲನಕ್ಕೆ ಹೊಸ ಛಾಯೆಯನ್ನೇ ನೀಡಿತು. ಭಾರತದ ನೂತನ ಜಾಗರಣಕ್ಕೆ, ಆ ಕಾಲದ ಯಾವುದೇ ಒಬ್ಬನೇ ವ್ಯಕ್ತಿಗಿಂತ, ಅತಿ ಹೆಚ್ಚು ಕೊಡುಗೆಯನ್ನು ಅವರು ನೀಡಿದ್ದಾರೆ; ಕಾಂಗ್ರೆಸ್‌ನ ಜೊತೆಗೆ ಸಂಬಂಧ ಇಟ್ಟುಕೊಳ್ಳದಿದ್ದರೂ, ಆ ಸಂಸ್ಥೆಯ ಕಾರ್ಯನೀತಿಯನ್ನು ರೂಪಿಸಿದ್ದಾರೆ ಮತ್ತು ಅದರ ವಿಕಾಸವನ್ನು ಉತ್ತೇಜಿಸಿದ್ದಾರೆ."

> **"ಜಗತ್ತಿನಲ್ಲಿ ಯಾವುದಾದರೂ ಒಂದು ದೇಶವು ಪುಣ್ಯಭೂಮಿಯೆಂದು ಕರೆಯಿಸಿಕೊಳ್ಳಲು ಅರ್ಹವಾಗಿದ್ದರೆ, ಜೀವಿಗಳು ತಮ್ಮ ಬಾಳಿನ ಕೊನೆಯ ಕರ್ಮವನ್ನು ಸವೆಸಲು ಬರಬೇಕಾದ ಸ್ಥಳವೊಂದಿದ್ದರೆ, ಭಗವಂತನೆಡೆಗೆ ಸಂಚರಿಸುತ್ತಿರುವ ಪ್ರತಿಯೊಬ್ಬ ಜೀವಿಯೂ ತನ್ನ ಕೊನೆಯ ಯಾತ್ರೆಯನ್ನು ಪೂರೈಸುವುದಕ್ಕೆ ಒಂದು ಕರ್ಮಭೂಮಿಗೆ ಬರಬೇಕಾಗಿದ್ದರೆ, ಯಾವುದಾದರೂ ದೇಶದಲ್ಲಿ ಮಾನವ ಕೋಟಿಯ ಮಾಧುರ್ಯ, ಔದಾರ್ಯ, ಪಾವಿತ್ರ್ಯ, ಶಾಂತಿ – ಇವುಗಳಲ್ಲಿ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಧ್ಯಾನದಲ್ಲಿ ಮತ್ತು ಅಂತರ್ಮುಖ ಜೀವನದಲ್ಲಿ ತನ್ನ ಪರಾಕಾಷ್ಠೆಯನ್ನು ಮುಟ್ಟಿದ್ದರೆ ಅದು ಭರತಖಂಡವೇ ಆಗಿದೆ."**
>
> – *ಸ್ವಾಮಿ ವಿವೇಕಾನಂದ*

ಇನ್ನೊಬ್ಬ ಇತಿಹಾಸಕಾರ ಮತ್ತು ರಾಜಕೀಯ ಮುತ್ಸದ್ದಿಯಾದ ಕೆ. ಎಮ್. ಪಣಿಕ್ಕರ್ ಅವರು ಹೀಗೆ ಬರೆಯುತ್ತಾರೆ: "ಹಿಂದೂಗಳ ನಡುವಣ ಸಮುದಾಯ ಭಾವನೆಯ ಉಗಮ ಮಾತ್ರವೇ, ಭಾರತೀಯ ರಾಷ್ಟ್ರೀಯತೆಗೆ ಕ್ರಿಯಾಶೀಲತೆಯನ್ನು ನೀಡಿರುವುದು ಮತ್ತು ಕಟ್ಟಕಡೆಗೆ ಭಾರತದ ಬಹುಸಂಖ್ಯೆಯ ವರ್ಗವನ್ನು ಒಂದು ರಾಜಕೀಯಶಕ್ತಿಯನ್ನಾಗಿ ಕೂಡಿಸಿರುವುದು. ಇದರ ಬಹುಪಾಲು ಯಶಸ್ಸು ಸೇರುವುದು ಸ್ವಾಮಿ ವಿವೇಕಾನಂದರಿಗೆ... ಆರ್ಯ ಸಮಾಜ, ಬ್ರಾಹ್ಮ ಸಮಾಜ ಮೊದಲಾದ ಇತರ ಆಂದೋಲನಗಳು, ತಮ್ಮ ತಮ್ಮ ದೃಷ್ಟಿಯಿಂದ ಅಮೂಲ್ಯವಾದವುಗಳಾದರೂ, ಸಮಾಜಸುಧಾರಣೆಯ ಪ್ರಾದೇಶಿಕ ಅಂಶಕ್ಕೆ ಮಾತ್ರವೇ ಅವು ಮಹತ್ವವನ್ನು ನೀಡಿದವು. ಹಿಂದೂ ಆಂದೋಲನಕ್ಕೆ ರಾಷ್ಟ್ರೀಯತೆಯ ಭಾವನೆಯನ್ನು ಮತ್ತು ಬಹುತೇಕ ಎಲ್ಲ ಆಂದೋಲನಗಳಿಗೂ ಸಮಾನ ಅಖಂಡ ಭಾರತೀಯ ದೃಷ್ಟಿಯನ್ನು ಪ್ರಪ್ರಥಮ ಬಾರಿಗೆ ನೀಡಿದವರು ಸ್ವಾಮಿ ವಿವೇಕಾನಂದರಲ್ಲದೆ ಬೇರಲ್ಲ."

ಈ ಆಧುನಿಕ ಕಾಲದಲ್ಲಿ ಅಖಂಡ ಭಾರತದೊಡನೆ ಮತ್ತು ಎಲ್ಲಾ ಭಾರತೀಯರೊಡನೆ ತಮ್ಮನ್ನು ತಾದಾತ್ಮ್ಯಗೊಳಿಸಿಕೊಂಡ ಮೊಟ್ಟಮೊದಲ ಭಾರತೀಯ ನೇತಾರರೆಂದರೆ ಸ್ವಾಮಿ ವಿವೇಕಾನಂದರು. ಅವರು ಭಾರತದ ಬಹುತೇಕ ಪ್ರದೇಶಗಳ ಪರ್ಯಟನ ಮಾಡಿದರು. ಹೋದಲ್ಲೆಲ್ಲಾ ಆಯಾ ಭಾಗಗಳ ಜನಸಾಮಾನ್ಯರೊಡನೆ ಬೆರೆತರು. ಅವರನ್ನೆಲ್ಲಾ ತಮ್ಮವರನ್ನಾಗಿ ಮಾಡಿಕೊಂಡರು. ಆ ಜನರೂ ಕೂಡ ಸ್ವಾಮೀಜಿಯವರನ್ನು

ಮನಸಾರೆ ಪ್ರೀತಿಸಿದರು ಮತ್ತು ತಮ್ಮವರೆಂದೇ ಭಾವಿಸಿದರು. ಭಾರತದ ಇನ್ನಾವುದೇ ನೇತಾರನಲ್ಲಿ ಇರದಿದ್ದ ಈ ಸದ್ಗುಣವು ಸ್ವಾಮಿ ವಿವೇಕಾನಂದರಲ್ಲಿ ಸಹಜವಾಗಿ ಮತ್ತು ಸಮೃದ್ಧ ಪ್ರಮಾಣದಲ್ಲಿ ಪ್ರಕಟಗೊಂಡಿತ್ತು. ಮಾತೃಭೂಮಿಯ ಕುರಿತಾದ ಅವರ ಪ್ರೀತಿಯ ಬಗ್ಗೆ ಬರೆಯುತ್ತಾ ಭಗಿನಿ ನಿವೇದಿತಾ ಹೀಗೆ ಉದ್ಗರಿಸುತ್ತಾರೆ: "ಭಾರತವೇ ಅವರ ಎದೆಬಡಿತವಾಗಿತ್ತು. ಭಾರತವೇ ಅವರ ನಾಡಿಮಿಡಿತವಾಗಿತ್ತು. ಭಾರತವೇ ಅವರ ಹಗಲುಗನಸೂ ಆಗಿತ್ತು. ಭಾರತವೇ ಅವರ ರಾತ್ರಿಯ ಕರಾಳಕನಸೂ ಆಗಿತ್ತು... ಅವರೇ ಪೂರ್ಣವಾಗಿ ಭಾರತವಾಗಿಬಿಟ್ಟಿದ್ದರು. ರಕ್ತಮಾಂಸಗಳಿಂದ ಕೂಡಿದ ಭಾರತದ ಪ್ರತಿರೂಪವೇ ಆವರಾಗಿಬಿಟ್ಟಿದ್ದರು. ಅವರೇ ಭಾರತ. ಅದರ ಆಧ್ಯಾತ್ಮಿಕತೆ, ಪಾವಿತ್ರ್ಯತೆ, ಅರಿವು, ಶಕ್ತಿ, ದರ್ಶನ ಮತ್ತು ಭವಿಷ್ಯಗಳ ಸಂಕೇತವಾಗಿದ್ದ ಅವರೇ ನೈಜ ಭಾರತ." (*Complete Works of Nivedita,* Vol.1, p.375)

ಪ್ರತಿಯೊಬ್ಬ ಭಾರತೀಯನನ್ನೂ, ಅಸ್ಪೃಶ್ಯರೆಂದು ಕರೆಸಿಕೊಳ್ಳುವವರನ್ನೂ, ತಮ್ಮ ಸ್ವಂತ ಸಹೋದರರಂತೆ ಕಾಣಬೇಕೆಂದು ಎಲ್ಲಾ ಭಾರತೀಯರಿಗೆ ಕರೆಕೊಟ್ಟ ಮೊಟ್ಟಮೊದಲ ಭಾರತೀಯರೇ ಸ್ವಾಮಿ ವಿವೇಕಾನಂದರು. ಅವರು ತಮ್ಮ ವೀರ್ಯವತ್ತಾದ ಮಾತುಗಳಲ್ಲಿ ಹೀಗೆ ಹೇಳುತ್ತಾರೆ: "ಓ ಭಾರತವೇ, ಅಂತ್ಯಜರು, ಮೂಢರು, ದರಿದ್ರರು, ನಿರಕ್ಷರಕುಕ್ಷಿಗಳು, ಚಂಡಾಲರು ಮತ್ತು ಚಮ್ಮಾರರು –ಎಲ್ಲರೂ ನಿಮ್ಮ ರಕ್ತಬಂಧುಗಳಾದ ಸಹೋದರರು! ವೀರಾತ್ಮರೇ, ಧೀರರಾಗಿ, ನೆಚ್ಚುಗೆಡದಿರಿ. ಭಾರತೀಯರು ನಾವು ಎಂದು ಹೆಮ್ಮೆತಾಳಿ. ಸಾರಿಹೇಳಿ, ಭಾರತೀಯರು ನಾವು, ಭಾರತೀಯರೆಲ್ಲ ನಮ್ಮ ಸಹೋದರರು. ಸಾರಿ ಹೇಳಿ, ಮೂರ್ಖ ಭಾರತೀಯರೆಮ್ಮ ಸಹೋದರರು, ಪಂಚಮ ಭಾರತೀಯರೆಮ್ಮ ಸಹೋದರರು." (ವಿದ್ಯುತ್ ವಾಣಿ)

ಸ್ವಾಮಿ ವಿವೇಕಾನಂದರನ್ನು ಭಾರತೀಯ ರಾಷ್ಟ್ರೀಯತೆಯ ಜನಕರೆಂದು ಕೊಂಡಾಡಿದರೂ, ಆ ರಾಷ್ಟ್ರೀಯತೆಯು ರಾಜಕೀಯ ದೃಷ್ಟಿಯದಲ್ಲ. ಸ್ವಾಮೀಜಿ ರಾಷ್ಟ್ರೀಯಪ್ರಜ್ಞೆಯನ್ನು, ರಾಷ್ಟ್ರೀಯ ಐಕ್ಯಮತ್ಯವನ್ನು ಹುಟ್ಟುಹಾಕಲು ಪ್ರಯತ್ನಪಟ್ಟರು. ಕೇವಲ ವಿದ್ಯಾವಂತ ಮೇಲ್ವರ್ಗದ ಜನರಿಗೆ ಮಾತ್ರ ಸೀಮಿತವಾಗದೆ, ಅದಕ್ಕೆ ಬದಲಾಗಿ, ತುಳಿಯಲ್ಪಟ್ಟ ಜನಸಾಮಾನ್ಯರನ್ನೂ ಒಳಗೊಂಡ ಸಾಂಸ್ಕೃತಿಕ ಏಕತೆಯನ್ನು ಉಂಟುಮಾಡಲು ಪ್ರಯತ್ನಿಸಿದರು. ಭಾರತದ ಯಾವ ಗುರುಪುಂಗವರೂ ಈ ಕಾರ್ಯವನ್ನು ಹಿಂದೆ ಮಾಡಿರಲಿಲ್ಲ. ಇಪ್ಪತ್ತನೆಯ ಶತಮಾನದಲ್ಲಿ ಮಹಾತ್ಮ ಗಾಂಧಿ, ಜವಹರಲಾಲ್ ನೆಹರು ಮತ್ತು ನೇತಾಜಿ ಸುಭಾಷ್‌ಚಂದ್ರ ಬೋಸರು ಈ ಭಾರತೀಯ ರಾಷ್ಟ್ರೀಯತೆಯನ್ನು ಭದ್ರಬುನಾದಿಯ ಮೇಲೆ ಪ್ರತಿಷ್ಠಾಪಿಸಿದರು. ಆದರೆ ಅವರೆಲ್ಲ ಪ್ರಚುರಪಡಿಸಿದ ರಾಷ್ಟ್ರೀಯತೆಯು ಕೇವಲ ರಾಜಕೀಯ ಐಕಮತ್ಯದ್ದಾಗಿತ್ತು. (ಮುಂದುವರೆಯುವುದು)



# ರಾಮಕೃಷ್ಣ ಮಹಾಸಂಘದ ಸಂಸ್ಥಾಪಕರಾಗಿ ಸ್ವಾಮಿ ವಿವೇಕಾನಂದರು

ಸ್ವಾಮಿ ರಾಘವೇಶಾನಂದ

**ರಾ**ಮಕೃಷ್ಣ ಮಹಾಸಂಘವು ಸ್ಥಾಪನೆಯಾಗಿ ೧೧೫ ವರ್ಷಗಳು ಸಂದಿವೆ. ಭಗವಂತನು ಈ ಯುಗದಲ್ಲಿ ಶ್ರೀರಾಮಕೃಷ್ಣರ ರೂಪದಲ್ಲಿ ಅವತರಿಸಿದುದು ಹಾಗೂ ಈ ಅವತಾರದ ಕಾರ್ಯ ಪ್ರಣಾಳಿಗಳು ಮಾನವನ ಅಲ್ಪಬುದ್ಧಿಗೆ ಎಟುಕದ ವಿಷಯ. ಆದರೂ ಅವರ ಕೃಪೆಯಿಂದ ಕೆಲವು ವಿಷಯಗಳು ಸ್ಥೂಲವಾಗಿ ಅರ್ಥವಾಗುವವು:

**ಅವತಾರದ ಉದ್ದೇಶ:** ಶ್ರೀರಾಮಕೃಷ್ಣರ ಅವತಾರದ ಉದ್ದೇಶ ಹಾಗೂ ಅವರ ಜೀವನದ ಘಟನೆಗಳ ಹಿಂದಿರುವ ಅರ್ಥಗಳು ಆಲೋಚನಾತೀತವಾದುವು. ಆದರೂ ಆ ದಿವ್ಯ ಜೀವನದ ಕೆಲವು ಘಟನೆಗಳು, ಯಾವ ಕಾರಣಕ್ಕಾಗಿ ಅವರು ಅವತರಿಸಿದರು ಎನ್ನುವುದನ್ನು ನಮಗೆ ಊಹಿಸಲು ಸಹಕಾರಿಯಾಗುತ್ತವೆ. ಇದೂ ಅವರ ಕೃಪೆಯೇ. ಅವುಗಳಲ್ಲಿ ಕೆಲವನ್ನು ಈ ಕೆಳಗಡೆ ಪಟ್ಟಿ ಮಾಡಲಾಗಿದೆ:

೧. ಗಯೆಯಲ್ಲಿ ಅವರ ತಂದೆಯಾದ ಕ್ಷುದಿರಾಮನ ಕನಸಿನಲ್ಲಿ ಅಲ್ಲಿಯ ದೇವರಾದ ಶ್ರೀವಿಷ್ಣುವು ದರ್ಶನವಿತ್ತು, 'ನಿನ್ನ ಮನೆಯಲ್ಲಿ ನಾನು ಜನ್ಮವೆತ್ತುತ್ತೇನೆ' ಎಂದು ಸೂಚಿಸಿದನು.

೨. ಬಾಲ್ಯದಲ್ಲೇ ಶ್ರೀರಾಮಕೃಷ್ಣರು ಬರೀ ಹಣ ಸಂಪಾದಿಸುವ ಮಾರ್ಗವನ್ನು ಸೂಚಿಸುವ ಲೌಕಿಕ ವಿದ್ಯಾಭ್ಯಾಸವನ್ನು ತಿರಸ್ಕರಿಸಿದರು.

೩. ಸಾಧನೆಯ ಸಮಯದಲ್ಲಿ ಹಣಕ್ಕೂ ಮಣ್ಣಿಗೂ ಯಾವ ವ್ಯತ್ಯಾಸವೂ ಇಲ್ಲವೆಂದು, ಗಂಗೆಯಲ್ಲಿ ಎರಡನ್ನೂ ಬಿಸಾಡಿ ವೈರಾಗ್ಯವನ್ನು ಬೆಳೆಸಿಕೊಂಡರು.

೪. ಬಾಲ್ಯದಲ್ಲಿ ಜಾತಿಪದ್ಧತಿಯೆಂಬುದು ಮೌಢ್ಯವೆಂದು ತೋರಿಸಲು, ಕೀಳುಜಾತಿಗೆ ಸೇರಿದ ಧನಿ ಕಾಮಾರಿಣಿ ಎಂಬ ಸ್ತ್ರೀಯಿಂದ ಉಪನಯನದ ನಂತರದ ಪ್ರಥಮ ಭಿಕ್ಷೆಯನ್ನು ಸ್ವೀಕರಿಸಿದರು.

೫. ತಾನು ಬ್ರಾಹ್ಮಣನೆಂಬ ಅಭಿಮಾನವನ್ನು ಹೋಗಲಾಡಿಸಿಕೊಳ್ಳಲು ಕೀಳುಜಾತಿಯವರ ಬಚ್ಚಲು ಮನೆಗಳನ್ನು ಶುದ್ಧಗೊಳಿಸಿದರು.

**ರಾಮಕೃಷ್ಣ ಸಂಘಕ್ಕೆ ಮೂಲ ಆಧ್ಯಾತ್ಮಿಕ ಪ್ರೇರಣೆಯನ್ನು ಇತ್ತವರು ಸ್ವತಃ ಶ್ರೀರಾಮಕೃಷ್ಣರೇ ಆದರೂ, ಸಾಂಘಿಕ ರೂಪ ನೀಡಿದವರು ಸ್ವಾಮಿ ವಿವೇಕಾನಂದರು. ಐತಿಹಾಸಿಕ ದೃಷ್ಟಿಕೋನದಲ್ಲಿ ಈ ವಿಷಯದ ಕೂಲಂಕಷ ವಿವರಣೆಯನ್ನು ಈ ಲೇಖನದಲ್ಲಿ ನೋಡುತ್ತೇವೆ. ಪೂಜ್ಯ ಸ್ವಾಮೀಜಿಯವರು ತಮಿಳುನಾಡಿನ ಉದಕಮಂಡಲದ ರಾಮಕೃಷ್ಣ ಮಠದ ಅಧ್ಯಕ್ಷರು. ಹಲವಾರು ಪುಸ್ತಕಗಳನ್ನು ಮತ್ತು ಅನುವಾದ ಗ್ರಂಥಗಳನ್ನು ಇವರು ರಚಿಸಿದ್ದಾರೆ.**

೬. ಸಾಧನಾಪಥದಲ್ಲಿ ಹಲವಾರು ಧರ್ಮಗಳ ಸಾಧನೆಯ ಮಾರ್ಗಗಳನ್ನು ಅನುಸರಿಸಿ, ಪ್ರತಿಯೊಂದರಲ್ಲೂ ಗುರಿಮುಟ್ಟಿ, ಎಲ್ಲ ಬಗೆಯ ಸಾಕ್ಷಾತ್ಕಾರವೂ ಒಂದೇ ಅನುಭವವನ್ನು ನೀಡುತ್ತದೆ ಎಂಬುದನ್ನು ನೇರವಾಗಿ ಅನುಭವಿಸಿದರು.

೭. ಸಪ್ತರ್ಷಿಮಂಡಲದಿಂದ ಒಬ್ಬ ಋಷಿಯನ್ನು ತಮ್ಮ ಕಾರ್ಯಕ್ಕೆ ಕರೆತರುವ ದರ್ಶನವನ್ನು ಪಡೆದುಕೊಂಡರು.

೮. ತೀರ್ಥಯಾತ್ರೆಗೆ ಹೋಗುವಾಗ ದಾರಿಯಲ್ಲಿ ಬಡವರ ದಾರುಣ ಸ್ಥಿತಿಯನ್ನು ಕಂಡು, ಅವರಿಗೆ ಅನ್ನ- ಬಟ್ಟೆ ಒದಗಿಸುವುದು ತೀರ್ಥಯಾತ್ರೆಗಿಂತ ಶ್ರೇಷ್ಠ ಎನ್ನುವುದನ್ನು ತೋರಿಸಿಕೊಟ್ಟರು.

೯. ತಮ್ಮ ಪತ್ನಿಯೇ ಮೊದಲುಗೊಂಡು, ಎಲ್ಲ ಸ್ತ್ರೀಯರನ್ನೂ ಮಾತೃಭಾವದಿಂದ ಪೂಜಿಸಿದರು.

೧೦. ತಮ್ಮ ಪತ್ನಿ ಶ್ರೀಶಾರದಾದೇವಿಗೆ, ತಾವು ದೇಹತ್ಯಾಗ ಮಾಡಿದ ಮೇಲೆ, ತಮ್ಮ ಕಾರ್ಯವನ್ನು ಮುಂದುವರೆಸುವಂತೆ ಆದೇಶಿಸಿದರು.

೧೧. ತಮ್ಮ ದೇಹತ್ಯಾಗದ ನಂತರ ತಾವು ತರಬೇತಿ ಕೊಟ್ಟಿದ್ದ ಯುವಕರ ಗುಂಪು ವಿಧಿವತ್ತಾಗಿ ಸಂನ್ಯಾಸ ಸ್ವೀಕರಿಸಿ, ತ್ಯಾಗ ಮತ್ತು ಸೇವೆಯ ಜೀವನ ನಡೆಸುವಂತೆ ಉತ್ತೇಜಿಸಿದರು. ಅದಕ್ಕಾಗಿ ಗೃಹೀಭಕ್ತ ಸುರೇಂದ್ರನಾಥ ಮಿತ್ರನ ಕನಸಿನಲ್ಲಿ ದರ್ಶನವಿತ್ತು, ಆ ಶಿಷ್ಯರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸುವಂತೆ ತಿಳಿಸಿದರು.

೧೨. ಸ್ವಾಮಿ ವಿವೇಕಾನಂದರಿಗೆ, ಭಾರತವನ್ನು ಪರಿವ್ರಾಜಕರಾಗಿ ಸಂಚರಿಸಿ ಮುಂದೆ ಸರ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಲು, ದರ್ಶನವಿತ್ತು ಪ್ರೋತ್ಸಾಹಿಸಿದರು.

ಈ ಮೇಲಿನ ಘಟನೆಗಳು ಭವಿಷ್ಯದಲ್ಲಿ ಸ್ವಾಮಿ ವಿವೇಕಾನಂದರು ಸ್ಥಾಪಿಸಿದ ರಾಮಕೃಷ್ಣ ಮಹಾಸಂಘಕ್ಕೆ ನಾಂದಿಯನ್ನು ಹಾಡಿದಂತಿವೆ.

ರಾಮಕೃಷ್ಣ ಮಹಾಸಂಘದಲ್ಲಿ 'ರಾಮಕೃಷ್ಣ ಮಠ' ಹಾಗೂ 'ರಾಮಕೃಷ್ಣ ಮಿಷನ್' ಎಂಬ ಎರಡು ಭಾಗಗಳಿವೆ. ಇವೆರಡೂ ಭಾಗಗಳು ನ್ಯಾಯಾಂಗ ದೃಷ್ಟಿಯಲ್ಲಿ ಬೇರೆ ಬೇರೆಯಾದರೂ, ಇವೆರಡೂ ಪರಸ್ಪರ ಸಂಬಂಧವುಳ್ಳವು ಹಾಗೂ ಒಂದು ದೃಷ್ಟಿಯಲ್ಲಿ ಎರಡೂ ಒಂದೇ ಆಗಿರುವಂಥವು. ಉದಾಹರಣೆಗೆ, ಸಂನ್ಯಾಸಿಗಳು ಇಂದು ಮಿಷನ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದರೆ, ನಾಳೆ ಮಠದಲ್ಲಿ ಇರಬಹುದು. ಅದಲ್ಲದೆ ಇವರೆಡರ ಮೂಲಸ್ಥಾನ, ಅಧಿಕಾರದಲ್ಲಿರುವವರು ತಂಗುವ ತಾಣ – ಇವೆಲ್ಲವೂ ಒಂದೇ ಅಂದರೆ, ಕೊಲ್ಕತಾದ ಬೇಲೂರು ಮಠ. ಇವೆರಡಕ್ಕಿರುವ ವ್ಯತ್ಯಾಸವನ್ನು ಸ್ಥೂಲವಾಗಿ ಹೇಳಬೇಕಾದರೆ, ಮಠದಲ್ಲಿ ಪೂಜೆ, ಹಬ್ಬಗಳು, ಪ್ರಚಾರಕಾರ್ಯ, ಸಾಧುಗಳ ತರಬೇತಿ – ಇವುಗಳಿಗೆ ಹೆಚ್ಚು ಮಹತ್ವ ನೀಡಲಾಗುತ್ತದೆ. ಮಿಷನ್‌ನಲ್ಲಿ ಸ್ಕೂಲು, ಕಾಲೇಜು, ಆಸ್ಪತ್ರೆ, ತುರ್ತುಪರಿಹಾರ ಕಾರ್ಯಗಳು ಮುಂತಾದ ಸೇವಾಕಾರ್ಯಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗುತ್ತದೆ. ಹಲವಾರು ಮಠಗಳೂ ಕೂಡ ಸಣ್ಣ ಪ್ರಮಾಣದಲ್ಲಿ ಮಿಷನ್ನಿನ ಕಾರ್ಯಗಳನ್ನು ಕೈಗೊಳ್ಳುತ್ತಿವೆ.

ಅಮೇರಿಕಾದ ಪಸಡೆನಾ ನಗರದ ಶೇಕ್ಸ್‌ಪಿಯರ್ ಕ್ಲಬ್‌ನಲ್ಲಿ ಸ್ವಾಮಿ ವಿವೇಕಾನಂದರು ೧೯೦೦ರ ಜನವರಿ ೨೭ರ ತಮ್ಮ ಪ್ರವಚನದಲ್ಲಿ ಹೀಗೆ ಹೇಳುತ್ತಾರೆ: "ನಾನು ಪ್ರಚಾರ ಮಾಡುತ್ತಿರುವ ಭಾವನೆಗಳೆಲ್ಲಾ ಶ್ರೀರಾಮಕೃಷ್ಣರ ಉಪದೇಶಗಳ ಪ್ರತಿಧ್ವನಿ ಅಷ್ಟೇ." ಶ್ರೀರಾಮಕೃಷ್ಣರೇ ಸ್ವತಃ ಸ್ವಾಮಿ ವಿವೇಕಾನಂದರ ಮಾಧ್ಯಮದ ಮೂಲಕ ತಮ್ಮ ಕಾರ್ಯವನ್ನು ಸಾಧಿಸುತ್ತಿದ್ದರು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

೧೯೧೦ರಲ್ಲಿ ಬೇಲೂರು ಮಠದಲ್ಲಿ ಒಂದು ವಿಶೇಷ ಘಟನೆ ನಡೆಯಿತು. ಭಾರತದ ಆಗಿನ ವೈಸರಾಯ್‌ನ ಪತ್ನಿ ಲೇಡಿ ಮಿಂಟೊ ಬೇಲೂರು ಮಠಕ್ಕೆ ಭೇಟಿಕೊಟ್ಟು ಅಲ್ಲಿಯ ಕಾರ್ಯಗಳಿಂದ ಪ್ರಭಾವಿತಳಾಗಿ ಹೀಗೆ ಹೇಳಿದಳು: "ರಾಮಕೃಷ್ಣ ಮಹಾಸಂಘವು ಸ್ವಾಮಿ ವಿವೇಕಾನಂದರ ಅದ್ಭುತ ಸೃಷ್ಟಿ." ಅದಕ್ಕೆ ತಕ್ಷಣ, ಪಕ್ಕದಲ್ಲಿದ್ದ ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರಾದ ಸ್ವಾಮಿ ಶಿವಾನಂದರು ಹೀಗೆ ಹೇಳಿದರು: "ಸ್ವಾಮಿ ವಿವೇಕಾನಂದರು ರಾಮಕೃಷ್ಣ ಮಹಾಸಂಘವನ್ನು ಸ್ಥಾಪಿಸಲಿಲ್ಲ. ಇದನ್ನು ಶ್ರೀರಾಮಕೃಷ್ಣರೇ ತಮ್ಮ ಜೀವಿತದ ಕೊನೆಯ ದಿನಗಳಲ್ಲಿ ಸ್ಥಾಪಿಸಿದರು ಮತ್ತು ಸ್ವಾಮಿ ವಿವೇಕಾನಂದರಿಗೆ ಇದನ್ನು ಯಾವ ರೀತಿಯಲ್ಲಿ ರೂಪುಗೊಳಿಸಬೇಕು ಎಂಬುದರ ಬಗ್ಗೆ ಉಪದೇಶಿಸಿದರು."

**ಮೂಲ :** ರಾಮಕೃಷ್ಣ ಸಂಸ್ಥೆಯ ಮೂಲವನ್ನು ನಾವು ಸುಲಭವಾಗಿ, ಶ್ರೀರಾಮಕೃಷ್ಣರ ದಕ್ಷಿಣೇಶ್ವರದ ಹಾಗೂ ಕಾಶೀಪುರದ ದಿನಗಳಲ್ಲಿ ಗುರುತಿಸಬಹುದು. ಹನ್ನೆರಡು ವರ್ಷಗಳ ತಮ್ಮ ಎಲ್ಲಾ ಸಾಧನೆಗಳಲ್ಲೂ ಸಾಕ್ಷಾತ್ಕಾರ ಪಡೆದ ನಂತರ ಅವರಿಗೆ, ತಮ್ಮ ಜೀವನದ ಹಾಗೂ ಭವಿಷ್ಯದ ಕಾರ್ಯಗಳ ಬಗ್ಗೆ ಹಲವಾರು ದರ್ಶನಗಳಾಗಿದ್ದವು. ಅವುಗಳಲ್ಲಿ ಒಂದು ಹೀಗಿತ್ತು: ತಮ್ಮ ಜೀವನದಲ್ಲಿ ಪ್ರಕಟಗೊಂಡಿದ್ದ ಉದಾರವಾದ ಧರ್ಮಭಾವನೆಯುಳ್ಳ ಒಂದು ಸಮುದಾಯದ ರಚನೆ ಮತ್ತು ಇದರ ಪ್ರಾಯೋಗಿಕ ಅನುಷ್ಠಾನ. ಇದು ಜಗದ್ಗುರುವಾದ ಶ್ರೀರಾಮಕೃಷ್ಣರ ಒಂದು ಅದ್ಭುತ ಸಾಧನೆಯಾಗಿತ್ತು. ಅವರ ಜೀವನದ ಕೊನೆಯ ದಿನಗಳಲ್ಲಿ ಇದನ್ನು ಕಾರ್ಯಗತಗೊಳಿಸಲು, ನರೇಂದ್ರನ ಮುಂದಾಳುತ್ವದಲ್ಲಿ ಒಂದು ಯುವಕರ ತಂಡವನ್ನು ಅವರು ತರಬೇತುಗೊಳಿಸಿದರು. ನರೇಂದ್ರನಿಗೆ (ಮುಂದೆ ಸ್ವಾಮಿ ವಿವೇಕಾನಂದ) ಇದರ ಆವಶ್ಯಕತೆಯ ಬಗ್ಗೆ ಭಿನ್ನಾಭಿಪ್ರಾಯವಿತ್ತು. ಆದರೂ ಶ್ರೀರಾಮಕೃಷ್ಣರ ಭಾವನೆ ಸರಿಯಾದುದೆಂಬುದು ಅವರಿಗೆ ಸ್ಪಷ್ಟವಾದದ್ದು, ಇಡೀ ಭಾರತವನ್ನು ಪರಿವ್ರಾಜಕರಾಗಿ ಸಂಚಾರ ಮಾಡಿದಾಗ ಮತ್ತು ಅಮೇರಿಕಾ ದೇಶಕ್ಕೆ ಹೋದಾಗ.

ಅಮೆರಿಕಾ ದೇಶದಲ್ಲಿರುವ ಆಡಳಿತ ಮತ್ತು ಸಾಂಸ್ಥಿಕ ವ್ಯವಸ್ಥೆ, ಭೌತಿಕ ಬೆಳವಣಿಗೆ, ಆ ದೇಶದ ಅಭಿವೃದ್ಧಿ, ಸ್ತ್ರೀಯರ ಸ್ವಾತಂತ್ರ್ಯ – ಇವುಗಳನ್ನೆಲ್ಲಾ ಸ್ವಾಮೀಜಿ ಪರೀಕ್ಷಿಸಿ ನೋಡಿದರು. ಇದಾದ ಮೇಲೆ ಯಾವ ಒಂದು ಯೋಜನೆಯನ್ನು ಸಮರ್ಪಕ ರೀತಿಯಲ್ಲಿ ಕಾರ್ಯರೂಪಕ್ಕೆ ತರಲೂ ಕೂಡ ಒಂದು ಸಂಘ ಇರಬೇಕು ಎನ್ನುವುದನ್ನು ಅವರು ಮನಗೊಂಡರು. ಒಮ್ಮೆ ತಮ್ಮ ಅಮೆರಿಕಾದ ಭಕ್ತೆಗೆ, "ನಾನೊಂದು ಪ್ರೀತಿಯ ಬಲೆಯಲ್ಲಿ ಸಿಕ್ಕಿಬಿದ್ದಿದ್ದೇನೆ" ಎಂದರು. ಆ ಸ್ತ್ರೀ ಆಶ್ಚರ್ಯದಿಂದ,

"ಯಾರೀ ಅದೃಷ್ಟವಂತಳು, ಸ್ವಾಮಿಜಿ?" ಎಂದು ಕೇಳಿದಳು. ಅದಕ್ಕೆ ಸ್ವಾಮೀಜಿ ನಕ್ಕು, "ಓ, ಅದು ಸ್ತ್ರೀ ಅಲ್ಲ, ನಿಮ್ಮ ಎಲ್ಲ ಕಾರ್ಯಗಳನ್ನೂ ಸಮರ್ಪಕವಾಗಿ ನೆರವೇರಿಸುವ ಸಂಸ್ಥೆಗಳು" ಎಂದರು. ೧೮೯೪ರಲ್ಲಿ ಅಮೇರಿಕಾದಿಂದ ತಮ್ಮ ಸಹೋದರ ಶಿಷ್ಯರಿಗೆ ಬರೆದ ಒಂದು ಪತ್ರದಲ್ಲಿ ಹೀಗೆ ಹೇಳುತ್ತಾರೆ: "ನಮಗೆ ಒಂದು ಸಂಘ ಬೇಕಾಗಿದೆ. ನಾನು ಹೇಳುತ್ತಿರುವುದು ಅರ್ಥವಾಗುತ್ತಿದೆಯೇ?"

ಸ್ವಾಮೀಜಿ ಅಳಸಿಂಗ ಪೆರುಮಾಳ್ ಎನ್ನುವ ತಮ್ಮ ಮದ್ರಾಸಿ ಶಿಷ್ಯನಿಗೆ ಮತ್ತೊಂದು ಪತ್ರದಲ್ಲಿ ಹೀಗೆ ಬರೆಯುತ್ತಾರೆ: "ಸ್ವಾರ್ಥವನ್ನು ಕಿತ್ತೆಸೆದು ಕಾರ್ಯೋನ್ಮುಖರಾಗಿ. ಹಲವು ಹುಲ್ಲಿನ ಎಸಳುಗಳನ್ನು ಸೇರಿಸಿ ಹಗ್ಗ ಮಾಡಿದರೆ, ಮದಿಸಿದ ಆನೆ ಯನ್ನೂ ಕಟ್ಟಿಹಾಕಬಹುದು." ಮತ್ತೊಂದು ಪತ್ರದಲ್ಲಿ ಹೀಗೆ ಘೋಷಿಸುತ್ತಾರೆ: "ಪ್ರಜ್ವಲ ಭವಿಷ್ಯವುಳ್ಳ ಭಾರತವನ್ನು ನಿರ್ಮಾಣ ಮಾಡಬೇಕಾದರೆ ಅದರ ರಹಸ್ಯವು ಸಂಘಟನೆಯಲ್ಲಿ ಅಡಗಿದೆ. ಶಕ್ತಿಯನ್ನು ಕೇಂದ್ರೀಕರಿಸಲು ಒಂದು ಸಂಸ್ಥೆ ಅತ್ಯಂತ ಅವಶ್ಯಕ."

ಹೀಗೆ, ಐಹಿಕ ಭೋಗಗಳೇ ಸರ್ವಸ್ವವೆಂದು ಭಾವಿಸಿರುವ ಈ ಆಧುನಿಕ ಜಗತ್ತಿಗೆ ಶ್ರೀರಾಮಕೃಷ್ಣರ ದಿವ್ಯಾದ್ಭುತ ಸಂದೇಶಗಳನ್ನು ಪ್ರಚಾರ ಮಾಡಲು, ಅವರ ಹೆಸರಿನಲ್ಲಿ ಒಂದು ಸಂಘ ಅತ್ಯವಶ್ಯಕ ಎಂಬುದನ್ನು ಸ್ವಾಮಿ ವಿವೇಕಾನಂದರು ಮನಗೊಂಡಿದ್ದರು. 'ನರಸೇವೆಯೇ ನಾರಾಯಣನ ಸೇವೆ; ಅದರಿಂದಲೂ ಮುಕ್ತಿಯನ್ನು ಪಡೆಯಬಹುದು' ಎಂಬ ಕ್ರಾಂತಿಕಾರಕವಾದ ಧ್ಯೇಯವುಳ್ಳ ಈ ಸಂಘವನ್ನು ಸ್ಥಾಪಿಸಲು ಸ್ವಾಮೀಜಿ ಬಹಳ ಕಷ್ಟಪಡಬೇಕಾಯಿತು. ಏಕೆಂದರೆ ಮುಕ್ತಿಯೇ ಗುರಿಯಾಗಿರುವ ಸಂಪ್ರದಾಯಬದ್ಧ ಸಾಧನೆಯೊಂದೇ ಮಾರ್ಗವೆಂದು ಭಾವಿಸಿದ್ದ ಅವರ ಕೆಲವು ಸೋದರ ಸಂನ್ಯಾಸಿಶಿಷ್ಯರು, ಈ ಕಾರ್ಯವಿಧಾನದ ವಿಷಯದಲ್ಲಿ ತಮ್ಮದೇ ಆದ ವೈಯಕ್ತಿಕ ಸಂದೇಹವನ್ನು ಇಟ್ಟುಕೊಂಡಿದ್ದರು.

ದಕ್ಷಿಣೇಶ್ವರದ ಶ್ರೀರಾಮಕೃಷ್ಣರ ಕೊಠಡಿಯಲ್ಲಿ ಹಿಂದೆ ನಡೆದಿದ್ದ ಒಂದು ಘಟನೆಯನ್ನು ನೆನಪಿಸಿಕೊಳ್ಳೋಣ. ಅದು ೧೮೮೪ನೇ ವರ್ಷ, ಅಕ್ಟೋಬರ್ ೫ನೇ ತಾರೀಖು. ವಚನವೇದದ ಲೇಖಕರಾದ ಮಹೇಂದ್ರನಾಥ ಗುಪ್ತರು, ಶ್ರೀರಾಮಕೃಷ್ಣರು ಚೈತನ್ಯ ಮಹಾಪ್ರಭುವಿನಂತೆ ಅವತಾರ ಪುರುಷರು ಎಂದು ದೃಢವಾದ ನಂಬಿಕೆಯಿಂದ ಹೀಗೆ ಹೇಳಿ ದರು: "ಇಲ್ಲಿಂದ ಒಂದು ಆಧ್ಯಾತ್ಮಿಕ ಪ್ರವಾಹ ಹರಿದರೆ ಅದು ಬೇರೆಲ್ಲ ಮತಗಳನ್ನೂ ಕೊಚ್ಚಿಕೊಂಡು ಹೋಗಿಬಿಡುವುದು. ಏಕೆಂದರೆ ನಿಮ್ಮ ಮುಖಕಮಲದಿಂದ ನೀರಸವಾದ ಒಂದೇ ತೆರನಾದ ಭಾವನೆ ಹೊರಬರುವುದಿಲ್ಲ." ಅದಕ್ಕೆ ಉತ್ತರವಾಗಿ ಶ್ರೀರಾಮಕೃಷ್ಣರು ಮುಗುಳುನಗುತ್ತ ಹೌದೆಂದು ತಲೆಯಾಡಿಸಿ ತಮ್ಮ ಸಮ್ಮತಿಯನ್ನು ಸೂಚಿಸಿದರು. ಅದೇ ಮುಂದೆ 'ರಾಮಕೃಷ್ಣ ಮಹಾಸಂಘ'ದ ಧ್ಯೇಯವಾಯಿತು.

ಕೇವಲ ಹದಿನಾರು ಯುವಸಂನ್ಯಾಸಿಗಳ ಒಂದು ಸಣ್ಣ ಗುಂಪು, ಇಂತಹ ಒಂದು ಮಹಾಸಂಘವನ್ನು ಇಷ್ಟು ಅಲ್ಪಕಾಲ ದಲ್ಲಿ ಹುಟ್ಟಿಸಿ ಬೆಳೆಸಿದುದು ಇತಿಹಾಸದಲ್ಲಿ ಒಂದು ಆಶ್ಚರ್ಯಕರ ಘಟನೆಯೇ ಸರಿ. ನಾವು ಯಾವ ಚರಿತ್ರೆಯಲ್ಲೂ, ಒಂದು ಆಧ್ಯಾತ್ಮಿಕ ಸಂಘ ಇಂತಹ ಪಾವಿತ್ರ್ಯತೆ, ನಿಸ್ವಾರ್ಥತೆ ಹಾಗೂ ಉದಾರ ಭಾವನೆಗಳೊಡನೆ ಇದ್ದುದನ್ನು ಕಾಣಲಾರೆವು. ದಿನದಿನಕ್ಕೂ ಮಹಾಸಂಘವು ಹೆಚ್ಚು ಹೆಚ್ಚು ಜನಸಮೂಹದಿಂದ ಮಾನ್ಯತೆ ಪಡೆದು ಬೆಳೆಯುತ್ತಿರುವುದನ್ನು ನೋಡಿದರೆ, ಇದೊಂದು ಶ್ರೀರಾಮಕೃಷ್ಣರ ಪವಾಡವೇ ಎನಿಸುತ್ತಿದೆ. ಸ್ವಾಮಿ ವಿವೇಕಾನಂದರ ದೃಢಭಾವನೆಯೆಂದರೆ ಶ್ರೀರಾಮಕೃಷ್ಣರು ಜನ್ಮತಳೆದುದು ಇಡೀ ಮಾನವಕುಲದ ಉದ್ಧಾರಕ್ಕಾಗಿ ಎಂದು. ಬರಿಯ ಆ ಭಾವನೆಗಳನ್ನು ಇಟ್ಟುಕೊಂಡು ಅವರು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಆ ಭಾವನೆ ಸತ್ಯವಾಗಬೇಕಾದುದು ಸಂಘಟನೆಯ ಮೂಲಕ ಎಂದೆಣಿಸಿ, ತಮ್ಮ ಗುರುದೇವರ ಹೆಸರಿನಲ್ಲಿ ಒಂದು ಸಂಘವನ್ನು ಸ್ಥಾಪಿಸಿದರು. ಅದು ಸ್ಥಾಯಿಯಾಗಿ ಉಳಿಯಲು ತಮ್ಮ ಜೀವನದ ಕೊನೆಯ ವರ್ಷಗಳನ್ನೆಲ್ಲಾ ಅದಕ್ಕಾಗಿ ಧಾರೆಯೆರೆದರು. ತಾವು ಇದರಲ್ಲಿ ವಹಿಸಿದ ಪಾತ್ರವೇನು ಎನ್ನುವ ಬಗ್ಗೆ ಒಂದು ಪತ್ರದಲ್ಲಿ (೨೯ನೇ ಮೇ, ೧೮೯೦, ಪ್ರಮಥದಾಸರಿಗೆ) ಸ್ವಾಮೀಜಿ ಹೀಗೆ ಬರೆಯುತ್ತಾರೆ: "ಅವರಿಂದ (ಶ್ರೀರಾಮಕೃಷ್ಣರಿಂದ) ಸ್ಥಾಪಿತವಾದ ಸಂಘದಲ್ಲಿ ಎಲ್ಲವನ್ನೂ ತ್ಯಜಿಸಿರುವ ಭಕ್ತರ ಸೇವೆಗೆ ಗಮನಕೊಡಬೇಕೆಂಬುದೇ ನನ್ನ ಗುರುದೇವರು ನನಗೆ ಮಾಡಿದ ಆಜ್ಞೆಯಾಗಿತ್ತು. ನಾನು ಇದರಲ್ಲಿ ಎಷ್ಟು ವೇಳೆ ಸೋತರೂ ಮರಳಿ ಯತ್ನವನ್ನು ಮಾಡಲೇಬೇಕು. ಇದರಿಂದ ಸ್ವರ್ಗ ಬರಲಿ, ನರಕ ಬರಲಿ, ಮೋಕ್ಷ ಸಿದ್ಧಿಸಲಿ ಅಥವಾ ಇನ್ನೇನೇ ಪ್ರಾಪ್ತವಾಗಲಿ, ಎಲ್ಲವನ್ನೂ ನಾನು ಅನುಭವಿಸಲು ಸಿದ್ಧನಾಗಿದ್ದೇನೆ. ಸರ್ವಸ್ವವನ್ನೂ ತ್ಯಾಗಮಾಡಿರುವ ಈ ಯುವಕ ರನ್ನು ಒಂದೆಡೆ ಒಟ್ಟಿಗೆ ಸೇರಿಸಬೇಕೆನ್ನುವುದು ಅವರ ಆಜ್ಞೆ. ಅವರು ಈ ಕಠಿಣಕಾರ್ಯವನ್ನು ನನಗೆ ವಹಿಸಿದ್ದಾರೆ."

ಸಂಘ ಸ್ಥಾಪಿಸುವ ವಿಷಯದಲ್ಲಿ ಸ್ವಾಮಿ ವಿವೇಕಾನಂದರು ಎಷ್ಟು ಗಂಭೀರವಾಗಿ ಚಿಂತಿಸುತ್ತಿದ್ದರು ಎಂಬುದು ಹಲವಾರು ಪತ್ರಗಳಿಂದ ಸ್ಪಷ್ಟವಾಗುತ್ತದೆ. ಅವರು ಒಂದೆಡೆ ಹೀಗೆ ಬರೆಯುತ್ತಾರೆ: "ಶ್ರೀರಾಮಕೃಷ್ಣರ ಅಸ್ಥಿಯನ್ನು ನಾವು ರಕ್ಷಿಸು ತ್ತಿರುವೆವು. ಎಲ್ಲಿಯಾದರೂ ಗಂಗಾನದಿಯ ತೀರದಲ್ಲಿ ಒಂದು ಮಠ ಕಟ್ಟಿ, ಅದರಲ್ಲಿ ಅದನ್ನು ಸರಿಯಾಗಿ ಸ್ಥಾಪನೆ ಮಾಡ ಬೇಕಾಗಿದೆ. ಸದ್ಯಕ್ಕೆ ಅವರ (ಶ್ರೀರಾಮಕೃಷ್ಣರ) ಸಂನ್ಯಾಸಿ ಶಿಷ್ಯರು ವರಾಹನಗರದ ಒಂದು ಪಾಳು ಮನೆಯಲ್ಲಿ ಅದನ್ನು ಸ್ಥಾಪನೆ ಮಾಡಿದ್ದಾರೆ. ಗುರುದೇವರ ಭಸ್ಮಾವಶೇಷ, ಆಸನ ಹಾಗೂ ಭಾವಚಿತ್ರ – ಇವುಗಳನ್ನು ಈ ಮಠದಲ್ಲಿ ಯಥೋಚಿತವಾಗಿ ಪೂಜಿಸುತ್ತಿದ್ದೇವೆ... ಈ ವಂಗ ದೇಶದಲ್ಲಿ, ಶ್ರೀರಾಮಕೃಷ್ಣರು ತಮ್ಮ ಸಾಧನೆಯ ಕಾಲವನ್ನು ಕಳೆದ ಸ್ಥಳದಲ್ಲಿ, ಅವರಿಗೆ ಒಂದು ಸ್ಮಾರಕ ಮಂದಿರವನ್ನು ಕಟ್ಟದೇ ಇರುವುದಕ್ಕಿಂತ ಹೆಚ್ಚು ಪಶ್ಚಾತ್ತಾಪಕರವಾದುದು ಇನ್ನೇನು ತಾನೇ ಇದೆ?... ಅವರ ಸೇವಕನಾದ ನಾನು ಈಗ ಬಹಳ ದುಃಖಪಡುತ್ತಿದ್ದೇನೆ. ಭಗವಾನ್ ಶ್ರೀರಾಮಕೃಷ್ಣರ ಭಸ್ಮಾವಶೇಷವನ್ನು ಸ್ಥಾಪಿಸಲು ಒಂದು ಸ್ಥಳ ಸಿಗಲಿಲ್ಲವಲ್ಲ ಎಂದು ನನ್ನ ಹೃದಯ ಕೊರಗುತ್ತಿದೆ."

ಇನ್ನೊಂದು ಪತ್ರದಲ್ಲಿ ಪ್ರಮಥದಾಸರಿಗೆ ಸ್ವಾಮೀಜಿ ಹೀಗೆ ಬರೆಯುತ್ತಾರೆ: "ಗಂಗಾ ನದಿಯ ತೀರದಲ್ಲಿ ಭಗವಾನ್

ಶ್ರೀರಾಮಕೃಷ್ಣರಿಗೆ ಒಂದು ಸ್ಮಾರಕವನ್ನು ಕಟ್ಟುವುದು ಸೂಕ್ತವೆಂದು ನಿಮಗೆ ಅನ್ನಿಸಿದರೆ, ನೀವು ನನಗೆ ಅನುಮತಿ ಕೊಟ್ಟರೆ, ಚಂದಾ ಎತ್ತುವ ಸಲುವಾಗಿ ನಾನು ಅಲ್ಲಿಗೆ ಬರುವುದಕ್ಕೆ ಸಿದ್ಧನಾಗಿರುವೆನು. ನನ್ನ ಗುರುದೇವರ ಮತ್ತು ಆತನ ಶಿಷ್ಯರ ಸಲುವಾಗಿನ ಮಹಾಪವಿತ್ರವಾದ ಈ ಕಾರ್ಯಕ್ಕೆ ಮನೆಯಿಂದ ಮನೆಗೆ ಭಿಕ್ಷೆ ಎತ್ತಲು ಹೋಗುವುದಕ್ಕೂ ನಾನು ಸ್ವಲ್ಪವೂ ಹಿಂಜರಿಯುವುದಿಲ್ಲ... ನಾನು ಶ್ರೀರಾಮಕೃಷ್ಣರ ದಾಸ. ಅವರು ಜನ್ಮವೆತ್ತಿ ಸಾಧನೆ ಮಾಡಿದ ದೇಶದಲ್ಲಿ ಅವರ ಹೆಸರನ್ನು ಸ್ಥಾಪಿಸುವುದಕ್ಕೆ, ಅವರ ಆದರ್ಶಗಳನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸುತ್ತಿರುವ ಅವರ ಶಿಷ್ಯರಿಗೆ ಸ್ವಲ್ಪ ಸಹಾಯ ಮಾಡುವುದಕ್ಕೆ ನಾನು ಕಳ್ಳತನ, ದರೋಡೆಯನ್ನು ಮಾಡಲು ಕೂಡ ಸಿದ್ಧನಾಗಿರುವೆನು."

ಸ್ವಾಮೀಜಿಯ ಆಸೆ ಕಾರ್ಯಗತವಾಗಲು ಬಹಳ ವರ್ಷಗಳೇ ಹಿಡಿದವು. ಸಂಸ್ಥೆಯ ನಿರ್ಮಾಣ ಕಾರ್ಯದ ಜವಾಬ್ದಾರಿ ಅವರ ಮನಸ್ಸಿನಲ್ಲಿ ಸದಾ ಏಕತಾನವಾಗಿ ಗುಂಗುಡುತ್ತಲೇ ಇತ್ತು. ಅಮೆರಿಕಾ ದೇಶದಿಂದ ಅವರು ತಮ್ಮ ಆಪ್ತರಿಗೆ ಬರೆಯುತ್ತಿದ್ದ ಪತ್ರಗಳಲ್ಲೂ ಇದನ್ನು ಕಾಣಬಹುದು. ೧೮೯೬, ಜುಲೈ ೧೧ರಂದು ಅಳಸಿಂಗ ಪೆರುಮಾಳ್‌ರಿಗೆ ಅವರು ಹೀಗೆ ಬರೆಯುತ್ತಾರೆ: "ಸಂಘ ಸ್ಥಾಪನೆ, ಅದರ ನಿರ್ವಹಣೆ ಮತ್ತು (ಶ್ರೀರಾಮಕೃಷ್ಣರ) ಕೆಲಸ ಮಾಡುವುದು – ಇದೇ ನಮಗಿರುವ ಒಂದೇ ದಾರಿ." ಇನ್ನೊಂದು ಪತ್ರದಲ್ಲಿ ತಾಳ್ಮೆ ಕಳೆದುಕೊಂಡು ಹೀಗೆ ಬರೆಯುತ್ತಾರೆ: "ಇದು ಕಾಡುಹರಟೆಯ ಸಮಯವಲ್ಲ. ಬೇಕಾಗಿರುವುದು ಕೆಲಸ! ಕೆಲಸ! ಕೆಲಸ! ನೀವು ಭಾರತ ದೇಶದಲ್ಲಿ ಮಾಡಿದ ಶಾಶ್ವತವಾದ ಕೆಲಸ ಯಾವುದೂ ಕಾಣುವುದಿಲ್ಲ. ನೀವು ಸ್ಥಾಪಿಸಿದ ಯಾವ ಕೇಂದ್ರವೂ ಇಲ್ಲ. ನೀವು ಕಟ್ಟಿಸಿದ ಗುಡಿಯಾಗಲಿ, ಪ್ರಾಂಗಣವಾಗಲಿ – ಯಾವುದೂ ಇಲ್ಲ. ನಿಮ್ಮೊಂದಿಗೆ ಬೇರೆಯವರು ಯಾರೂ ಬೆರೆಯುವುದು ಕೂಡ ಕಾಣುವುದಿಲ್ಲ."

ಸಂಘ ನಿರ್ಮಾಣ ಮಾಡುವ ಸ್ವಾಮಿ ವಿವೇಕಾನಂದರ ಕನಸು ನನಸಾಗಲು ಅವರು ಭಾರತಕ್ಕೆ ಹಿಂದಿರುಗುವವರೆಗೆ ಕಾಯಬೇಕಾಯಿತು. ಭಾರತದಲ್ಲಿ ಮಾಡಿದ ಅವರ ಭಾಷಣಗಳಲ್ಲಿ ಕೂಡ ಮುಂದೆ ಬರುವ ರಾಮಕೃಷ್ಣ ಸಂಘದ ಧ್ಯೇಯಗಳು ಏನಾಗಿರಬೇಕು ಎಂಬುದನ್ನು ಅವರು ವಿವರಿಸುವುದನ್ನು ಸೂಕ್ಷ್ಮವಾಗಿ ಗುರುತಿಸಬಹುದು.

'ನನ್ನ ಸಮರ ನೀತಿ' ಎಂಬ ಮದ್ರಾಸಿನ ಉಪನ್ಯಾಸದಲ್ಲಿ ಸ್ವಾಮೀಜಿ ಹೀಗೆ ಹೇಳುತ್ತಾರೆ: "ಹಾಗಾದರೆ ನನ್ನ ಯೋಜನೆ ಏನು? ಪುರಾತನ ಮಹಾತ್ಮರ ಆಲೋಚನೆಗಳನ್ನು ಅನುಸರಿಸುವುದೇ ನನ್ನ ಯೋಜನೆ ... ಸುಧಾರಕರಿಗೆ, ನಾನು ಅವರಿಗಿಂತ ದೊಡ್ಡ ಸುಧಾರಕ ಎಂದು ನಾನು ಹೇಳುತ್ತೇನೆ. ಅವರು ಚೂರು–ಪಾರುಗಳನ್ನು ಸುಧಾರಿಸಲು ಯತ್ನಿಸಿರುವರು. ನನಗೆ ಆಮೂಲಾಗ್ರ ಸುಧಾರಣೆ ಬೇಕು. ಅವರದು ಧ್ವಂಸ ಮಾರ್ಗ. ನನ್ನದು ನಿರ್ಮಾಣ ಮಾರ್ಗ. ನನಗೆ ಸುಧಾರಣೆಯಲ್ಲಿ ನಂಬಿಕೆಯಿಲ್ಲ. ನನಗೆ ಬೆಳವಣಿಗೆಯಲ್ಲಿ ನಂಬಿಕೆ. ಭರತಖಂಡದಲ್ಲಿ ಎಲ್ಲಾ ವಿಧದ ಜಾಗೃತಿ ಫಲಕಾರಿಯಾಗಬೇಕಾದರೆ ಮೊದಲು ಧಾರ್ಮಿಕ ಜಾಗೃತಿ ಅವಶ್ಯಕ. ರಾಜಕೀಯ ಮತ್ತು ಸಾಮಾಜಿಕ ವಿಷಯಗಳಿಂದ ಭರತಖಂಡವನ್ನು ತುಂಬುವುದಕ್ಕಿಂತ ಮುಂಚೆ, ಆಧ್ಯಾತ್ಮಿಕ ಭಾವನೆಯ ಮಳೆಗೆರೆಯಿರಿ. ಮೊದಲು ನಾವು ಲಕ್ಷ್ಯದಲ್ಲಿ ಇಡಬೇಕಾದುದು ಇದು. ಆದುದರಿಂದ ನನ್ನ ಸ್ನೇಹಿತರೇ, ನಮ್ಮ ಧರ್ಮವನ್ನು ಭರತಖಂಡದಲ್ಲಿ ಮತ್ತು ಹೊರಗೆ ಪ್ರಚಾರ ಮಾಡುವಂತಹ ಯುವಕರನ್ನು ತರಬೇತು ಮಾಡುವಂತಹ ಕೇಂದ್ರವನ್ನು ತೆರೆಯಬೇಕೆಂಬುದೇ ನನ್ನ ಯೋಜನೆ."

ಸ್ವಾಮೀಜಿ ತಮ್ಮ ಪ್ರವಾಸದಿಂದ ಹಿಂದಿರುಗಿದ ಮೇಲೆ, ತಮ್ಮೆಲ್ಲ ಸೋದರ ಸಂನ್ಯಾಸಿಗಳು ಹಾಗೂ ಗೃಹಸ್ಥಭಕ್ತರಿಗೆ ಸಂಘದ ಆವಶ್ಯಕತೆಯನ್ನು ಮನದಟ್ಟು ಮಾಡಿಕೊಟ್ಟರು. ೧೮೯೭, ಮೇ ೧ ನೇ ತಾರೀಖು ಬಲರಾಮ ಬೋಸನ ಮನೆಯಲ್ಲಿ ಒಂದು ಸಭೆ ಸೇರಿಸಿದರು. ಅಲ್ಲಿ ನೆರೆದಿದ್ದ ಶ್ರೀರಾಮಕೃಷ್ಣರ ಸಂನ್ಯಾಸಿ ಶಿಷ್ಯರು ಹಾಗೂ ಗೃಹೀಭಕ್ತರನ್ನು ಉದ್ದೇಶಿಸಿ ಸ್ವಾಮೀಜಿ ಹೀಗೆ ಮಾತನಾಡಿದರು: "ದೇಶ ದೇಶಾಂತರಗಳನ್ನು ಸಂಚರಿಸಿ ಬಂದ ನಾನು ಈಗ ಒಂದು ತೀರ್ಮಾನಕ್ಕೆ ಬಂದಿದ್ದೇನೆ. ಏನೆಂದರೆ ಸರಿಯಾದ ಸಂಘಟನೆಯಿಲ್ಲದ ನಾವು ಯಾವುದೇ ಘನವಾದ ಹಾಗೂ ಶಾಶ್ವತವಾದ ಕಾರ್ಯವನ್ನು ಸಾಧಿಸಲಾರೆವು. ಅಂತಹ ಒಂದು ಸಂಘವನ್ನು ಸ್ಥಾಪಿಸೋಣ. ಈ ಸಂಘವು ನಾವು ಯಾರ ಹೆಸರಿನಲ್ಲಿ ಸರ್ವಸಂಗ ಪರಿತ್ಯಾಗ ಮಾಡಿ ಸಂನ್ಯಾಸಿಗಳಾಗಿರುವೆವೋ, ಯಾರನ್ನು ನೀವು (ಗೃಹಸ್ಥರು) ನಿಮ್ಮ ಜೀವನಾದರ್ಶವನ್ನಾಗಿ ಮಾಡಿಕೊಂಡು ಈ ಜಗತ್ತಿನಲ್ಲಿ ಗೃಹಸ್ಥಧರ್ಮವನ್ನು ನಿರ್ವಹಿಸುತ್ತಿರುವಿರೋ, ಯಾರ ಪವಿತ್ರ ನಾಮವು ನಮಗೂ ಸ್ಫೂರ್ತಿ ನೀಡಿದೆಯೋ, ಅವರ ಹೆಸರನ್ನೇ ಹೊಂದಿರುತ್ತದೆ. ಆದ್ದರಿಂದ ಈ ಸಂಘಕ್ಕೆ 'ರಾಮಕೃಷ್ಣ ಮಿಷನ್' ಎಂದು ಹೆಸರನ್ನು ಇಡೋಣ. ನಾವೆಲ್ಲ ಆ ಪ್ರಭುವಿನ ಕೇವಲ ಸೇವಕರು ಮಾತ್ರ."

ಸ್ವಾಮೀಜಿಯವರ ಈ ಸಲಹೆಯನ್ನು ಸರ್ವರೂ ಉತ್ಸಾಹದಿಂದ ಸ್ವಾಗತಿಸಿದರು. ಅಧಿಕೃತವಾಗಿ ೧೮೯೭ರ ಮೇ ೧ನೇ ತಾರೀಖು ರಾಮಕೃಷ್ಣ ಮಹಾಸಂಘವು ಜನ್ಮ ತಾಳಿತು. ಇದೊಂದು ಶುಭದಿನವೇ ಸರಿ. ಇಂದು ಇದು ಭಾರೀ ವಟವೃಕ್ಷದಂತೆ ದೇಶ–ವಿದೇಶಗಳಲ್ಲಿ ನಿಧಾನವಾಗಿ ಹರಡುತ್ತಲೇ ಇದೆ.

ಈ ಸಂಘವು ಇನ್ನೂ ಉತ್ತಮ ರೀತಿಯಲ್ಲಿ ವಿಶಾಲವಾಗಿ ಬೆಳೆಯಲು ೨೮ ವಯಸ್ಸಿನ ಒಳಗಡೆಯಿರುವ ಹೆಚ್ಚು ಹೆಚ್ಚು ವಿದ್ಯಾವಂತ, ಅವಿವಾಹಿತ ಯುವಕರ ಅವಶ್ಯಕತೆ ಇದೆ. ಯುವಕರೇ, ಸ್ವಾಮಿ ವಿವೇಕಾನಂದರ ಕರೆಗೆ ಓಗೊಟ್ಟು ತ್ಯಾಗಜೀವನ ನಡೆಸಲು ಸಿದ್ಧರಿದ್ದೀರಾ? ಹಾಗಿದ್ದಲ್ಲಿ ನಿಮಗೆ ಹತ್ತಿರವಿರುವ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಶಾಖೆಯನ್ನು ಸಂಪರ್ಕಿಸಿ. ನಿಮ್ಮ ಜೀವನವನ್ನು ಸ್ವಂತ ಮೋಕ್ಷಕ್ಕಾಗಿಯೂ, ಜಗತ್ತಿನ ಸೇವೆಗಾಗಿಯೂ ಸಮರ್ಪಿಸಿಕೊಳ್ಳಿ.



150th Birth anniversary of Swami Vivekananda
1863 - 2013

ಸ್ವಾಮಿ ನಿತ್ಯಸ್ಥಾನಂದ



# ಸ್ವಾಮಿ ವಿವೇಕಾನಂದರ ಜೀವನದೃಷ್ಟಿ

ಸ್ವಾಮಿ ವಿವೇಕಾನಂದರು ಶ್ರೇಷ್ಠ ತತ್ತ್ವಶಾಸ್ತ್ರಜ್ಞ ಮತ್ತು ದಾರ್ಶನಿಕ. ಇದಲ್ಲದೆ ಅವರ ಭಾವನೆಗಳೆಲ್ಲವೂ ಅನುಷ್ಠಾನಪ್ರದವಾದುವು. ವಿವೇಕಾನಂದರನ್ನು ಕ್ರಿಯಾರೂಪಕ್ಕೆ ತರುವುದೆಂದರೆ, ಜೀವನದ ಬಗ್ಗೆ ಅವರ ದೃಷ್ಟಿಕೋನವನ್ನು ನಮ್ಮ ಬಾಳಿನಲ್ಲಿ ಆಚರಣೆಗೆ ತರುವುದೇ ಆಗಿದೆ. ಈ ಅಂಶವನ್ನು ವಿದ್ವತ್ಪೂರ್ಣವಾಗಿ, ಸೋದಾಹರಣವಾಗಿ ವಿವರಿಸಿರುವ ಸ್ವಾಮೀಜಿಯವರು ಪ್ರಸ್ತುತ ರಾಮಕೃಷ್ಣ ಮಹಾಸಂಘದ ಮುಖ್ಯ ಕೇಂದ್ರವಾದ ಬೇಲೂರು ಮಠದಲ್ಲಿರುವ ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿದ್ದಾರೆ. ವಿವೇಕಪ್ರಭ ಪತ್ರಿಕೆಯ ಪ್ರಥಮ ಸಂಪಾದಕರಾಗಿದ್ದ ಇವರು, ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಹಿಂದಿನ ಅಧ್ಯಕ್ಷರೂ ಆಗಿದ್ದರು. ಹಲವಾರು ಪುಸ್ತಕಗಳನ್ನು ಮತ್ತು ಅನುವಾದಗಳನ್ನು ರಚಿಸಿರುವ ಇವರು ಗಂಭೀರ ಚಿಂತಕರು ಮತ್ತು ಬರಹಗಾರರು.

ಎಷ್ಟೇ ಸೌಲಭ್ಯಗಳಿದ್ದರೂ ಜೀವನ ಸುಲಭವಲ್ಲ. ಸ್ವಾಮಿ ವಿವೇಕಾನಂದರು ಹೇಳುವಂತೆ ಜೀವನವೊಂದು ಹೋರಾಟ. ಎಲ್ಲಿಯವರೆಗೆ ಈ ಹೋರಾಟ ಮುಂದುವರೆಯುವುದೊ ಅಲ್ಲಿಯವರೆಗೆ ಜೀವನವೂ ಮುಂದುವರಿಯುತ್ತದೆ. ಆಂಗ್ಲಭಾಷೆಯಲ್ಲಿ ಹೇಳುವಂತೆ, ಎಲ್ಲಿಯವರೆಗೆ ನಾವು ಸೈಕಲ್ಲನ್ನು ತುಳಿಯುತ್ತಿರುತ್ತೇವೊ, ಅಲ್ಲಿಯವರೆಗೂ ಬೀಳುವ ಸಂಭವವಿಲ್ಲ. ಆದರೆ ಈ ಹೋರಾಟವು ಗೋಳಾಟವಿಲ್ಲದೆ ನಡೆಯಬೇಕು. ಸ್ವಾಮಿ ವಿವೇಕಾನಂದರ ಜೀವನ ಮತ್ತು ಸಂದೇಶಗಳನ್ನು ಅಧ್ಯಯನ ಮಾಡುವಾಗ ಮುಖ್ಯವಾಗಿ ನಮ್ಮ ಗಮನಕ್ಕೆ ಬರುವ ಅಂಶ ಯಾವುದೆಂದರೆ ಈ ಗೋಳಾಟರಹಿತ ಹೋರಾಟ. ಶ್ರೀಕೃಷ್ಣನ ಸಂದೇಶವೂ ಇದೇ: **ಯುಧ್ಯಸ್ವ ವಿಗತಜ್ವರಃ** – "ಶೋಕಮೋಹರಹಿತನಾಗಿ ಹೋರಾಡು." ಈ ಹೋರಾಟಕ್ಕೆ ಎರಡು ಮುಖಗಳಿವೆ: ಬಾಹ್ಯ ಮತ್ತು ಆಂತರಿಕ. ನೈಸರ್ಗಿಕ ಮತ್ತು ಸಾಮಾಜಿಕ ಪ್ರತಿಕೂಲ ಪರಿಸ್ಥಿತಿಗಳ ವಿರುದ್ಧ ಹೋರಾಡುವುದು ಬಾಹ್ಯ ಹೋರಾಟ. ಆದರೆ ನಾವು ಹೋರಾಡಬೇಕಾದ ನಿಜವಾದ ಶತ್ರುಗಳಿರುವುದು ನಮ್ಮೊಳಗೇ, ಮತ್ತು ಅವರನ್ನು ಸೃಷ್ಟಿಸಿ ಸಾಕಿ ಸಲಹುತ್ತಿರುವವರೂ ನಾವೇ. ಈ ಆಂತರಿಕ ಶತ್ರುಗಳೇ ಹೊರಗಿನ ಘಟನೆಗಳಲ್ಲಿ ಮತ್ತು ವ್ಯಕ್ತಿಗಳಲ್ಲಿ ಪ್ರತಿಬಿಂಬಿತವಾಗುತ್ತಿರುವುದು. ನಾವು ಹೋರಾಡಬೇಕಾದ ಹೊರಗಿನ ಶತ್ರುಗಳು ನಮ್ಮೊಳಗೇ ಇರುವರೆಂಬ ಅರಿವು ಎಲ್ಲಿಯವರೆಗೆ ನಮಗೆ ಉಂಟಾಗುವುದಿಲ್ಲವೋ ಅಲ್ಲಿಯವರೆಗೆ ಹೊರಗಿನ ತೊಂದರೆ ತಾಪತ್ರಯಗಳು ನಮಗೆ ತಪ್ಪಿದ್ದಲ್ಲ. ಒಳಗಿನ ನಾಯಿಯು ಹೊರಗಿನ ನಾಯಿಗಳ ವಿರುದ್ಧ ಬೊಗಳುವುದು ಸ್ವಾಭಾವಿಕ. ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಹೇಳುತ್ತಾರೆ. "ವಿಷಯಿ ಜಗತ್ತು ವಿಷಯ ಜಗತ್ತನ್ನು ಆಳುತ್ತಿರುವುದೆಂಬುದನ್ನು ನೋಡಿರುವೆವು. ಅಂತರಂಗದಲ್ಲಿ ಬದಲಾವಣೆ ಉಂಟಾದರೆ ಬಹಿರಂಗದಲ್ಲೂ ಬದಲಾವಣೆ ಆಗಲೇಬೇಕು. ನಿಮ್ಮನ್ನು ಪರಿಶುದ್ಧಗೊಳಿಸಿಕೊಳ್ಳಿ; ಆಗ ಪ್ರಪಂಚವು ಪರಿಶುದ್ಧವಾಗಲೇಬೇಕು. ಹಿಂದೆಂದಿಗಿಂತಲೂ ಮುಖ್ಯವಾಗಿ ಈ ವಿಷಯವನ್ನು ಬೋಧಿಸಬೇಕಾದ ಅವಶ್ಯಕತೆ ಇದೆ. ನಾವೀಗ ಹೆಚ್ಚು ಹೆಚ್ಚಾಗಿ ನೆರೆಹೊರೆಯವರ ವಿಷಯದಲ್ಲಿಯೇ ವ್ಯಸ್ತರಾಗಿರುತ್ತೇವೆ, ನಮ್ಮ ಕಡೆ ಗಮನ ಹರಿಸುವುದೇ ಇಲ್ಲ. ನಾವು ಬದಲಾದರೆ ಪ್ರಪಂಚವೂ ಬದಲಾಗುತ್ತದೆ. ನಾನೇಕೆ ಇತರರಲ್ಲಿ ದೋಷವನ್ನು ಕಾಣುತ್ತೇನೆ ಎನ್ನುವುದು ಪ್ರಶ್ನೆ. ನಾನೇ ದೋಷಯುಕ್ತನಾಗದೆ ದೋಷವನ್ನು ನೋಡಲಾಗುವುದಿಲ್ಲ. ನಾನು ದುರ್ಬಲನಾಗದೆ ದುಃಖಿಯಾಗಲಾಗುವುದಿಲ್ಲ. ಚಿಕ್ಕಂದಿನಲ್ಲಿ ನನಗೆ ದುಃಖವನ್ನು ಉಂಟುಮಾಡುತ್ತಿದ್ದ ವಿಷಯಗಳು ಈಗ ಹಾಗೆ ಮಾಡುವುದಿಲ್ಲ" (*ಕೃತಿಶ್ರೇಣಿ*, ೬:೩೪೩).

### ಶಕ್ತಿಯೇ ಜೀವನ

ಈ ಜೀವನದ ಹೋರಾಟಕ್ಕೆ ನಮಗೆ ಶಕ್ತಿ ಬೇಕು. "ಶಕ್ತಿಯೇ ಜೀವನ, ದೌರ್ಬಲ್ಯವೇ ಮರಣ" ಎಂಬ ಸ್ವಾಮಿ ವಿವೇಕಾನಂದರ ವಾಣಿಯನ್ನು ಮತ್ತೆ ಮತ್ತೆ ಓದುತ್ತೇವೆ, ಮತ್ತೆ ಮತ್ತೆ ಕೇಳುತ್ತೇವೆ. ಆದರೂ ಮತ್ತೆ ಮತ್ತೆ ದೌರ್ಬಲ್ಯಕ್ಕೆ ಒಳಗಾಗುತ್ತೇವೆ. ಇದರ ದೆಸೆಯಿಂದಾಗಿಯೇ ಹೊರಗಿನ ಘಟನೆಗಳಿಂದ, ವ್ಯಕ್ತಿಗಳಿಂದ ನಾವು ವಿಚಲಿತರಾಗುತ್ತೇವೆ. ಆದರೆ ನಾವು ಇದನ್ನು ಒಪ್ಪಿಕೊಳ್ಳದೆ ಹೊರಗಿನ ಅಂಶಗಳನ್ನು ದೂಷಿಸುತ್ತಾ ಹೋಗುತ್ತೇವೆ, ನನ್ನ ದುಃಖಕ್ಕೆ ಹೊರವಿಷಯಗಳೇ ಕಾರಣ ಎಂದು ಆಂತರಿಕವಾಗಿ ಹೊರವಿಷಯಗಳೊಡನೆ ಹೋರಾಡುತ್ತಿರುತ್ತೇವೆ. "ಅವರು ಹೀಗೆ, ಇವರು ಹೀಗೆ, ಅವರಿವರಿಂದ ನನಗೆ ಹೀಗಾಯಿತು" ಎಂದು ಪರಿತಪಿಸುತ್ತೇವೆ. ಇದರಿಂದಾಗಿ ನಮ್ಮನ್ನೇ ನಾವು ವಿಶ್ಲೇಷಿಸಿ ನಮ್ಮನ್ನು ನಾವು ತಿದ್ದಿಕೊಳ್ಳುವುದನ್ನು ಮರತೇಬಿಡುತ್ತೇವೆ. ಹೊರಗಿನ

ದೋಷಗಳು ನಮ್ಮ ಅಂತರಂಗವನ್ನು ಮುಸುಕಿ ನಮ್ಮ ದೋಷಗಳು ನಮಗೇ ಕಾಣದಂತಾಗಿಬಿಡುತ್ತದೆ. ಇಂತಹ ಪರಿಸ್ಥಿತಿಯಲ್ಲಿ ನಾವು ಮಾಡುವ ಆಧ್ಯಾತ್ಮಿಕ ಸಾಧನೆಗಳು, ಉಪವಾಸಾದಿ ವ್ರತಗಳು ನಮ್ಮ ಅಂತಶ್ಶಕ್ತಿಯನ್ನು ವೃದ್ಧಿಸುವ ಬದಲು ನಮ್ಮ ದೌರ್ಬಲ್ಯಗಳನ್ನೇ ಹೆಚ್ಚಿಸಬಹುದು, ಗಿಡಕ್ಕೆ ಹಾಕುವ ನೀರು ಗೊಬ್ಬರಗಳು ಕಳೆಯನ್ನು ವೃದ್ಧಿಸುವಂತೆ.

ನಮಗೆ ಎಲ್ಲ ಬಗೆಯ ಶಕ್ತಿ ಬೇಕು. ಮೊದಲನೆಯದಾಗಿ **ದೈಹಿಕ ಶಕ್ತಿ**. ಆದರೆ ಕುಸ್ತಿಪಟುವಿನ ದೈಹಿಕಶಕ್ತಿಯಲ್ಲ. ಹೊರಗಿನ ರೋಗಾಣುಗಳ ಆಕ್ರಮಣವನ್ನು ಎದುರಿಸುವ ದೇಹರಕ್ಷಣಾ ಶಕ್ತಿ ನಮಗೆ ಅತ್ಯಂತ ಮುಖ್ಯ. ಇದು ಯುಕ್ತಾಹಾರ ವಿಹಾರಾದಿಗಳಿಂದ ಬರುತ್ತದೆ. ಎರಡನೆಯದಾಗಿ **ನರಬಲ**. ಇದಿಲ್ಲದಿದ್ದರೆ ದೇಹಬಲ ಎಷ್ಟೇ ಇದ್ದರೂ ಪ್ರತಿಕೂಲ ಪರಿಸ್ಥಿತಿಗಳನ್ನು ಎದುರಿಸುವ ಸಾಮರ್ಥ್ಯವಿರುವುದಿಲ್ಲ. ಮುಂದಿನದು **ಬುದ್ಧಿಶಕ್ತಿ**. ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಅದರ ಮೇಲೆ ಹಿಡಿತವನ್ನು ಸಾಧಿಸಲೂ, ಬೇರೆಯ ಜನರನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವೂ ಇದರಿಂದ ಬರುತ್ತದೆ. ಇದರಿಂದ ಜ್ಞಾನವೃದ್ಧಿಯೂ ಆಗಿ ನಮ್ಮ ಪಾಲಿಗೆ ಒಂದು ಮಹಾಶಕ್ತಿಯಾಗುತ್ತದೆ. ನಮಗೆ ಅತ್ಯಂತ ಮುಖ್ಯವಾಗಿ ಬೇಕಾಗಿರುವುದು ನಾಲ್ಕನೆಯದು, ಅದೇ **ಇಚ್ಛಾಶಕ್ತಿ**. ಇದರಿಂದ ನಮ್ಮ ಇಂದ್ರಿಯ, ಆಸೆಗಳು, ಭಾವೋದ್ವೇಗ ಇತ್ಯಾದಿಗಳನ್ನು ನಿಗ್ರಹಿಸುವುದರ ಮೂಲಕ ಅಪಾರ **ಚಾರಿತ್ರ್ಯಬಲ**ವನ್ನು ಪಡೆಯಬಹುದು. ಚಾರಿತ್ರ್ಯಬಲದಿಂದ ಎಂತಹ ಕಷ್ಟಗಳನ್ನಾದರೂ ಎದುರಿಸುವ ಸಾಮರ್ಥ್ಯವನ್ನು ನಾವು ಪಡೆಯುತ್ತೇವೆ. ಆತ್ಮನಿಗ್ರಹದಿಂದ ಪಡೆಯುವ ಶಕ್ತಿಸಂಚಯವನ್ನೇ ಚಾರಿತ್ರ್ಯವೆಂದು ಕರೆಯುವುದು (**ನಿಗ್ರಹೇಣಾರ್ಜಿತಾ ಶಕ್ತಿಃ ಚಾರಿತ್ರ್ಯೇತಿ ಚ ಕಥ್ಯತೇ**).

ಎಲ್ಲ ಶಕ್ತಿಗಳಿಗಿಂತ ಅತ್ಯಂತ ಶ್ರೇಷ್ಠವಾದುದು ಆತ್ಮಬಲ, ಅಧ್ಯಾತ್ಮಶಕ್ತಿ. ಈ ಆತ್ಮಬಲದಿಂದಲೇ ಬುದ್ಧನು ಅಂಗುಲಿಮಾಲನನ್ನು ಜಯಿಸಿದುದು. ಶ್ರೀರಾಮಕೃಷ್ಣರ ಜೀವನದಲ್ಲಿಯೂ ಇಂತಹುದೇ ಒಂದು ಘಟನೆ ಬರುತ್ತದೆ. ಶ್ರೀರಾಮಕೃಷ್ಣರ ಭಕ್ತರಲ್ಲಿ ಅಗ್ರಗಣ್ಯಳಾದ ಯೋಗೀನ್ ಮಾ ದಕ್ಷಿಣೇಶ್ವರಕ್ಕೆ ಪದೇ ಪದೇ ಹೋಗುವುದು ಆಕೆಯ ಅಣ್ಣ ಹಿರಾಲಾಲಾಗೆ ಅಪ್ರಿಯ ವಿಷಯವಾಗಿತ್ತು. ಒಂದು ದಿನ ಶ್ರೀರಾಮಕೃಷ್ಣರು ಯೋಗೀನ್ ಮಾಳ ಕೋರಿಕೆಯಂತೆ ಅವರ ಮನೆಗೆ ಮೊದಲ ಬಾರಿ ಬರುವವರಿದ್ದರು. ಈ ವಿಷಯವನ್ನು ತಿಳಿದ ಹೀರಾಲಾಲ್ ಅವರನ್ನು ಹೆದರಿಸಿ ಓಡಿಸಲು ಮನ್ಮಥನೆಂಬ ಸುಪ್ರಸಿದ್ಧ ಪೈಲ್ವಾನ್ ಹಾಗೂ ಕೊಲೆಗಡುಕನನ್ನು ನಿಯಮಿಸಿದ. ಶ್ರೀರಾಮಕೃಷ್ಣರನ್ನು ಕಂಡು ಅವರ ನುಡಿಗಳನ್ನು ಕೇಳುತ್ತಿದ್ದಂತೆಯೇ ಮನ್ಮಥನು ಕಣ್ಣೀರುಗರೆಯುತ್ತ ಅವರ ಪಾದಪದ್ಮಗಳಿಗೆ ಎರಗಿ, **"**ಹೇ ಭಗವಂತ, ನನ್ನ ತಪ್ಪನ್ನು ಕ್ಷಮಿಸಿ**"** ಎಂದು ಬೇಡಿದನು. ಅವರು ಆತನನ್ನು ದಕ್ಷಿಣೇಶ್ವರಕ್ಕೆ ಆಮಂತ್ರಿಸಿದರು. ಮೊದಲ ದಿನವೇ ಬಹಳ ಅಕ್ಕರೆಯಿಂದ ಮಾತನಾಡಿಸಿ, ಕಾಳಿಯ ದೇವಾಲಯಕ್ಕೆ ಅವನನ್ನು ಕರೆದುಕೊಂಡು ಹೋದರು. ಪ್ರದಕ್ಷಿಣೆ ಹಾಕುತ್ತಿರುವಾಗ ಒಂದು ಮೂಲೆಯಲ್ಲಿ ಆತನನ್ನು ಆಶೀರ್ವದಿಸಿದರು, ಹಾಗೂ ಮುಂದಿನ ಭಾನುವಾರ ಬರಲು ಆಹ್ವಾನವಿತ್ತರು. ಸ್ವಾಮಿ ಅಖಂಡಾನಂದರು ಅನೇಕ ವರ್ಷಗಳ ತರುವಾಯ ಆತನನ್ನು ಸಂಧಿಸಿದಾಗ ದಿಗ್ಭ್ರಾಂತರಾದರು. ಆತನ ಶರೀರ ತಪಸ್ಸಿನಿಂದ ಕೃಶವಾಗಿ ಹೋಗಿತ್ತು, ಬಾಹ್ಯಪ್ರಜ್ಞೆಯೇ ಇರಲಿಲ್ಲ. ಅವನಿಗೆ ದೇವರ ಹುಚ್ಚು ಹಿಡಿದುಬಿಟ್ಟಿತ್ತು.

**'**ದುರ್ಬಲತೆಯೇ ಎಲ್ಲ ಪಾಪಗಳ ಮೂಲ**'** ಎಂಬುದನ್ನು ಸ್ವಾಮಿ ವಿವೇಕಾನಂದರು ಒತ್ತಿ ಹೇಳುತ್ತಾರೆ. ನಾನೇನಾದರೂ ತಪ್ಪು ಮಾಡಿದರೆ ಮತ್ತು ಅದರ ಪರಿಣಾಮವನ್ನು ಎದುರಿಸುವ ಧೈರ್ಯ ನನಗಿಲ್ಲದಿದ್ದರೆ, ಆಗ ಆ ತಪ್ಪನ್ನು ಮರೆಮಾಚಲು ಸುಳ್ಳು ಹೇಳುತ್ತೇನೆ. ಭ್ರಷ್ಟ ಸಾಮಾಜಿಕ ಪರಿಸರದಲ್ಲಿ ನೀತಿಬದ್ಧನಾಗಿ ಬಾಳುವ ಎದೆಗಾರಿಕೆ ನನಗಿಲ್ಲದಾಗ ಎಲ್ಲರೊಡನೆ ಒಂದಾ ಗುತ್ತೇನೆ. ಅತಿಯಾಸೆಯನ್ನು ನಿಗ್ರಹಿಸುವ ಶಕ್ತಿ ನನಗಿಲ್ಲದಾಗ ಮೋಸದಿಂದಲಾದರೂ ನನ್ನ ಆಸೆಯನ್ನು ಪೂರ್ತಿಗೊಳಿಸಲು ಪ್ರಯತ್ನಿಸುತ್ತೇನೆ. ನನ್ನ ಅಹಂಕಾರದ ಹಸಿವನ್ನು ತಡೆಯಲಾಗದ ದೌರ್ಬಲ್ಯದಿಂದಾಗಿ ಹೆಸರು ಕೀರ್ತಿ ಸ್ಥಾನ ಮಾನಾದಿಗಳಿಗಾಗಿ ಧೈರ್ಯದಿಂದ ಹೋರಾಡುತ್ತೇನೆ. ನನ್ನ ಭಾವೋದ್ವೇಗಗಳನ್ನು ನಿಗ್ರಹಿಸುವ ಶಕ್ತಿಯಿಲ್ಲದೆ ಹಲವು ಸಂದರ್ಭಗಳಲ್ಲಿ ಅಸಂಬದ್ಧವಾಗಿ ವರ್ತಿಸುತ್ತೇನೆ, ಅಸಂಬದ್ಧವಾಗಿ ಮಾತನಾಡುತ್ತೇನೆ ಹಾಗೂ ಇದರಿಂದಾಗಿ ಉತ್ತಮ ಸಂಬಂಧ ಕಡಿದುಹೋಗುತ್ತದೆ. ಸ್ವಾಮಿ ವಿವೇಕಾನಂದರು ಇಂತಹ ದೌರ್ಬಲ್ಯವನ್ನು ಎತ್ತಿ ತೋರಿಸುತ್ತಾರೆ. **"**ನೀವೇ ಜಗತ್ತಿನ ಮೇಲೆ ಎಸೆದಿರುವ ಮಾಯೆಯ ಜಾಲವನ್ನು ಕಿತ್ತು ಎಸೆಯಿರಿ. ಮಾನವ ಕೋಟಿಯನ್ನು ದುರ್ಬಲಗೊಳಿಸುವ ಆಲೋಚನೆಗಳನ್ನು, ಮಾತುಗಳನ್ನು ಪ್ರಸಾರ ಮಾಡಬೇಡಿ. ಎಲ್ಲ ಪಾಪಗಳನ್ನು, ಕೇಡುಗಳನ್ನು ಒಂದು ಪದದಲ್ಲಿ ಅಡಕ ಮಾಡಿಬಿಡಬಹುದು. ಆ ಪದ **'**ದೌರ್ಬಲ್ಯ**'**. ಎಲ್ಲ ಪಾಪಗಳನ್ನು ಪ್ರೇರೇಪಿಸುವುದು ದೌರ್ಬಲ್ಯ; ಎಲ್ಲ ಸ್ವಾರ್ಥದ ಮೂಲ ದೌರ್ಬಲ್ಯ. ಇತರರನ್ನು ಹಿಂಸಿಸುವಂತೆ ಮಾಡುವುದು ದೌರ್ಬಲ್ಯ. ಜನರು ನಿಜವಾಗಿ ತಾವು ಏನು ಅಲ್ಲವೊ ಅದರಂತೆ ಕಾಣಿಸಿಕೊಳ್ಳಲು ಪ್ರಯತ್ನಿಸುವುದಕ್ಕೆ ಕಾರಣ ದೌರ್ಬಲ್ಯವೇ**"** (ಕೃತಿಶ್ರೇಣಿ, ೩. ೨೮೨).

ಸ್ವಾಮಿ ವಿವೇಕಾನಂದರ ಈ ಶಕ್ತಿ ಸಂದೇಶವು ಜೀವನದ ಎಲ್ಲ ಹಂತಗಳಿಗೂ ಅನ್ವಯವಾಗುತ್ತದೆ. ಇಂದಿನ ಸಂದರ್ಭದಲ್ಲಿ, ಹಲವಾರು ನೇತ್ಯಾತ್ಮಕ ಪ್ರಭಾವಗಳ ನಡುವೆ ಅಂತಃಶಕ್ತಿಯ ಕೊರತೆಯಿಂದಾಗಿ, ಯಾವುದೇ ನಿರ್ದಿಷ್ಟವಾದ ನೆಲೆಯಿಲ್ಲದೆ ನಾವು ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗಿಬಿಡಬಹುದು. ನಮ್ಮ ವ್ಯಕ್ತಿತ್ವದಲ್ಲಿ ನೆಲೆ ನಿಂತು ಏಕಾಂಗಿಯಾಗಿರುವ ಧೈರ್ಯ ನಮಗಿಲ್ಲದಿದ್ದರೆ ನಾವು ಹಲವು ಪ್ರಭಾವಗಳನ್ನು, ಹಲವು ವ್ಯಕ್ತಿತ್ವಗಳನ್ನು ಪ್ರತಿಬಿಂಬಿಸುವ ಕನ್ನಡಿಯಂತಾಗುತ್ತೇವೆ.

### ಅನುಕರಣೆ ಅವನತಿಯ ಚಿಹ್ನೆ

ಈ ಮೇಲಿನ ಕಾರಣದಿಂದಾಗಿಯೇ ಸ್ವಾಮಿ ವಿವೇಕಾನಂದರು ಅನುಕರಣೆಯನ್ನು ಬಹಳವಾಗಿ ಖಂಡಿಸುತ್ತಾರೆ. ಹಲವು ಬಗೆಯ ಅನುಕರಣೆಗಳಿವೆ. ಉಡಿಗೆ, ತೊಡುಗೆ, ನಡೆ, ನುಡಿ, ಹಾವಭಾವ ಮುಂತಾದವುಗಳ ಅನುಕರಣೆ ಬಹಳ ಸ್ಥೂಲವಾದುದು. ಸಾಮಾಜಿಕ ಸ್ಥಾನಮಾನಗಳನ್ನು ಉಳಿಸಿಕೊಳ್ಳುವುದಕ್ಕಾಗಿ ನಾವು

ಇತರರನ್ನು ಅನುಕರಿಸುತ್ತೇವೆ. ಉದಾಹರಣೆಗೆ, ಬೇರೆಯವರು ಮದುವೆಗೆ ಒಂದು ಲಕ್ಷ ಖರ್ಚು ಮಾಡಿದರೆ, ನಾವು ಅಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚು ಖರ್ಚು ಮಾಡಬೇಕು – ಸಾಲ ಮಾಡಿ ಮುಂದೆ ತೊಂದರೆಗೆ ಒಳಗಾದರೂ ಪರವಾಗಿಲ್ಲ. ಯಾವುದೋ ಒಂದು ವಿಶೇಷ ಕಾರ್ಯಕ್ರಮದಲ್ಲಿ ಭಾಗವಹಿಸಿದ ಪ್ರತಿನಿಧಿಗಳಿಗೆಲ್ಲ ಯಾರಾದರೂ ಸಂಸ್ಥೆಯವರು ವಿಶೇಷವಾದ ಬ್ಯಾಗುಗಳನ್ನು ಹಂಚಿದರೆ ಬೇರೆ ಸಂಸ್ಥೆಯವರು ಅದನ್ನೇ ಸ್ವಲ್ಪ ಬದಲಾವಣೆಯೊಂದಿಗೆ ಅನುಕರಿಸುತ್ತಾರೆ. ಯಾರಾದರೂ ಒಬ್ಬ ವ್ಯಕ್ತಿಯು ವ್ಯಕ್ತಿತ್ವನಿರ್ಮಾಣದ ಬಗ್ಗೆ ಮಾತನಾಡಿ ಪ್ರಸಿದ್ಧರಾದರೆ ಇತರರೂ ಹಾಗೆಯೇ ಮಾಡಿ ಪ್ರಸಿದ್ಧರಾಗಲು ಪ್ರಯತ್ನಿಸುತ್ತಾರೆ. ಆಧ್ಯಾತ್ಮಿಕ ಸಾಧನೆಗಳನ್ನು ಅಸ್ವಾಭಾವಿಕವಾಗಿ ಅನುಕರಿಸಿ ಗುರುಪಟ್ಟಕ್ಕೇರುವ ಆಷಾಢಭೂತಿಗಳೂ ಇದ್ದಾರೆ. ಹೀಗೆ ಹಲವು ಬಗೆಯ ಅನುಕರಣೆಗಳಿವೆ. ಈ ವಿಷಯದಲ್ಲಿ ಸ್ವಾಮಿ ವಿವೇಕಾನಂದರು ಏನು ಹೇಳುತ್ತಾರೆ ಎಂಬುದನ್ನು ಕೇಳೋಣ.

"ಅಂಧಾನುಕರಣೆ ನಾಗರಿಕತೆಯಲ್ಲ. ಒಬ್ಬ ರಾಜನ ಉಡುಗೆಯನ್ನು ತೊಟ್ಟುಕೊಂಡ ಮಾತ್ರಕ್ಕೆ ನಾನು ರಾಜನಾಗುವುದು ಅಸಾಧ್ಯ. ಸಿಂಹದ ಚರ್ಮವನ್ನು ಹೊದ್ದುಕೊಂಡ ಕತ್ತೆ ಎಂದಿಗೂ ಸಿಂಹವಾಗಲಾರದು. ಅಂಥ ಅನುಕರಣೆ, ವಿಚಾರಹೀನ ಹೇಡಿಯ ಅನುಕರಣೆ ಎಂದಿಗೂ ನಮ್ಮ ಏಳಿಗೆಗೆ ಕಾರಣವಾಗಲಾರದು. ಇಷ್ಟು ಮಾತ್ರವಲ್ಲ, ಅದು ನಮ್ಮ ಅಧೋಗತಿಯ ಹೆಗ್ಗುರುತು. ವ್ಯಕ್ತಿಯು ಯಾವಾಗ ತನ್ನನ್ನು ತಾನೇ ದ್ವೇಷಿಸುತ್ತಾನೆಯೋ, ಆಗ ಅವನನ್ನು ನಾಶಮಾಡುವ ಕೊನೆಯ ಪೆಟ್ಟು ಅವನಿಗೆ ಬಿತ್ತೆಂದು ತಿಳಿಯಿರಿ. ಯಾವನು ತನ್ನ ಪೂರ್ವಿಕರಿಂದ ತನಗೆ ಅವಮಾನವಾಯಿತೆಂದು ಖಿನ್ನಮನಸ್ಕನಾಗುವನೊ, ಆಗ ಅವನಿಗೆ ಕೊನೆಗಾಲ ಸಮೀಪಿಸಿತೆಂದು ತಿಳಿಯಿರಿ... ಯಾವಾಗ ನೀವು ಇತರರ ಅಧೀನಕ್ಕೆ ಒಳಗಾಗುತ್ತೀರೊ, ಆಗ ಎಲ್ಲ ಸ್ವಂತಿಕೆಯನ್ನೂ ಕಳೆದುಕೊಳ್ಳುತ್ತೀರಿ.

"ಧಾರ್ಮಿಕ, ಆಧ್ಯಾತ್ಮಿಕ ವಿಷಯದಲ್ಲಿಯೂ ನೀವು ಇತರರ ಆಜ್ಞಾಧಾರಕರಾದರೆ ನಿಮ್ಮ ಸಹಜ ಶಕ್ತಿಗಳನ್ನು, ಆಲೋಚನಾ ಶಕ್ತಿಯನ್ನು ಕಳೆದುಕೊಳ್ಳುತ್ತೀರಿ. ಶ್ರಮಪಟ್ಟು ನಿಮ್ಮಲ್ಲಿರುವ ಮಹತ್ವವನ್ನು ವ್ಯಕ್ತಗೊಳಿಸಿ, ಅನುಕರಿಸಬೇಡಿ. ಹೀಗೆಂದ ಮಾತ್ರಕ್ಕೆ ಅನ್ಯರ ಸದ್ಗುಣಗಳನ್ನು ನೀವು ಗ್ರಹಿಸಬಾರದೆಂದು ನನ್ನ ಅಭಿಪ್ರಾಯವಲ್ಲ. ಅನ್ಯರಿಂದ ನಾವು ಅನೇಕ ವಿಷಯಗಳನ್ನು ಕಲಿಯಲೇಬೇಕು. ಬೀಜವನ್ನು ನೆಲದಲ್ಲಿ ಬಿತ್ತಿ ಅದು ಚೆನ್ನಾಗಿ ಬೆಳೆಯಲು ಅತ್ಯವಶ್ಯಕವಾದ ಮಣ್ಣು ಗಾಳಿ ನೀರು ಇತ್ಯಾದಿಗಳನ್ನು ಯಥೇಚ್ಛವಾಗಿ ಕೊಟ್ಟರೆ ಆ ಬಿತ್ತಿದ ಬೀಜವು ಗಿಡವಾಗಿ ಅನಂತರ ಹೆಮ್ಮರವಾಗುತ್ತದೆಯಲ್ಲದೆ, ಅದು ಮಣ್ಣು ಗಾಳಿ ನೀರು ಇವುಗಳಲ್ಲಿ ಯಾವುದೂ ಆಗುವುದಿಲ್ಲ. ತನಗೆ ಕೊಟ್ಟುದೆಲ್ಲವನ್ನೂ ತನ್ನೊಳಗೆ ಹೀರಿಕೊಂಡು ತನ್ನ ಸ್ವಭಾವಾನುಸಾರ ಅದು ದೊಡ್ಡ ಗಿಡ ಅಥವಾ ಮರವಾಗುತ್ತದೆ. ನೀವೂ ಹೀಗೇ ಮಾಡಬೇಕು... ಇತರರ ಸದ್ಗುಣಗಳೆಲ್ಲವನ್ನೂ ಕಲಿಯಿರಿ, ಆದರೆ ಅವುಗಳನ್ನು ನಿಮ್ಮದೇ ಆದ ರೀತಿಯಲ್ಲಿ ನಿಮ್ಮವನ್ನಾಗಿ ಮಾಡಿಕೊಳ್ಳಿ. ನೀವೇ ಅನ್ಯರಾಗಬೇಡಿ"(*ಕೃತಿಶ್ರೇಣಿ,* ೩. ೨೪೧–೪೨).

## ನಮ್ಮಲ್ಲಿರುವುದೇ ಹೊರಗೆ ಕಾಣುವುದು

ಸ್ವಾಮಿ ವಿವೇಕಾನಂದರೇ ಸೂಚಿಸುವಂತೆ, ಅನುಕರಣೆ ಮತ್ತು ಆತ್ಮದ್ವೇಷ – ಇವೆರಡೂ ಆಂತರಿಕ ಶೂನ್ಯತೆಯಿಂದ ಉಂಟಾಗುತ್ತವೆ. ಆಂತರಿಕ ಶೂನ್ಯತೆಯಿಂದ ಉಂಟಾಗುವ ಕೀಳರಿಮೆಯ ಫಲವಾಗಿ ವ್ಯಕ್ತಿಯು ತನ್ನನ್ನು ತಾನೇ ದ್ವೇಷಿಸಲು ಪ್ರಾರಂಭಿಸುತ್ತಾನೆ. ಈ ಆತ್ಮದ್ವೇಷವೇ ಅನ್ಯರನ್ನು ದ್ವೇಷಿಸುವುದಕ್ಕೆ ಕಾರಣ, ಎಲ್ಲ ಹಿಂಸಾತ್ಮಕ ಪ್ರವೃತ್ತಿಗಳಿಗೂ ಕಾರಣ. ಅದಕ್ಕಾಗಿಯೇ ನಾವು ತುಂಬು ಜೀವನವನ್ನು ನಡೆಸಬೇಕು ಎಂದು ಹೇಳುವುದು. ಸಾರ್ಥಕತೆಯ ಭಾವ ನಮ್ಮ ಅಂತರಂಗವನ್ನು ತುಂಬಿಕೊಳ್ಳಬೇಕು. ಇಲ್ಲದಿದ್ದರೆ ನಮ್ಮ ಮನಸ್ಸಿನಲ್ಲುಂಟಾಗುವ ಅಸಮಾಧಾನ ಮತ್ತು ಅಸಂತೋಷಗಳು ನಮ್ಮ ಮಾತು, ಕೃತಿ, ವರ್ತನೆಗಳ ಮೂಲಕ ಹೊರಗೆ ವ್ಯಕ್ತವಾಗಿ ಪರಸ್ಪರ ಮಾನವೀಯ ಸಂಬಂಧವನ್ನು ಕೆಡಿಸುತ್ತವೆ. ಸ್ವಾಮಿ ವಿವೇಕಾನಂದರು ತಮ್ಮ ಪರಿವ್ರಾಜಕ ಸಮಯಲ್ಲಿ ಬೆಳಗಾವಿಯ ಹರಿಪದ ಮಿತ್ರನ ಮನೆಯಲ್ಲಿ ಕೆಲವು ದಿನಗಳು ತಂಗಿದ್ದರು. ತನ್ನ ಮೇಲಧಿಕಾರಿಗಳೊಡನೆ ಹರಿಪದ ಮಿತ್ರನ ಸಂಬಂಧ ಅಷ್ಟೊಂದು ಸಮಾಧಾನಕರವಾಗಿರಲಿಲ್ಲ. ಸ್ವಲ್ಪ ಕೆಣಕಿದರೂ ಅವನು ಕೆಂಡಾಮಂಡಲವಾಗುತ್ತಿದ್ದನು. ಸ್ವಾಮೀಜಿಯವರಿಗೆ ತನ್ನ ಪರಿಸ್ಥಿತಿಯನ್ನು ವಿವರಿಸಿದಾಗ ಅವರೆಂದರು:

"ಇತರರ ಬಗ್ಗೆ ನಮಗಿರುವ ಭಾವನೆಗಳು ನಮ್ಮ ವರ್ತನೆಯ ಮೂಲಕ ವ್ಯಕ್ತವಾಗುವುವು ಎಂಬುದನ್ನು ಮರೆಯಬೇಡ. ನಾವು ಅದನ್ನು ಮಾತಿನ ಮೂಲಕ ವ್ಯಕ್ತಪಡಿಸದಿದ್ದರೂ, ಜನರು ಅದಕ್ಕೆ ಅನುಗುಣವಾಗಿಯೇ ಪ್ರತಿಕ್ರಿಯೆ ತೋರಿಸುತ್ತಾರೆ. ನಮ್ಮೊಳಗೆ ಏನಿದೆಯೋ ಅದನ್ನೇ ನಾವು ಹೊರಗಡೆ ನೋಡುತ್ತೇವೆ. 'ನಾನು ಒಳ್ಳೆಯವನಾದಾಗ ಪ್ರಪಂಚವೂ ಒಳ್ಳೆಯದಾಗುತ್ತದೆ.' ಈ ಮಾತಿನ ಸತ್ಯತೆ ಯಾರಿಗೂ ಅರ್ಥವಾಗುವುದಿಲ್ಲ. ಇಂದಿನಿಂದ ಇತರರ ದೋಷಗಳನ್ನು ನೋಡುವುದನ್ನು ನಿಲ್ಲಿಸು. ಎಷ್ಟರಮಟ್ಟಿಗೆ ನಿನಗಿದು ಸಾಧ್ಯವಾಗುತ್ತರೋ ಅಷ್ಟರಮಟ್ಟಿಗೆ ಇತರರ ಭಾವನೆ ಮತ್ತು ಪ್ರತಿಕ್ರಿಯೆಗಳೂ ಬದಲಾಗುವುವು" (*ಸ್ವಾಮಿ ವಿವೇಕಾನಂದರ ದಿವ್ಯಸ್ಮೃತಿ,* ಪು. ೩೭). ದೋಷ ನೋಡುವುದನ್ನು ನಿಲ್ಲಿಸುವ ಪ್ರಯತ್ನದೊಡನೆ ಒಂದು ಹೊಸ ಅಧ್ಯಾಯ ತನ್ನ ಜೀವನದಲ್ಲಿ ಪ್ರಾರಂಭವಾಯಿತೆಂದು ಹರಿಪದ ಮಿತ್ರನು ಹೇಳುತ್ತಾನೆ.

ಸ್ವಾಮೀಜಿಯವರ ಈ ಮೇಲಿನ ಉಪದೇಶವು ಪ್ರಕ್ಷೇಪಣವೆಂಬ ಮಾನಸಿಕ ಪ್ರವೃತ್ತಿಯನ್ನು ಸೂಚಿಸುತ್ತದೆ. ನಾವಿಷ್ಟಪಡದ, ನಮ್ಮೊಳಗಿರುವ ದೋಷದೌರ್ಬಲ್ಯಗಳನ್ನು ಹೊರಗೆ ಪ್ರಕ್ಷೇಪಿಸಿ ಅವುಗಳನ್ನು ಇತರರಲ್ಲಿ ನೋಡುತ್ತೇವೆ, ಅಷ್ಟೇ ಅಲ್ಲದೆ, ನಮಗವು ಅಸಹನೀಯವಾಗುತ್ತವೆ. "ಪಾಪಪ್ರಜ್ಞೆಯನ್ನು ಕೆರಳಿಸುವ ಯಾವುದಾದರೂ ಪ್ರವೃತ್ತಿಯು ನಮ್ಮೊಳಗಿದ್ದರೆ ನಾವು ಸಾಮಾನ್ಯವಾಗಿ ಅದನ್ನು ಇತರರ ಮೇಲೆ ಆರೋಪಿಸುತ್ತೇವೆ. ನಾವು ಅದುಮಿಡಲು ಪ್ರಯತ್ನಿಸುವ ಆ ಪ್ರವೃತ್ತಿಯನ್ನು ಇತರರಲ್ಲಿ ನೋಡಿದಾಗ ನಮಗೆ ಅಸಹನೀಯವೆನಿಸುತ್ತದೆ. ಇತರರ ಒಳತೋಟಿ, ದೊಡ್ಡಸ್ತಿಕೆ ಅಥವಾ ಸಣ್ಣತನದ ಬಗ್ಗೆ ಯಾವಾಗಲೂ ದೂರುವ ವ್ಯಕ್ತಿಯಲ್ಲಿ ಅದೇ ದೌರ್ಬಲ್ಯವಿರುವುದು ಕಂಡುಬರುತ್ತದೆ" (Rose Night, "*A Modern Introduction to Psychology*", P.197).

ಇದೇ ಭಾವನೆಯನ್ನು ಪ್ರತಿಧ್ವನಿಸುತ್ತ ಪ್ರಸಿದ್ಧ ಮನಶ್ಶಾಸ್ತ್ರಜ್ಞ ಕೆನ್ ವಿಲ್ಬರ್ ಹೀಗೆ ಹೇಳುತ್ತಾರೆ: "ಜಗತ್ತು ನಮ್ಮನ್ನು ದ್ವೇಷಿಸುತ್ತಿದೆ ಎಂದು ನಾವು ಭಾವಿಸುವುದಕ್ಕೆ ಕಾರಣ, ನಮ್ಮ ಮನಸ್ಸಿನ ಒಂದು ಭಾಗ ನಮಗರಿವಿಲ್ಲದಂತೆ ಮೆತ್ತಗೆ ಜಗತ್ತನ್ನು ದ್ವೇಷಿಸುತ್ತಿರುತ್ತದೆ." ಹಾಗೆಯೇ ಇದು ನಮ್ಮ ಪ್ರೀತಿಯನ್ನು ವ್ಯಕ್ತಪಡಿಸಲಾಗದ ಸ್ಥಿತಿಯನ್ನೂ ಸೂಚಿಸುತ್ತದೆ. ನಮ್ಮ ಬೆಳವಣಿಗೆಗೆ ಇತರರ ಪ್ರೀತಿಯ ಆವಶ್ಯಕತೆ ಇರುವಂತೆ, ಇತರರನ್ನು ಪ್ರೀತಿಸುವುದೂ ನಮಗೆ ಅವಶ್ಯಕ. ಇತರರನ್ನು ಪ್ರೀತಿಸಲು ನಮಗೆ ಸಾಧ್ಯವಾದರೆ ಇತರರು ನಮ್ಮನ್ನು ದ್ವೇಷಿಸುತ್ತಿರುವವರು ಎಂದು ನಮಗನಿಸುವುದೇ ಇಲ್ಲ. ನಮ್ಮ ಪ್ರೀತಿ ಸಹಾನುಭೂತಿಗಳನ್ನು ಹೊರಗೆ ವ್ಯಕ್ತಪಡಿಸಲು ಸಾಧ್ಯವಾಗದಿದ್ದಾಗ ಸ್ವಾಭಾವಿಕವಾಗಿಯೇ ನಮ್ಮ ದೌರ್ಬಲ್ಯಗಳನ್ನೇ ಹೊರಗೆ ಪ್ರಕ್ಷೇಪಿಸಿ ಅವುಗಳ ಪ್ರತಿಬಿಂಬಗಳನ್ನು ಹೊರಗಡೆ ಕಾಣುತ್ತೇವೆ. "ಇತರರ ಕಟುಟೀಕೆ (ನಮ್ಮದೇ) ಆತ್ಮಕತೆಯ ತುಣುಕುಗಳು" ಎಂದು ಕೆನ್ ವಿಲ್ಬರ್ ಹೇಳುತ್ತಾರೆ. ಈ ಎಲ್ಲ ಮನಶ್ಶಾಸ್ತ್ರೀಯ ತಥ್ಯಗಳು ಸ್ವಾಮಿ ವಿವೇಕಾನಂದರು ಒತ್ತಿ ಹೇಳುವ ವೈಯಕ್ತಿಕ ಪರಿವರ್ತನೆಯನ್ನು ಸಮರ್ಥಿಸುತ್ತವೆ. ಅವರ ಮಾತನ್ನು ಮತ್ತೊಮ್ಮೆ ನೆನಪಿಸಿಕೊಳ್ಳೋಣ: "ಪ್ರೀತಿ, ಸದ್ಗುಣ ಮತ್ತು ಪಾವಿತ್ರ್ಯದಲ್ಲಿ ನಾವು ಮುಂದುವರಿದಂತೆ ಬಾಹ್ಯದಲ್ಲಿಯೂ ಅವನ್ನು ನೋಡುತ್ತೇವೆ. ನಾನು ಇತರರನ್ನು ಖಂಡಿಸುವುದೆಲ್ಲ ಕೊನೆಗೆ ನಿಜವಾಗಿ ನನ್ನನ್ನೇ ಖಂಡಿಸಿಕೊಂಡಂತೆ. ನೀವು ವ್ಯಷ್ಟಿಯನ್ನು ಸರಿಪಡಿಸಿಕೊಂಡರೆ (ನಿಮಗಿದು ಸಾಧ್ಯ), ಸಮಷ್ಟಿ ತನಗೆ ತಾನೇ ತಿದ್ದಿಕೊಳ್ಳುವುದು" (*ಕೃತಿಶ್ರೇಣಿ,* ೧. ೨೭೬).

ಈ ಪ್ರಕ್ಷೇಪಣಾ ಪ್ರವೃತ್ತಿಯ ಇನ್ನೊಂದು ಮುಖವಿದೆ. ನಾವು ಯಾವುದನ್ನು ಹೊರಗೆ ಕಳಿಸುತ್ತೇವೆಯೋ, ಅದು ಯಾವುದೋ ರೂಪದಲ್ಲಿ, ಯಾವುದೋ ಸಮಯದಲ್ಲಿ, ಮತ್ತು ಯಾವುದಾದರೂ ರೀತಿಯಲ್ಲಿ ನಮಗೇ ಹಿಂದಿರುಗಿ ಬರುತ್ತದೆ. ಅದು ಹಿಂದಿರುಗಿ ಬಂದಾಗ ನಾವು ಕಳಿಸಿರುವುದೇ ನಮಗೆ ಮರಳಿ ಬರುತ್ತಿದೆ ಎಂಬುದು ತಿಳಿದುಬರುವುದಿಲ್ಲ, ಯಾವುದೇ ತಪ್ಪಿಲ್ಲದಿದ್ದರೂ ನಾವಿದನ್ನು ಅನುಭವಿಸಬೇಕಾಗಿದೆಯಲ್ಲ ಎಂದು ಆಗ ಪರಿತಪಿಸುತ್ತೇವೆ. ಈ ವಿಷಯವನ್ನು ಸ್ವಾಮೀಜಿಯವರ ಮಾತಿನಲ್ಲಿಯೇ ಕೇಳೋಣ: "ಪ್ರತಿಯೊಂದು ಹೀನ ಆಲೋಚನೆಯೂ ಕೂಡ ನಮ್ಮ ಕಡೆ ತಿರುಗುವುದು. ನೀವು ಒಂದು ನಿರ್ಜನವಾದ ಗವಿಯೊಳಗೆ ಕುಳಿತು ಮಾಡಿದ ಕೆಟ್ಟ ಆಲೋಚನೆಗಳೂ ಕೂಡ ಒಂದು ಕಡೆ ಶೇಖರಿಸಲ್ಪಡುವುವು ಮತ್ತು ಯಾವುದಾದರೊಂದು ದುಃಖದ ರೂಪದಲ್ಲಿ ಮಹಾವೇಗದಿಂದ ನಿಮ್ಮ ಕಡೆಗೆ ಹಿಂತಿರುಗುವುವು. ದ್ವೇಷ ಅಸೂಯೆಗಳನ್ನು ನೀವು ತೋರಿದರೆ ಅವು ಚಕ್ರಬಡ್ಡಿ ಸಮೇತ ನಿಮಗೆ ಹಿಂತಿರುಗಿ ಬರುತ್ತವೆ. ಯಾವ ಶಕ್ತಿಯೂ ಅದನ್ನು ತಪ್ಪಿಸಲಾರದು. ಒಂದು ಬಾರಿ ಅದನ್ನು ಚಲಿಸುವಂತೆ ಮಾಡಿದರೆ ಅದರ ಫಲವನ್ನು ಅನುಭವಿಸಲೇಬೇಕು. ಇದನ್ನು ನೆನಪಿನಲ್ಲಿಟ್ಟುಕೊಂಡರೆ ನೀವು ಕೆಟ್ಟದನ್ನು ಮಾಡುವುದು ನಿಲ್ಲುತ್ತದೆ" (ಕೃತಿಶ್ರೇಣಿ, ೨. ೪೩೫).

ಆತ್ಮದ್ವೇಷದ ದುಷ್ಪರಿಣಾಮಗಳನ್ನು 'ಹಿತೋಪದೇಶ' ಗ್ರಂಥವು ಒಂದು ಉದಾಹರಣೆಯ ಮೂಲಕ ತಿಳಿಸುತ್ತದೆ.

**ರೋಗ ಶೋಕ ಪರಿತಾಪಬಂಧನವ್ಯಸನಾನಿ ಚ ।**
**ಆತ್ಮಾಪರಾಧವೃಕ್ಷಾಣಾಂ ಫಲಾನ್ಯೇತಾನಿ ದೇಹಿನಾಮ್ ॥**

"ಆತ್ಮಾಪರಾಧವೆಂಬ ವೃಕ್ಷವು ಐದು ಬಗೆಯ ಫಲಗಳನ್ನು ಬಿಡುತ್ತವೆ. ಅವು ಯಾವುವೆಂದರೆ ರೋಗ, ಶೋಕ, ಮನಸ್ತಾಪ, ಬಂಧನ ಮತ್ತು ದುಶ್ಚಟ."

## ನಿರ್ಭಯತೆಯ ಅಭಯದಾನ

ನಮ್ಮ ಜೀವನವನ್ನು ಉತ್ತಮವಾಗಿಸಲು ಅತ್ಯಂತ ಮುಖ್ಯವಾಗಿ ನಮಗೆ ಬೇಕಾಗಿರುವ ಗುಣ ನಿರ್ಭಯತೆ. ಸ್ವಾಮಿ ವಿವೇಕಾನಂದರು ಇದಕ್ಕೆ ನೀಡುವಷ್ಟು ಒತ್ತನ್ನು ಮತ್ತಾರೂ ನೀಡುವುದಿಲ್ಲ. ನಾವು ಭಯದಿಂದ ನೀತಿವಂತರಾಗಿರಲು ಪ್ರಯತ್ನಿಸುತ್ತೇವೆ. ಅವಮಾನದ ಭಯದಿಂದ ಸಭ್ಯರಾಗಿರುತ್ತೇವೆ. ಸೋಲಿನ ಭಯದಿಂದ ಏನನ್ನೂ ಸಾಧಿಸಲು ಪ್ರವೃತ್ತರಾಗುವುದಿಲ್ಲ. ಅನಿಶ್ಚಿತತೆಯ ಭಯದಿಂದ ಯಾವುದೇ ಹೊಸತನ್ನು ಮಾಡಲು ಹಿಂಜರಿಯುತ್ತೇವೆ. ಅನೇಕರು ನಿಂದೆಯ ಭಯದಿಂದ ಮುಂದೆ ಹೋಗುವುದೇ ಇಲ್ಲ. ಅಪಾಯದ ಭಯದಿಂದ ಯಾವುದೇ ಸವಾಲನ್ನು ಸ್ವೀಕರಿಸಲು ಉಪಾಯದಿಂದ ನುಣುಚಿಕೊಳ್ಳುತ್ತೇವೆ. ಮುಂದಾಗುವ ರೋಗದ ಭಯದಿಂದ ಇರುವ ಆರೋಗ್ಯವನ್ನು ಕೆಡಿಸಿಕೊಳ್ಳುತ್ತೇವೆ. ಕೆಟ್ಟವನೆಂದು ಅನಿಸಿಕೊಳ್ಳಬೇಕಾಗುತ್ತದೆ ಎಂಬ ಭಯದಿಂದ ಕಷ್ಟಪಟ್ಟು ಒಳ್ಳೆಯವರಾಗಿರಲು ಪ್ರಯತ್ನಿಸುತ್ತೇವೆ. ಏಕಾಂಗಿತನದ ಭಯದಿಂದ ಎಲ್ಲ ವಿಷಯಗಳಲ್ಲಿ ಸ್ವಂತಿಕೆಯನ್ನು ಕಳೆದುಕೊಳ್ಳುತ್ತೇವೆ. ಮಾನದ ಭಯ, ಜನರ ಭಯ, ಪರೀಕ್ಷೆಯ ಭಯ, ಕೆಲಸದ ಭಯ, ವಿವಾಹಿತ ಜೀವನದ ಭಯ, ಹೊಸ ಜಾಗ ಪರಿಸರಗಳ ಭಯ, ಹಲವು ತೊಂದರೆ ತಾಪತ್ರಯಗಳ ಭಯ, ವೃದ್ಧಾಪ್ಯದ ಭಯ, ವಯಸ್ಸಾದಂತೆ ಸೌಂದರ್ಯವನ್ನು ಕಳೆದುಕೊಳ್ಳುವ ಭಯ, ಸಾವಿನ ಭಯ, ಮರಣೋತ್ತರ ಭಯ – ಹೀಗೆ ನೂರಾರು ಭಯ ಆತಂಕಗಳು ನಮ್ಮನ್ನು ಕಾಡುತ್ತಿರುತ್ತವೆ ಹಾಗೂ ನಮ್ಮ ನಡೆನುಡಿಗಳನ್ನು ನಿಯಂತ್ರಿಸುತ್ತಿರುತ್ತವೆ. ಸ್ವಾಮಿ ವಿವೇಕಾನಂದರ ನಿರ್ಭಯ ಸಂದೇಶವನ್ನು ಆಲಿಸೋಣ : "**ವೀರಭೋಗ್ಯಾ ವಸುಂಧರಾ** – ವೀರನೇ ವಸುಂಧರೆಯನ್ನು ಅನುಭವಿಸುವವನು. ಈ ಮಾತು ಖಂಡಿತವಾಗಿಯೂ ಸತ್ಯ. ವೀರನಾಗು, ಸರ್ವದಾ **ಅಭೀಃ ಅಭೀಃ** ಎಂದು ಹೇಳು. ಎಲ್ಲರಿಗೂ **ಮಾಭೀಃ ಮಾಭೀಃ** ಎಂದು ಹೇಳು. ಭಯವೇ ಮೃತ್ಯು, ಭಯವೇ ಪಾಪ, ಭಯವೇ ನರಕ, ಭಯವೇ ವ್ಯಭಿಚಾರ. ಜಗತ್ತಿನಲ್ಲಿ ಎಷ್ಟು ಅಸತ್ತಿನ ಅಥವಾ ಮಿಥ್ಯೆಯ ಭಾವಗಳು ಇವೆಯೋ, ಅವೆಲ್ಲ ಈ ಭಯರೂಪಿ ಸೈತಾನನಿಂದಲೇ ಬಂದವು" (*ಕೃತಿಶ್ರೇಣಿ,* ೮. ೧೧೫).

ಸಾಹಸಪ್ರಿಯ ಯುವಕನೋರ್ವನು ದೂರದ ಬೆಟ್ಟಗಾಡಿನ ಪ್ರದೇಶದಲ್ಲಿ ಓಡಾಡುತ್ತಿದ್ದನು. ನಿಸರ್ಗಸೌಂದರ್ಯದಿಂದ ಮೆರೆಯುತ್ತಿದ್ದ ಫಲವತ್ತಾದ ಪ್ರದೇಶ. ಆ ಪ್ರಕೃತಿಯ ಮಡಿಲಲ್ಲಿ ಒಂದು ಹಳ್ಳಿ. ಆ ಹಳ್ಳಿಯ ಜನರನ್ನು ನೋಡಿ ಯುವಕನಿಗೆ ಆಶ್ಚರ್ಯವಾಯಿತು. ಅವರ ದೇಹ ಕೃಶವಾಗಿತ್ತು, ಮುಖ ಕಾಂತಿಹೀನವಾಗಿತ್ತು, ಎಲ್ಲರೂ ಜೋಲು ಮುಖದವರೇ. ಸಂತೋಷದ ಛಾಯೆ ಎಲ್ಲೆಲ್ಲಿಯೂ

ಇಲ್ಲ, ಎಲ್ಲೆಲ್ಲೂ ವಿಷಾದದ ಮೋಡ ಕವಿದಿತ್ತು. ಇಂತಹ ಸುಂದರ ಪ್ರದೇಶದಲ್ಲಿ, ಇಂತಹ ಫಲವತ್ತಾದ ಜಾಗದಲ್ಲಿ ಜನರೇಕೆ ಹೀಗಿದ್ದಾರೆ ಎಂದು ಯುವಕನಿಗೆ ಅಚ್ಚರಿ. ದೂರದಲ್ಲಿ ಕುಳಿತಿದ್ದ ಸಾಧುವೊಬ್ಬರನ್ನು ಯುವಕನು ಸಂಧಿಸಿ, ಜನರ ಈ ದುಸ್ಥಿತಿಗೆ ಕಾರಣವೇನೆಂದು ಕೇಳಿದನು. "ಎದುರುಗಡೆ ಇರುವ ಬೆಟ್ಟದ ಮೇಲೆ ಬೃಹದಾಕಾರದ ಭಯಂಕರವಾದ ರಾಕ್ಷಸನಿರುವನು. ಅವನು 'ನಿಮ್ಮನ್ನು ತಿಂದು ಬಿಡುತ್ತೇನೆ' ಎಂದು ಹೆದರಿಸುತ್ತಿರುವನು, ಇದರ ಭಯದಿಂದಲೇ ಜನರು ಈ ಸ್ಥಿತಿಯಲ್ಲಿರುವವರು" ಎಂದು ಸಾಧು ವಿವರಿಸಿದರು. ತಾನು ಆ ರಾಕ್ಷಸನನ್ನು ನೋಡಬೇಕೆಂದು ಯುವಕನು ಹೇಳಿದನು. ಸಾಧುವು ಬೇಡವೆಂದು ಎಷ್ಟೇ ಹೆದರಿಸಿದರೂ ಕೇಳದೆ ಯುವಕನು ನೇರವಾಗಿ ಬೆಟ್ಟವನ್ನೇರಿದನು. ಆಕಾಶದಷ್ಟು ಎತ್ತರಕ್ಕೆ ರಾಕ್ಷಸನು ನಿಂತುಕೊಂಡಿದ್ದನು. ಆತನದು ಭಯಂಕರ ಆಕೃತಿ. ಯುವಕನು ಎದೆಗೆಡದೆ ನಿಧಾನವಾಗಿ ರಾಕ್ಷಸ ನೆಡೆಗೆ ಮುನ್ನಡೆದನು. ಅವನು ಸಮೀಪಿಸುತ್ತಿದ್ದಂತೆ ರಾಕ್ಷಸನ ಆಕೃತಿ ಕಿರಿದಾಗುತ್ತ ಬಂತು. ರಾಕ್ಷಸನ ಹತ್ತಿರ ಹೋದಾಗ ಅವನು ಚಿಕ್ಕ ಗೊಂಬೆಯಂತಾದನು. ಯುವಕನು ತನ್ನ ಹಸ್ತವನ್ನು ಮುಂದೆ ಚಾಚಿದನು. ಆ ಗೊಂಬೆಯಾಕಾರದ ರಾಕ್ಷಸನು ಯುವಕನ ಹಸ್ತದ ಮೇಲೆ ನಿಂತನು. "ನೀನು ಯಾರು?" ಎಂದು ಯುವಕನು ಕೇಳಿದನು. "ನಾನು ಭಯ." "ಹೀಗೇಕೆ ಜನರನ್ನು ಹೆದರಿಸುವೆ?" ಆ ಗೊಂಬೆಯು ಹೇಳಿತು: "ಯಾರು ನನಗೆ ಹೆದರುತ್ತಾರೊ ಅವರಿಗೆ ನಾನು ಬೃಹದಾಕಾರವಾಗಿ ಕಾಣುತ್ತೇನೆ. ಯಾರು ನನ್ನನ್ನು ಎದುರಿಸುತ್ತಾರೊ ಅವರ ಪಾಲಿಗೆ ನಾನು ಕಿರಿದಾಗುತ್ತೇನೆ."

ನಾವೇಕೆ ಇಷ್ಟೊಂದು ಭಯಪಡುತ್ತೇವೆ? ಸ್ವಾಮಿ ವಿವೇಕಾನಂದರ ಪ್ರಕಾರ, ನಾವು ಪರಾವಲಂಬಿಗಳಾಗಿರುವುದರಿಂದ ನಾವು ಹೊರಗಿನಿಂದ, ಇತರರಿಂದ ತುಂಬ ನಿರೀಕ್ಷಿಸುತ್ತೇವೆ. ಆ ನಿರೀಕ್ಷೆ ಒಂದು ಮಿತಿಯನ್ನು ಮೀರಿದಾಗ, ನಮ್ಮ ನಿರೀಕ್ಷೆ ಸಫಲವಾಗದಿರುವ ಕಾತರತೆ, ಪಡೆದಿರುವುದನ್ನು ಕಳೆದುಕೊಳ್ಳುವ ಭಯ ನಮಗಿರಿವಿಲ್ಲದಂತೆಯೇ ನಮ್ಮನ್ನು ಕಾಡುತ್ತಿರುತ್ತವೆ. ಗಳಿಸಿರುವ ಪ್ರೀತಿ ಗೌರವಗಳನ್ನು ಎಲ್ಲಿ ಕಳೆದುಕೊಳ್ಳುತ್ತೇವೊ ಎಂಬ ಭಯ, ಇತರರ ಅಸಮಾಧಾನಕ್ಕೆ ಎಲ್ಲಿ ಒಳಗಾಗುತ್ತೇನೊ ಎಂಬ ಭಯ ನಮ್ಮನ್ನು ಮುಸುಕಿರುತ್ತದೆ. ಇದರಿಂದ ನಮ್ಮ ಮಾತು ವರ್ತನೆಗಳಲ್ಲಿ ಅಸ್ವಾಭಾವಿಕತೆ ಇರುತ್ತದೆ. ನಮ್ಮ ಅಂತರಂಗ ಸಾರ್ಥಕತೆಯ ಭಾವದಿಂದ ತುಂಬಿಕೊಂಡಿದ್ದಾಗ ಈ ರೀತಿಯ ಭಯಗಳಿಗೆ ಅವಕಾಶವಿರುವುದಿಲ್ಲ. ಈ ವಿಷಯದಲ್ಲಿ ಸ್ವಾಮೀಜಿಯವರ ವಾಣಿಯನ್ನು ಕೇಳಿ: "ನಮ್ಮ ಬಾಳಿನ ಶ್ರೇಷ್ಠತಮ ರಹಸ್ಯವೇ ಅಂಜಿಕೆ ಇಲ್ಲದಿರುವುದು. ನಿಮಗೆ ಏನು ಆಗಿಬಿಡುವುದೊ ಎಂದು ಅಂಜಬೇಡಿ. ಯಾರ ಆಸರೆಯ ಮೇಲೂ ನಿಲ್ಲಬೇಡಿ. ಎಲ್ಲ ಸಹಾಯವನ್ನು ತಿರಸ್ಕರಿದಾಗ ಮಾತ್ರ ನೀವು ಸ್ವತಂತ್ರರು. ನೀರಿನಿಂದ ತುಂಬಿರುವ ಸ್ಪಂಜು ಇನ್ನು ಹೆಚ್ಚನ್ನು ಹೀರಿಕೊಳ್ಳಲಾರದು" (*ಕೃತಿ ಶ್ರೇಣಿ*, ೧. ೨೯೭).

## ಸ್ವಾತಂತ್ರ್ಯವೆಂಬ ಮಹಾಮಂತ್ರ

ಸ್ವಾಮಿ ವಿವೇಕಾನಂದರ ಸಂದೇಶದಲ್ಲಿ ಸ್ವಾತಂತ್ರ್ಯವೆಂಬ ಭಾವನೆ ಎದ್ದು ಕಾಣುತ್ತದೆ. ಎಲ್ಲ ವಿಷಯದಲ್ಲಿಯೂ ಅವರು ಸ್ವಾತಂತ್ರ್ಯವನ್ನೇ ಮೆಚ್ಚುತ್ತಿದ್ದರು. ಬೆಳವಣಿಗೆಗೆ ಸ್ವಾತಂತ್ರ್ಯವೇ ಮೂಲಸೂತ್ರ ಎಂಬುದು ಅವರ ಅಭಿಪ್ರಾಯವಾಗಿತ್ತು. ಒಂದು ವ್ಯಕ್ತಿಯನ್ನು ಹಲವಾರು ನೀತಿ ನಿಯಮಗಳಿಂದ ಕಟ್ಟಿ ಹಾಕಿದರೆ, ಅವನು ಅನೇಕ ಕಟ್ಟುಪಾಡುಗಳ ಕೋಟೆಯೊಳಗೆ ಬಂಧಿತನಾದರೆ, ತನ್ನ ಆಂತರಿಕ ಸತ್ವವನ್ನು ವ್ಯಕ್ತಪಡಿಸಲು ಮುಕ್ತ ವಾತಾವರಣ ಇಲ್ಲದಿದ್ದರೆ, ಸ್ವಾಭಾವಿಕವಾಗಿಯೇ ಅವನ ಬೆಳವಣಿಗೆ ಕುಂಠಿತವಾಗುತ್ತದೆ. ಒಂದು ಸಸಿಯನ್ನು ಮೊದಲು ಕುಂಡದಲ್ಲಿ ಬೆಳೆಸಬೇಕು. ಅನಂತರ ಅದನ್ನು ನೆಲದಲ್ಲಿ ನೆಡಬೇಕು. ಆಗ ಅದು ವಿಸ್ತಾರವಾಗಿ ಬೇರುಗಳನ್ನು ವಿಸ್ತರಿಸಿ ವಿಶಾಲವೃಕ್ಷವಾಗಿ ಬೆಳೆಯುತ್ತದೆ. ಇದಲ್ಲದೆ ಅದನ್ನು ಕುಂಡದಲ್ಲಿಯೇ ಉಳಿಸಿದರೆ ಅದು ತನ್ನ ಪೂರ್ಣಪ್ರಮಾಣಕ್ಕೆ ಬೆಳೆಯಲಾರದು.

ಸ್ವಾಮಿ ವಿವೇಕಾನಂದರ ಪ್ರಕಾರ ಸ್ವಾತಂತ್ರ್ಯದ ಮೂರು ಮುಖ್ಯ ಲಕ್ಷಣಗಳಾವುವೆಂದರೆ, **೧. ಇತರರ ಸ್ವಾತಂತ್ರ್ಯವನ್ನು ಗೌರವಿಸುವುದು, ೨. ಸ್ವ–ಶಿಸ್ತು** ಮತ್ತು **೩. ತನಗೆ ತಾನೇ ಜವಾಬ್ದಾರನಾಗಿರುವುದು.** ನಿಜವಾದ ಸ್ವಾತಂತ್ರ್ಯಪ್ರಿಯನು ಇತರರ ಸ್ವಾತಂತ್ರ್ಯಕ್ಕೆ ಧಕ್ಕೆಯನ್ನುಂಟುಮಾಡುವುದಿಲ್ಲ. ತನ್ನ ಯಾವುದೋ ದೌರ್ಬಲ್ಯಕ್ಕೆ ವಶನಾಗಿರುವವನು ಮಾತ್ರ ಇತರರ ಸ್ವಾತಂತ್ರ್ಯಕ್ಕೆ ಧಕ್ಕೆಯನ್ನುಂಟುಮಾಡಬಲ್ಲ. ಸ್ವಾತಂತ್ರ್ಯದ ಹೆಸರಿನಲ್ಲಿ ಯಾವ ಶಿಸ್ತನ್ನೂ ಬಯಸದವನು ತನ್ನ ಇಂದ್ರಿಯ, ಆಸೆ, ಭಾವೋದ್ವೇಗಗಳಿಗೆ ದಾಸನಾಗಿರುತ್ತಾನೆ. ಸ್ವತಂತ್ರ ಮನೋಭಾವದ ವ್ಯಕ್ತಿಯು ತನಗಾಗುವುದಕ್ಕೆಲ್ಲ, ತಾನಿರುವ ಸ್ಥಿತಿಗೆಲ್ಲ ತಾನೇ ಜವಾಬ್ದಾರ ಎಂದು ಭಾವಿಸುತ್ತಾನೆ; ಇತರರನ್ನಾಗಲಿ, ಸಮಾಜವನ್ನಾಗಲಿ, ದೇವರನ್ನಾಗಲಿ ದೂರುವುದಿಲ್ಲ. ದೂರುವುದೆಂದರೆ ಪರಾವಲಂಬನೆಯಾಗುತ್ತದೆ, ಸ್ವಾತಂತ್ರ್ಯದಿಂದ ದೂರವಾದಂತಾಗುತ್ತದೆ.

ಅನೇಕ ವಿಷಯಗಳಿಗೆ ನಾವೆಷ್ಟೇ ಬದ್ಧರಾಗಿದ್ದರೂ ನಮ್ಮಲ್ಲಿ ಸ್ವಾತಂತ್ರ್ಯದ ಕಲ್ಪನೆಯಿದೆ. ಬಂಧನದ ಅರಿವು ಮತ್ತು ಮುಕ್ತಿಯ ಬಯಕೆ – ಇದೇ ಆಧ್ಯಾತ್ಮಿಕತೆಯ ಲಕ್ಷಣ, ಇದೇ ಮನುಷ್ಯತ್ವದ ಲಕ್ಷಣವೂ ಕೂಡ. ನಮ್ಮ ನಿಜಸ್ವರೂಪವು ಅಧ್ಯಾತ್ಮವಾಗಿರುವುದರಿಂದಲೇ ಹಾಗೂ ಅಧ್ಯಾತ್ಮದಲ್ಲಿ ಮಾತ್ರ ಮುಕ್ತಿ ಸಾಧ್ಯವಾಗಿರುವುದರಿಂದಲೇ ನಮ್ಮಲ್ಲಿ ಸ್ವಾತಂತ್ರ್ಯದ ಬಯಕೆ ಇರುವುದು. ಭೌತಿಕವಾಗಿ ಸ್ವಾತಂತ್ರ್ಯವಿಲ್ಲ – ದೇಹವು ಬಾಹ್ಯ ವಿಷಯಗಳನ್ನು ಅವಲಂಬಿಸಿರುತ್ತದೆ. ಮನಸ್ಸು ಅನ್ಯ ವಿಚಾರಾವಲಂಬಿ. ಆದ್ದರಿಂದ ದೇಹೇಂದ್ರಿಯ ಮಾನಸಿಕ ಹಂತಗಳಲ್ಲಿ ನಿಜವಾದ ಸ್ವಾತಂತ್ರ್ಯ ಸಾಧ್ಯವಿಲ್ಲ. ಈ ಹಂತಗಳಲ್ಲಿ ಸ್ವಾತಂತ್ರ್ಯವೆಂದರೇನೇ ದಾಸ್ಯ! ದೇಹವು ಪರಾವಲಂಬಿಯಾಗಿರಲಿ, ಇಂದ್ರಿಯಗಳು ಪರಾವಲಂಬಿಯಾಗಿರಲಿ, ಮನಸ್ಸೂ ಪರಾವಲಂಬಿಯಾಗಿರಲಿ. ಆದರೆ 'ನಾನು' ಮಾತ್ರ ದೇಹೇಂದ್ರಿಯ ಮನಸ್ಸುಗಳಿಗೆ ಅವಲಂಬಿಯಾಗಿರಬಾರದು. ಅವುಗಳು ಹೇಳಿದಂತೆ ಕೇಳಬಾರದು. ಅವುಗಳನ್ನು ನಮ್ಮ ಆಳುಗಳಂತೆ ಚೆನ್ನಾಗಿ ನೋಡಿಕೊಳ್ಳಬೇಕು, ಅಷ್ಟೇ. ವಿವೇಕಾನಂದರ ಮುಕ್ತಿ ಸಂದೇಶವನ್ನು ಕೇಳಿ : "ಯಾರು ತಮ್ಮ ಮೇಲೆ ಪರಿಣಾಮವನ್ನುಂಟುಮಾಡಲು ಯಾವುದಕ್ಕೂ ಯಥಾರ್ಥವಾಗಿಯೂ ಅವಕಾಶ ಕೊಡರೋ, ಯಾರು ಬಾಹ್ಯ ಪ್ರಪಂಚದ ಆಘಾತದಿಂದ ಹರ್ಷವನ್ನಾಗಲಿ ದುಃಖವನ್ನಾಗಲಿ

ಪಡೆಯರೋ, ಅಂತಹವರನ್ನು ಕಂಡುಹಿಡಿಯುವ ನಿಜವಾದ ಗುರುತನ್ನು ಜ್ಞಾಪಕದಲ್ಲಿಡುವುದು ಒಳ್ಳೆಯದು. ಆ ಗುರುತು ಏನೆಂದರೆ, ಒಂದು ಪರ್ವತವೇ ಆತನ ಮೇಲೆ ಬಿದ್ದು ಆತನು ನಜ್ಜುಗಜ್ಜಾದರೂ ಆತನ ಮನಸ್ಸು ಕದಲದು. ಆತನಿಗೆ ಪ್ರಿಯವು ಪ್ರಾಪ್ತವಾಗಲಿ, ಅಪ್ರಿಯವು ಪ್ರಾಪ್ತವಾಗಲಿ ಆತನು ಮಾತ್ರ ಒಂದೇ ಸಮನಾಗಿರುತ್ತಾನೆ, ಆತನು ಎಲ್ಲ ಸ್ಥಿತಿಗಳಲ್ಲಿಯೂ ಸಮನಾಗಿ ಅಚಲನಾಗಿ ಇರುತ್ತಾನೆ" (*ಕೃತಿಶ್ರೇಣಿ,* ೧.೯೪–೯೫).

ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಹೇಳುತ್ತಾರೆ. "ವಿಶ್ವದ ಗಾನಮಾಧುರ್ಯದಲ್ಲಿ ಮೂರು ಸ್ವರಗಳು ಮೇಲೆದ್ದು ನಿಲ್ಲುವುವು. ಅವೇ ಸ್ವಾತಂತ್ರ್ಯ, ಶಕ್ತಿ ಮತ್ತು ಸಮತ್ವ" (*ಕೃತಿಶ್ರೇಣಿ,* ೧.೨೬೮). ಸ್ವಾಮಿ ವಿವೇಕಾನಂದರ ಗಾನಸಂದೇಶದ ಸ್ವರಗಳೂ ಈ ಮೂರು ಎಂದು ಹೇಳಬಹುದಲ್ಲವೆ?

## ವಿಶಾಲ ಮನೋಭಾವ

ವಿಶಾಲ ಮನೋಭಾವವನ್ನು ಬೆಳೆಸಿಕೊಳ್ಳುವುದರ ಮೂಲಕ ನಮ್ಮ ದೌರ್ಬಲ್ಯ ಭಯ ಬಂಧನಗಳಿಂದ ಮುಕ್ತರಾಗಿ ಸ್ವಾತಂತ್ರ್ಯಾನಂದವನ್ನು ಅನುಭವಿಸಬಹುದು. ಮನೋವೈಶಾಲ್ಯತೆ ಹೇಗಿರಬೇಕೆಂಬುದನ್ನು ಸ್ವಾಮಿ ವಿವೇಕಾನಂದರು ಒಂದು ಉದಾಹರಣೆಯ ಮೂಲಕ ವಿವರಿಸುತ್ತಾರೆ. ಒಂದು ಶಕ್ತಿವಂತವಾದ ಎತ್ತು ಇತ್ತು. ಅದಕ್ಕೆ ಉದ್ದವಾದ ಕೋಡುಗಳಿದ್ದವು. ಒಂದು ನೊಣ ಆ ಕೋಡಿನ ಮೇಲೆ ಕುಳಿತುಕೊಂಡಿತ್ತು. ಬಹಳ ಹೊತ್ತಾದ ಮೇಲೆ ನೊಣಕ್ಕೆ ಎತ್ತಿನ ಕಡೆ ಗಮನ ಹರಿಯಿತು. ತುಂಬ ಸಹಾನುಭೂತಿಯಿಂದ ನೊಣವು ಎತ್ತನ್ನು ವಿಚಾರಿಸಿತು: "ಬಸವರಾಯ, ಬಹಳ ಹೊತ್ತಿನಿಂದ ನಾನಿಲ್ಲಿ ಕುಳಿತಿದ್ದೇನೆ. ನಿನಗೇನೂ ಬೇಸರವಿಲ್ಲ ತಾನೆ?" ಎತ್ತು ತುಂಬ ನಿರ್ವಿಕಾರ ಭಾವದಲ್ಲಿ ಉತ್ತರಿಸಿತು: "ನೊಣ ಮಹಾಶಯ, ಖಂಡಿತವಾಗಿಯೂ ಇಲ್ಲ. ನೀನು ಇಡೀ ಸಂಸಾರವನ್ನೇ ಕರೆದುಕೊಂಡುಬಂದು ಇಲ್ಲಿ ನೆಲೆಸಿದರೂ ನನಗ್ಯಾವ ತೊಂದರೆಯೂ ಇಲ್ಲ." ವಿಶಾಲ ಮನೋಭಾವವಿದ್ದರೆ ಜಗತ್ತಿನ ಸಾಮಾನ್ಯ ಘಟನೆಗಳಾವುವೂ ನಮ್ಮನ್ನು ವಿಚಲಿತಗೊಳಿಸುವುದಿಲ್ಲ ಎಂಬುದನ್ನು ಈ ಕಥೆಯು ಸೂಚಿಸುತ್ತದೆ. ನಮ್ಮಲ್ಲಿ ಎಷ್ಟೊಂದು ಮನೋವೈಶಾಲ್ಯತೆ ಇರಬೇಕೆಂಬುದಕ್ಕೆ ವಿವೇಕಾನಂದರು ನಡೆದ ಘಟನೆಯೊಂದನ್ನು ಉದಾಹರಿಸುತ್ತಾರೆ. ಪೆಸಿಫಿಕ್ ಸಾಗರದಲ್ಲಿ ಜನರಿಂದ ತುಂಬಿದ ಕೆಲವು ಹಡಗುಗಳು ಹೋಗುತ್ತಿದ್ದವು. ಇದ್ದಕ್ಕಿದ್ದಂತೆಯೇ ಮಹಾ ಬಿರುಗಾಳಿ ಪ್ರಾರಂಭವಾಯಿತು. ಬೃಹದಾಕಾರದ ಅಲೆಗಳೆದ್ದು ಹಡಗುಗಳೆಲ್ಲ ಮುಳುಗುವ ಸ್ಥಿತಿಯಲ್ಲಿದ್ದುವು. ಒಂದು ಹಡಗು ಮಾತ್ರ ಹೇಗೋ ಬಿರುಗಾಳಿಯಿಂದ ತಪ್ಪಿಸಿಕೊಂಡು ದಡದ ಕಡೆ ಹೋಗುತ್ತಿತ್ತು. ಮುಳುಗುತ್ತಿದ್ದ ಉಳಿದ ಹಡಗುಗಳ ಜನರು ಹಡಗಿನ ಮೇಲ್ತುದಿಗೆ ಬಂದು, ಪಾರಾಗುತ್ತಿದ್ದ ಹಡಗಿನ ಜನರನ್ನು ಸಂತೋಷದಿಂದ ಹುರಿದುಂಬಿಸತೊಡಗಿದರು. ಎಂಥ ಅಪೂರ್ವ ಘಟನೆ !"

ನಾವು ದೈಹಿಕ, ಜೈವಿಕ, ಅಹಂಕೇಂದ್ರಿತ ವ್ಯಕ್ತಿತ್ವಕ್ಕೆ ಬದ್ಧರಾಗಿರುವುದರಿಂದಲೇ ಎಲ್ಲ ಬಗೆಯ ಹೊಡೆತಕ್ಕೆ ಒಳಗಾಗುತ್ತೇವೆ. ಈ ವ್ಯಕ್ತಿತ್ವದ ಪರಿಧಿಯಿಂದ ನಾವು ಹೊರಬಂದು ವಿಶ್ವಭಾವವನ್ನು ಬೆಳೆಸಿಕೊಳ್ಳಬೇಕೆಂದು ಸ್ವಾಮೀಜಿಯವರ ಅಭಿಪ್ರಾಯ. ಅಹಂಕಾರವನ್ನು ಹೇಗೆ ತುಳಿಯಬೇಕೆಂಬುದಕ್ಕೆ ಸ್ವಾಮೀಜಿಯವರು ಒಂದು ಉದಾಹರಣೆಯನ್ನು ಕೊಡುತ್ತಾರೆ. ಮಂಗವೊಂದು ತನ್ನ ಮರಿಯನ್ನು ತಬ್ಬಿಕೊಂಡು ಕಬ್ಬಿಣದ ಹಲಗೆಯ ಮೇಲೆ ಕುಳಿತು ಕೊಂಡಿತ್ತು. ಹಲಗೆಯ ಶಾಖವನ್ನು ನಿಧಾನವಾಗಿ ಏರಿಸಲಾಯಿತು. ಮೊದಲು ತನ್ನ ಮರಿಯನ್ನು ರಕ್ಷಿಸಲು ಅದನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡಿತು. ತನಗೆ ಶಾಖವನ್ನು ಸಹಿಸಲಾದಾಗ ತನ್ನನ್ನು ರಕ್ಷಿಸಿಕೊಳ್ಳಲು ಮರಿಯನ್ನು ಕೆಳಗೆ ಹಾಕಿ ಅದರ ಮೇಲೆ ತಾನು ಕುಳಿತುಕೊಂಡಿತು. ಹೀಗೆಯೇ ನಮ್ಮನ್ನು ನಾವು ವಿಷಯತಾಪದಿಂದ ರಕ್ಷಿಸಿಕೊಳ್ಳಲು, ನಮ್ಮ ಅಹಂಕಾರವನ್ನು ಬಲಿ ಕೊಡಬೇಕಾಗುತ್ತದೆ.

## ದಿವ್ಯತೆಯ ದಿವ್ಯೌಷಧಿ

ಮೇಲಿನ ಎಲ್ಲ ಕಾಯಿಲೆಗಳಿಗೂ ಸ್ವಾಮಿ ವಿವೇಕಾನಂದರು ಸೂಚಿಸುವ ಒಂದೇ ಒಂದು ಔಷಧಿಯೆಂದರೆ 'ದಿವ್ಯತೆಯ ಅಭಿವ್ಯಕ್ತಿ.' "ದಿವ್ಯತೆಯನ್ನು ವ್ಯಕ್ತಪಡಿಸಿ, ಆಗ ಎಲ್ಲವೂ ಅದರ ಸುತ್ತ ಸಾಮರಸ್ಯದಿಂದ ಅಣಿಯಾಗುತ್ತವೆ" ಎಂದು ಅವರು ಘೋಷಿಸುತ್ತಾರೆ.

ಸ್ವಾಮೀಜಿಯವರು ಮುಂದುವರಿದು ಹೇಳುತ್ತಾರೆ: "ಈ ದೇಹವನ್ನು ಧಾರಣೆ ಮಾಡಿ ಎಷ್ಟು ಸುಖದುಃಖಗಳ, ಸಂಪತ್ತು ವಿಪತ್ತುಗಳ ತರಂಗಗಳಲ್ಲಿ ಸಿಕ್ಕಿಕೊಂಡಿರುವಿರಿ ! ಆದರೆ ತಿಳಿದುಕೊ. ಅವೆಲ್ಲ ಕ್ಷಣಮಾತ್ರ ಇರತಕ್ಕವು. ಇವುಗಳನ್ನೆಲ್ಲ ಗಮನಿಸತಕ್ಕ ಅಂಶಗಳೆಂದು ತಿಳಿಯಬೇಡ. 'ನಾನು ಅಜರಾಮರ ಚಿನ್ಮಯ ಆತ್ಮ' ಎಂಬೀ ಭಾವದಲ್ಲಿ ಪೂರ್ತಿಯಾಗಿ ತನ್ಮಯನಾಗಿಬಿಡು. ಪೂರ್ತಿ ತನ್ಮಯನಾಗಿ ಬಿಡಬಲ್ಲೆಯಾದರೆ, ದುಃಖಕಷ್ಟಗಳ ಕಾಲದಲ್ಲಿ ಈ ಭಾವ ತನ್ನಷ್ಟಕ್ಕೆ ತಾನೇ ಮನಸ್ಸಿನಲ್ಲಿ ಹುಟ್ಟುತ್ತದೆ – ಪ್ರಯತ್ನಪೂರ್ವಕವಾಗಿ ಈ ಭಾವವನ್ನು ಹುಟ್ಟಿಸಬೇಕಾಗುವುದಿಲ್ಲ. ಆ ದಿವಸ ವೈದ್ಯನಾಥ ಕ್ಷೇತ್ರದಲ್ಲಿ ಪ್ರಿಯನಾಥ ಮುಖ್ಯೆನ ಮನೆಗೆ ಹೋಗಿದ್ದೆ. ಅಲ್ಲಿ ಉಬ್ಬಸ ಬಂದು ಪ್ರಾಣ ಹೋಗಿಬಿಡುತ್ತದೆಯೋ ಎನ್ನುವ ಹಾಗಾಯಿತು. ಆದರೆ ಒಳಗಿನಿಂದ ಮಾತ್ರ ಪ್ರತಿ ಶ್ವಾಸದಲ್ಲಿಯೂ ಗಂಭೀರ ಧ್ವನಿ ಬರುವುದಕ್ಕೆ ಮೊದಲಾಯಿತು. 'ಸೋಽಹಂ' 'ಸೋಽಹಂ' ಎಂದು. ದಿಂಬಿಗೆ ಒರಗಿಕೊಂಡು ಪ್ರಾಣ ಹೋಗುವುದನ್ನೇ ನಿರೀಕ್ಷಿಸುತ್ತಿದ್ದೆ. ಆಗಲೂ ನೋಡಿದ್ದೇನೆಂದರೆ, ಒಳಗಿನಿಂದ ಕೇವಲ 'ಸೋಽಹಂ' 'ಸೋಽಹಂ' ಎಂಬ ಸದ್ದೇ ಬರುತ್ತಿತ್ತು" (*ಕೃತಿಶ್ರೇಣಿ,* ೮.೧೧೬).

**ಅನಂತ ಪರಿಪೂರ್ಣತೆಯ ಮೂಲವು ನಮ್ಮೆಲ್ಲರಲ್ಲೂ ಇದೆ. ಎಲ್ಲೆಲ್ಲಿಯೂ ಇರುವ ಒಳಿತನ್ನೇ ನೋಡುವ ಆಶಾದಾಯಕ ಮನಸ್ಥಿತಿಯನ್ನೂ, ಪ್ರಯತ್ನಶೀಲತೆಯನ್ನೂ, ನಾವು ಬೆಳೆಸಿಕೊಳ್ಳಬೇಕು. ಸುಮ್ಮನೆ ಕುಳಿತು, ನಮ್ಮ ದೇಹ ಮತ್ತು ಮನಸ್ಸುಗಳ ಅಪರಿಪೂರ್ಣತೆಯ ಬಗ್ಗೆ ಗೋಳಿಡುತ್ತಿದ್ದರೆ, ನಾವು ಏನನ್ನೂ ಗಳಿಸಿಕೊಳ್ಳಲಾಗುವುದಿಲ್ಲ. ಎಲ್ಲ ಕಷ್ಟನಷ್ಟಗಳ ಪರಿಸ್ಥಿತಿಯನ್ನೂ ಹಿಮ್ಮೆಟ್ಟಿ, ನಮ್ಮ ಚೇತನವನ್ನು ಉನ್ನತಮಟ್ಟಕ್ಕೆ ಒಯ್ಯುವುದು ವೀರಯೋಧನ ಪ್ರಯತ್ನಶೀಲತೆ ಮಾತ್ರವೇ.**

– ಸ್ವಾಮಿ ವಿವೇಕಾನಂದ

## ಭಾರತೀಯ ಸಮಾಜದ ಪುನರುತ್ಥಾನಕ್ಕಾಗಿ

# ಸ್ವಾಮಿ ವಿವೇಕಾನಂದರ ಯೋಜನೆಗಳು

ಸ್ವಾಮಿ ಕರುಣಾಕರಾನಂದ

ತಮ್ಮ ಪರ್ಯಟನದ ಸಮಯದಲ್ಲಿ ಭಾರತದ ನರನಾಡಿಯನ್ನು ಹಿಡಿದು ಪರೀಕ್ಷಿಸಿದ ಸ್ವಾಮಿ ವಿವೇಕಾನಂದರು ಈ ದೇಶದ ಪುನರುತ್ಥಾನಕ್ಕಾಗಿ ಅನುಷ್ಠಾನಯೋಗ್ಯ ಕಾರ್ಯಕ್ರಮಗಳನ್ನು ರೂಪಿಸಿದರು. ಅವುಗಳನ್ನು ತಮ್ಮದೇ ಆದ ವಿಧಾನದಲ್ಲಿ ಆಚರಣೆಗೆ ತಂದರು. ಈ ಅಂಶವನ್ನು ವಿವರವಾಗಿ ಬಿಂಬಿಸಿರುವ ಸ್ವಾಮೀಜಿಯವರು ಮೈಸೂರಿನ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



### ಪರ್ಯಟನೆಯ ಅಪೂರ್ವತೆ

ಸ್ವಾಮಿ ವಿವೇಕಾನಂದರು ಸಂನ್ಯಾಸ ಸ್ವೀಕರಿಸಿ ೧೮೯೦ರ ಜುಲೈನಲ್ಲಿ ಬಾರಾನಗರ ಮಠವನ್ನು ತೊರೆದು ಪರಿವ್ರಾಜಕರಾಗಿ ಭಾರತದುದ್ದಕ್ಕೂ ಸಂಚರಿಸಿದ್ದರ ಉದ್ದೇಶ ಅಪೂರ್ವವಾಗಿದ್ದಿತು. ಸಾಮಾನ್ಯವಾಗಿ ತೀರ್ಥದಿಂದ ತೀರ್ಥಕ್ಕೆ ಸಂಚರಿಸುವ ಸಂನ್ಯಾಸಿಗಳು ಆಧ್ಯಾತ್ಮಿಕ ಸಾಧನೆಗೆ ಅನುಕೂಲವಾದ ಸ್ಥಳವನ್ನು ಅರಸುತ್ತ ಹೋಗುವರು. ಅಲ್ಲಿ ಒಂದೆಡೆ ಕುಳಿತು ತಮ್ಮ ಹೃದಯದಾಳಕ್ಕೆ ಇಳಿಯುವರು. ಸ್ವಾಮೀಜಿಯವರ ಪರಿವ್ರಜನದ ಉದ್ದೇಶ ಕೇವಲ ಆಧ್ಯಾತ್ಮಿಕ ಸಾಧನೆಯಾಗಿರಲಿಲ್ಲ. ಅವರೇ ಹತ್ರಾಸಿನಲ್ಲಿ ಶರತ್ (ಮುಂದೆ ಸ್ವಾಮಿ ಸದಾನಂದ) ಎಂಬುವವರಿಗೆ ಹೀಗೆ ಹೇಳುತ್ತಾರೆ: “ಮಗು, ಒಂದು ದೊಡ್ಡ ಧ್ಯೇಯವನ್ನು ನಾನು ಕಾರ್ಯರೂಪಕ್ಕಿಳಿಸಬೇಕಾಗಿದೆ. ನನ್ನ ಅಲ್ಪ ಯೋಗ್ಯತೆಯನ್ನು ನೆನೆದು ನಾನು ಹತಾಶನಾಗಿದ್ದೇನೆ. ಈ ಧ್ಯೇಯವನ್ನು ನನ್ನ ಗುರುವೇ ನನ್ನ ಮುಂದಿಟ್ಟಿದ್ದಾರೆ. ಆ ಧ್ಯೇಯ ನನ್ನ ತಾಯ್ನಾಡಿನ ಪುನರುದ್ಧಾರ. ಆಧ್ಯಾತ್ಮಿಕತೆ ಎನ್ನುವುದು ಅತ್ಯಂತ ಕೆಳಸ್ತರದಲ್ಲಿ ಇದೆ. ಎಲ್ಲೆಡೆ ಹಸಿವು ತಾಂಡವವಾಡುತ್ತಿದೆ. ಭಾರತವು ಕಾರ್ಯಶೀಲಗೊಂಡು ಜಗತ್ತನ್ನು ತನ್ನ ಆಧ್ಯಾತ್ಮಿಕತೆಯಿಂದ ಗೆಲ್ಲಲೇಬೇಕು.”

ಸ್ವಾಮೀಜಿಯವರು ತಮ್ಮ ಪರಿವ್ರಜನದ ದಿನಗಳಲ್ಲಿ ಕಾಲ್ನಡಿಗೆಯಲ್ಲಿ ಊರಿಂದೂರಿಗೆ ಸಂಚರಿಸುತ್ತ ಭಾರತದ ನರ–ನಾಡಿಗಳ ಮಿಡಿತವನ್ನು ಅರಿತರು. ಜನಸಾಮಾನ್ಯರ, ಶ್ರೀಮಂತರ, ರಾಜವರ್ಗದವರ ಸಂಪರ್ಕವನ್ನು ಬೆಳೆಸಿದರು. ನೈಜಭಾರತವನ್ನು ಅತ್ಯಂತ ಸನಿಹದಿಂದ ಕಂಡರು. ಇಲ್ಲಿಯ ವರೆಗೂ ಅವರಿಗೆ ತಾವು ಓದಿದ ಪುಸ್ತಕಗಳಲ್ಲಿ ಇದ್ದ ಲೇಖಕರ ಅಭಿಪ್ರಾಯಗಳ ಮೂಲಕ ಮಾತ್ರವೇ ಭಾರತದ ಪರಿಚಯವಾಗಿದ್ದಿತು. ಈಗ ತಮ್ಮ ದೀರ್ಘಕಾಲೀನ ಪರ್ಯಟನೆಯಿಂದ ಅವರಿಗೆ ಭಾರತದ ಕುರಿತ ಪ್ರತ್ಯಕ್ಷಜ್ಞಾನವು ಲಭಿಸಿತು. ಭಾರತವು ತನ್ನ ಒಳಿತು–ಕೆಡುಕುಗಳೆರಡನ್ನೂ ಅವರ ಮುಂದೆ ಬಿಚ್ಚಿಟ್ಟಿತು. ಪ್ರಾಚೀನ ವೈಭವದ ಹೊದಿಕೆಯ ಕೆಳಗೆ ವರ್ತಮಾನ ಸಮಸ್ಯೆಗಳ ದೊಡ್ಡ ರಾಶಿಯೇ ಹುದುಗಿದ್ದಿತು. ಅದರ ಪರಿಹಾರವೂ ಅಷ್ಟು ಸುಲಭವಾಗಿರಲಿಲ್ಲ. ಏಕೆಂದರೆ, ಭಾರತಕ್ಕೆ ಬಹಳ ಹಿಂದಿನಿಂದ ತನ್ನದೇ ಆದ ವೈಶಿಷ್ಟ್ಯವಿದೆ. ಅದೆಂದರೆ, ವಿವಿಧತೆಯಲ್ಲಿ ಏಕತೆಯನ್ನು ತೋರಿಸುವ ಗುಣ ಮತ್ತು ಎಲ್ಲವನ್ನೂ ತನ್ನಲ್ಲಿ ಅರಗಿಸಿಕೊಂಡು ತನ್ನದೇ ಆದ ವಿಶಿಷ್ಟ ಛಾಪನ್ನು ಬೀರುವ ಗುಣ. ಭಾರತದ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಬೇಕಾದ ಒಬ್ಬ ವ್ಯಕ್ತಿ ಈ ಎರಡು ಅಂಶಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಅವುಗಳ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಬದಲಾವಣೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಅವುಗಳಲ್ಲಿ ಯಾವ ಅಂಶವು ಎಲ್ಲಕ್ಕಿಂತಲೂ ಹೆಚ್ಚಾಗಿ ಜನಸಾಮಾನ್ಯರ ದೈನಂದಿನ ಜೀವನದಲ್ಲಿ ಪ್ರಭಾವವನ್ನು ಬೀರುತ್ತದೆಯೆಂಬುದನ್ನು ತಿಳಿದಿರಬೇಕಾಗುತ್ತದೆ. ಪ್ರಸ್ತುತ ಕಾಲದ ಪ್ರಭಾವಶಾಲಿ ಶಕ್ತಿಗಳ ಹಿನ್ನೆಲೆಯಲ್ಲಿ ಭಾರತೀಯರು ತಮ್ಮ ಸಾಮಾಜಿಕ ವ್ಯವಸ್ಥೆಯ ಕೆಲವು ಆಚಾರಗಳನ್ನು ಬದಲಾಯಿಸಿಕೊಳ್ಳಲು ಯಾವ ರೀತಿ ಮನಸ್ಸನ್ನು ಹೊಂದಿರುತ್ತಾರೆ ಎಂಬ ಪರಿಕಲ್ಪನೆ ಆತನಿಗೆ ಚೆನ್ನಾಗಿಯೇ ಇರಬೇಕಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ವಿಶ್ವಕ್ಕೆ ಭಾರತದ ಕೊಡುಗೆ ಏನು ಎಂಬುದರ ಪರಿಜ್ಞಾನ ಆತನಿಗೆ ಇರಬೇಕು. ಹಾಗೆಯೇ ಅದನ್ನು ಮುಂದೆಯೂ ಕೂಡ ವಿಶ್ವಕ್ಕೆ ನೀಡಲು ಭಾರತ ತನ್ನ 'ಬಂಡವಾಳ'ವನ್ನು ಬೆಳಸಿಕೊಳ್ಳುವುದಿರಲಿ, ಕನಿಷ್ಠ ಉಳಿಸಿಕೊಳ್ಳುವ ಬಗೆ ಹೇಗೆ ಎಂಬುದರ ತಿಳಿವಳಿಕೆ ಕೂಡ ಅವನಿಗಿರಬೇಕು. ಇಷ್ಟೆಲ್ಲವನ್ನೂ ಆಳವಾಗಿ ಅರಿಯುವ, ಅದನ್ನು ಕುರಿತು ಚಿಂತಿಸುವ ಸುಯೋಗ ಸ್ವಾಮೀಜಿಯವರಿಗೆ ತಮ್ಮ ಅಪೂರ್ವವಾದ ಪರಿವ್ರಜನದ ದಿನಗಳಲ್ಲಿ ಲಭಿಸಿದವು ಎಂದೇ ಹೇಳಬೇಕು.

## ವಿಶಿಷ್ಟ ಆಯಾಮದ ಚಿಂತನೆ

ಸಮಾಜ ಸುಧಾರಣೆ ಮಾಡುವ ಹುಮ್ಮಸ್ಸಿನಲ್ಲಿ ಇಲ್ಲಿಯ ವರೆಗೂ ಇದ್ದ ಹಳೆಯವುಗಳನ್ನು ನಿರ್ದಾಕ್ಷಿಣ್ಯವಾಗಿ ಕೆಡವಿ ಹಾಕುವ ಧೋರಣೆ ಅನೇಕರಲ್ಲಿ ಕಂಡುಬರುತ್ತದೆ. ಆದರೆ, ಅಂತಹ ಪ್ರಯತ್ನ ಸಮಾಜದಲ್ಲಿ ಬೇರೂರಿರುವ, ಅನೇಕರಿಗೆ ಆಸರೆಯಾಗಿರುವ ನಂಬಿಕೆಗಳ ಬೇರನ್ನು ಕತ್ತರಿಸಿ ಅವರನ್ನು 'ಇತೋ ಭ್ರಷ್ಟಃ ತತೋ ಭ್ರಷ್ಟಃ' ಮಾಡುವುದು ಖಂಡಿತ. ಅದರಿಂದ ಅನೇಕ ಕಡೆಗಳಲ್ಲಿ ಸಾಮಾಜಿಕ ಘರ್ಷಣೆ, ವಿರೋಧ, ಮನಸ್ತಾಪಗಳೆದ್ದು ಅವು ಸುಧಾರಣೆಯ ಉದ್ದೇಶವನ್ನು ಮಣ್ಣುಗೂಡಿಸುತ್ತವೆ. ಭಾರತದ ಸಂತರು, ಅವತಾರಪುರುಷರು ಇಂತಹ ಸುಧಾರಣೆಗಳನ್ನು ಕೈಗೊಳ್ಳುವಾಗ 'ಅತ್ಯಂತ ಕಡಮೆ ಪ್ರತಿರೋಧ'ದ (least resistance) ಮಾರ್ಗವನ್ನು ಅನುಸರಿಸಿರುವುದು ಇತಿಹಾಸದಲ್ಲಿ ಕಂಡುಬರುತ್ತದೆ. ಸ್ವಾಮೀಜಿ ಇದರ ಆಳವಾದ ಅಧ್ಯಯನ ನಡೆಸಿ ಅರಿತುಕೊಂಡಿದ್ದರು. ಈ ಪ್ರಮುಖ ಅಂಶಕ್ಕೆ ಅವರು ತಮ್ಮ ಪ್ರತಿಯೊಂದು ಉಪನ್ಯಾಸದಲ್ಲಿಯೂ, ಸಮಾಜಸುಧಾರಕರಿಗೆ ಬರೆದ ಪತ್ರಗಳಲ್ಲಿಯೂ ಮಹತ್ವ ನೀಡುವುದನ್ನು ನಾವು ಕಾಣಬಹುದು. ಹಾಗೆಂದು ಸ್ವಾಮೀಜಿ ತಳೆದ ಮಾರ್ಗವು ಯಾವ ಸುಧಾರಣೆಯನ್ನೂ ಕೈಗೊಳ್ಳದ 'ದಾಕ್ಷಿಣ್ಯದಿಂದ ಕೂಡಿರುವ ಯೋಜನೆ'ಗಳಾಗಿರಲಿಲ್ಲ. ಸ್ವಾಮೀಜಿ ಬಯಸುತ್ತಿದ್ದುದು, 'ಆಮೂಲಾಗ್ರ'ವಾದ (root and branch reformation) ಸುಧಾರಣೆಗಳೇ ಹೊರತು, ಮೇಲ್ಮೈ (superficial) ಸುಧಾರಣೆಗಳಲ್ಲ. ಹೀಗಾಗಿ ಅಂಥ ಮೂಲಭೂತ ಮತ್ತು ವಿಶ್ವವ್ಯಾಪಿ ಸುಧಾರಣೆಗಳನ್ನೇ ಅವರು ಪ್ರತಿಪಾದಿಸಿದರು. ಅವರೇ ಒಂದು ಕಡೆಯಲ್ಲಿ ಹೇಳುವಂತೆ, ಸ್ವಾಮೀಜಿಯವರಿಗೆ ಮೇಲುನೋಟದ ಸುಧಾರಣೆಗಳಲ್ಲಿ ನಂಬಿಕೆಯಿರಲಿಲ್ಲ; ಅದಕ್ಕೆ ಬದಲಾಗಿ ಬೆಳವಣಿಗೆಯಲ್ಲಿ ವಿಶ್ವಾಸವಿತ್ತು. ಸಮಾಜ ಸುಧಾರಕರಿಗೆ ಅಗತ್ಯವಾಗಿರುವ ಅತಿ ಮುಖ್ಯವಾದ ಇನ್ನೊಂದು ಮನೋಭಾವವೆಂದರೆ ವಸ್ತುಸ್ಥಿತಿಯನ್ನು ಉದಾರ ದೃಷ್ಟಿಯಿಂದ, ಅನುಕಂಪೆಯ ಆಯಾಮದಿಂದ ನೋಡುವುದು. ಸ್ವಾಮೀಜಿಯವರ ದೇಶಪ್ರೇಮ, ದೇಶದ ಜನರ ಸರ್ವೋನ್ನತಿಯ ಕಾಳಜಿ ಅವರಿಗೆ ಆ ಒಂದು ವಿಶಿಷ್ಟದೃಷ್ಟಿಯನ್ನು ನೀಡಿದ್ದವು. ಅದನ್ನೇ 'ಅವತಾರ ಪುರುಷರ ಆಯಾಮ' ಎನ್ನುವುದು.

## ಸಾಮಾನ್ಯರ ತಿರಸ್ಕಾರವಲ್ಲ, ಪುರಸ್ಕಾರ!

"ನಮ್ಮ ಜನಾಂಗದ ಮಹಾಪಾತಕವೇ ಜನಸಾಮಾನ್ಯರನ್ನು ನಿರ್ಲಕ್ಷಿಸಿದ್ದು. ಇದೇ ನಮ್ಮ ಅವನತಿಗೆ ಕಾರಣ" ಎನ್ನುತ್ತಾರೆ ಸ್ವಾಮೀಜಿ. "ನಮ್ಮ ದೇಶದ ಸಾಮಾನ್ಯ ಜನರತ್ತ ನೋಡು! ಅವರ ಮುಖದಲ್ಲಿ ಅದೆಂತಹ ದುಃಖ ಕಾಣಿಸುತ್ತಿದೆ. ಅವರ ಹೃದಯದಲ್ಲಿ ಧೈರ್ಯದ ಮತ್ತು ಉತ್ಸಾಹದ ಕೊರತೆ ಎದ್ದು ಕಾಣುತ್ತಿದೆ. ದೊಡ್ಡ ಹೊಟ್ಟೆಗಳೊಂದಿಗೆ, ಕೈ–ಕಾಲುಗಳಲ್ಲಿ ಬಲವಿಲ್ಲದೆ– ಕ್ಷುಲ್ಲಕ ಕಾರಣಗಳಿಗೂ ಹೆದರುವ ಹೇಡಿಗಳ ಸಮೂಹ! ಗುಡಿಸಲಿನಲ್ಲಿ ವಾಸಿಸುವ ನಿಜವಾದ ರಾಷ್ಟ್ರ ತನ್ನ ಮನುಷ್ಯತ್ವವನ್ನು, ವೈಯಕ್ತಿಕತೆಯನ್ನು ಮರೆತಿದೆ. ಭಾರತದ ಸಾಮಾನ್ಯ ಜನತೆಯು ತನ್ನಲ್ಲಿರುವ, ತನಗೆ ಸೇರಿರುವ ಒಳಬೆಳಕನ್ನು ಅಭಿವ್ಯಕ್ತಗೊಳಿಸಲು ಅವಕಾಶವನ್ನೇ ಪಡೆದಿಲ್ಲ. ಹಿಂದೂ, ಮುಸಲ್ಮಾನ, ಕ್ರೈಸ್ತರ ಕಾಲಿನ ಕೆಳಗೆ ತುಳಿಯಲ್ಪಡುತ್ತ, ಧನವಂತರೆಲ್ಲರ ತುಳಿತಗಳಿಗೆ ಗುರಿಯಾಗುವುದೇ ತಮ್ಮ ಜೀವಿತದ ಉದ್ದೇಶವೆಂಬುದಾಗಿ ಅವರು ಭಾವಿಸಿದ್ದಾರೆ"

ಎಂದು ತಮ್ಮ ಪತ್ರವೊಂದರಲ್ಲಿ ಸ್ವಾಮೀಜಿ ಸಾಮಾನ್ಯಜನರ ಸ್ಥಿತಿಗೆ ಮಮ್ಮಲಮರುಗಿದ್ದಾರೆ. ಹಾಗೆಯೇ ಸಾಮಾನ್ಯ ಜನರ ಸಾಮರ್ಥ್ಯವನ್ನು ಎತ್ತಿ ತೋರಿಸುತ್ತ, "ನಮ್ಮ ದೇಶದ ಜನಸಾಮಾನ್ಯರು ಮಲಗಿರುವ ದೈತ್ಯರಂತೆ" (ಕೃ.ಶ್ರೇ. ೮.೧೪೪) ಎಂದು ಇನ್ನೊಂದು ಕಡೆಯಲ್ಲಿ ಹೇಳುತ್ತಾರೆ. "ಭಾರತದ ರೈತ ಚಮ್ಮಾರ ಜಾಡಮಾಲಿ ಮೊದಲಾದ ಕೆಳಗಿನ ಸ್ಥಿತಿಯಲ್ಲಿರುವ ಜನರಿಗೆ ಕೆಲಸ ಮಾಡುವ ಸಾಮರ್ಥ್ಯ ಮತ್ತು ಸ್ವಾವಲಂಬನೆ ನಿಮಗಿಂತ ಹೆಚ್ಚಾಗಿದೆ. ಅವರೆಲ್ಲರೂ ದೇಶದ ಸಮಸ್ತ ಸಂಪತ್ತನ್ನು ಉಂಟುಮಾಡಲು ಗೊಣಗುಟ್ಟದೇ, ದೂರು ಹೇಳದೇ ಮೌನ ವಾಗಿ ದೀರ್ಘಕಾಲದಿಂದ ದುಡಿಯುತ್ತ ಬಂದಿದ್ದಾರೆ.... ಹಾಗೆ ನೋಡಿದರೆ, ಎಲ್ಲ ದೇಶಗಳ ಬೆನ್ನೆಲುಬು ಅವರೇ." "....ಯಾರು ಅತಿ ಸಣ್ಣ ಕೆಲಸ ಮಾಡುವಾಗಲೂ, ಅದನ್ನು ಗುರುತಿಸಿ ಗೌರವಿಸುವವರು ಇರದಿದ್ದರೂ, ನಿಸ್ವಾರ್ಥತೆ ಮತ್ತು ಕರ್ತವ್ಯನಿಷ್ಠೆಯಿಂದ ಮಾಡಬಲ್ಲನೋ ಅವನೇ ನಿಜ ವಾಗಿ ಧನ್ಯನು. ನಿರಂತರ ತುಳಿತಕ್ಕೊಳಗಾದ ಭಾರತೀಯ ಕಾರ್ಮಿಕರೇ! ನಿಜವಾಗಿಯೂ ಇದನ್ನು ಮಾಡುತ್ತಿರುವವರು ನೀವು. ನಿಮಗೆ ತಲೆಬಾಗುತ್ತೇನೆ" ಎಂದು ಕಾರ್ಮಿಕ ವರ್ಗದವರ ಬಗ್ಗೆ ಹೆಮ್ಮೆಪಟ್ಟಿದ್ದಾರೆ, ಸ್ವಾಮೀಜಿ. ಸಮಾಜದ ಅರ್ಥವ್ಯವಸ್ಥೆ ಉಚ್ಛ್ರಾಯ ಸ್ಥಿತಿಗೆ ಏರಬೇಕಾದರೆ ಮೂಲಸೌಕರ್ಯಗಳು (infrastructure) ಅತ್ಯುತ್ತಮ ಮಟ್ಟದ್ದಾಗಿರಬೇಕೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಅವುಗಳಲ್ಲಿ ಅತಿಮುಖ್ಯವಾದ ಮಾನವ ಸಂಪನ್ಮೂಲವನ್ನು, ಅದರಲ್ಲೂ ಸಮಾಜದ ಅಡಿಪಾಯವೆನಿಸಿರುವ ಅಂತಹ ಸಾಮಾನ್ಯರ ಜೀವನದ ಗುಣಮಟ್ಟವನ್ನು ನಾವು ಕಡೆಗಣಿಸಿಬಿಟ್ಟಿದ್ದೇವೆ. ಈ ದೊಡ್ಡ ಕೊರತೆಯ ಬಗ್ಗೆ ಸ್ವಾಮೀಜಿ ನಮ್ಮ ಗಮನವನ್ನು ಸೆಳೆಯುತ್ತಾರೆ.

## ವಿದ್ಯಾಭ್ಯಾಸದಿಂದ ಉನ್ನತಿ

ಎಲ್ಲ ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೆ ಅವಶ್ಯವಾಗಿ ಬೇಕಾಗಿರುವುದು ವಿದ್ಯಾಭ್ಯಾಸ. ಜನರು ತಮ್ಮನ್ನು ತಾವೇ ಮೇಲಕ್ಕೆತ್ತಿಕೊಳ್ಳಬೇಕು – **'ಉದ್ಧರೇದಾತ್ಮನಾತ್ಮಾನಂ'**. ಅವರಿಗೆ ಈ ನಿಟ್ಟಿನಲ್ಲಿ ವಿದ್ಯಾಭ್ಯಾಸ ನೀಡಿದರೆ ತಮ್ಮ ಅಭ್ಯುದಯ ವನ್ನು ಅವರೇ ಕಂಡುಕೊಳ್ಳುತ್ತಾರೆ ಎಂಬುದನ್ನು ಸ್ವಾಮೀಜಿ ಮನಗಂಡಿದ್ದರು. ಯಾವ ಸಾಮಾನ್ಯರ ಪರಿಶ್ರಮದ ಫಲ ದಿಂದ ತಮ್ಮ ವಿದ್ಯಾಭ್ಯಾಸ ಮಾಡಿದರೋ ಅಂತಹ ಮೇಲ್ವರ್ಗದ ಜನತೆಗೆ, ಜನಸಾಮಾನ್ಯರ ವಿದ್ಯಾಭ್ಯಾಸದತ್ತ ಗಮನ ಹರಿಸಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತಾರೆ. ಅಲ್ಲದೆ, ಇತರ ರಾಷ್ಟ್ರಗಳ ಉದಾಹರಣೆಯನ್ನು ನೀಡುತ್ತ ಹೀಗೆ ಹೇಳುತ್ತಾರೆ: "ಜನಸಾಧಾರಣರಿಗೆ ವಿದ್ಯೆ ಕಲಿಸಿದರೆ ಪ್ರಪಂಚ ಹಾಳಾಗುವುದೆಂದು ಹೇಳುತ್ತಿದ್ದರು. ಆದರೆ ಇದರಿಂದ ಪ್ರಪಂಚದ ಏಳ್ಗೆಯೇ ಆಯಿತು. ಕೆಲವು ವರ್ಷಗಳ ಹಿಂದೆ ಇಂಗ್ಲೆಂಡಿಗೆ ಒದಗಬಹುದಾದ ದುಃಸ್ಥಿತಿಯನ್ನು ವಿವರಿಸುವ ಒಂದು ಗ್ರಂಥ ಬಂತು. ಕೂಲಿಕಾರರ ವೇತನ ಹೆಚ್ಚಿದಂತೆ ಇಂಗ್ಲೆಂಡಿನ ವ್ಯಾಪಾರ ಇಳಿಯುತ್ತಿದೆ ಎಂದು ಲೇಖಕರು ಬರೆದಿದ್ದರು. ಇಂಗ್ಲೆಂಡಿನ ಕೂಲಿಯವರು ಹೆಚ್ಚು ಸಂಬಳಕ್ಕಾಗಿ ಕಾದಾಡುತ್ತಿರುವವರೆಂದೂ, ಜರ್ಮನ್ನರು ಕಡಮೆ ಸಂಬಳಕ್ಕೆ ಮಾಡುತ್ತಿರುವವರೆಂದೂ ಅದರಲ್ಲಿ ಹೇಳಿದ್ದರು. ಇದನ್ನು ತಿಳಿಯುವುದಕ್ಕೆ ಜರ್ಮನಿಗೆ ಒಂದು ಸಮಿತಿಯನ್ನು ಕಳಿಸಿದರು. ಅವರು ವರದಿಯಲ್ಲಿ ಜರ್ಮನಿಯ ಕೂಲಿಗಾರರಿಗೆ ಹೆಚ್ಚು ಕೂಲಿ ಬರುತ್ತಿದೆ ಎಂದು ನಮೂದಿಸಿದರು. ಇದು ಸಾಧ್ಯವಾದದ್ದು ಹೇಗೆ? **ಸಾಮಾನ್ಯ ಜನರು ಹೆಚ್ಚು ವಿದ್ಯೆ ಪಡೆದದ್ದರಿಂದ**. ಜನಸಾಧಾರಣರು ವಿದ್ಯಾವಂತರಾದರೆ ಪ್ರಪಂಚವೇ ಸರ್ವನಾಶವಾಗುವುದು ಎಂಬುದೇನಾಯಿತು?" (ಕೃ.ಶ್ರೇ. ೬ : ೧೭೪). ವಿದ್ಯಾಭ್ಯಾಸದಿಂದ ಸಾಮಾನ್ಯ ಜನ ತಮಗೆ ಒಳಿತು ಯಾವುದು ಎಂಬುದನ್ನು ಅರಿಯುವರು. ಸ್ವಾಮಿ ಅಖಂಡಾನಂದರಿಗೆ ಬರೆದ ಒಂದು ಪತ್ರದಲ್ಲಿ (ಕೃ.ಶ್ರೇ. ೫. ೧೮೨) ಸ್ವಾಮೀಜಿ ಈ ಬಗೆಯ ಕಾರ್ಯದಲ್ಲಿ ನಿರತ ರಾಗುವುದಕ್ಕೆ ಬೇಕಾದ ಮಾರ್ಗದರ್ಶನ ಹಾಗೂ ಪ್ರೋತ್ಸಾಹ ಕೊಡುವುದನ್ನು ಕಾಣಬಹುದು. ಜನಕ್ಕೆ ಲೌಕಿಕ, ನೈತಿಕ, ಆಧ್ಯಾತ್ಮಿಕ ಶಿಕ್ಷಣವನ್ನು ಜೊತೆಜೊತೆಯಾಗಿಯೇ ಕೊಡ ಬೇಕು. ಆ ವಿದ್ಯಾಭ್ಯಾಸ ಮಾನವ ನಿರ್ಮಾಣಕಾರಿ, ಚಾರಿತ್ರ್ಯ ನಿರ್ಮಾಣಕಾರಿ, ರಾಷ್ಟ್ರನಿರ್ಮಾಣಕಾರಿಯಾಗಬೇಕೆಂಬುದು ಸ್ವಾಮೀಜಿಯವರ ಆಶಯವಾಗಿತ್ತು. ಅಂಥ ವಿದ್ಯಾಭ್ಯಾಸವು ಜನರಲ್ಲಿ ಶ್ರದ್ಧೆಯನ್ನುಂಟುಮಾಡಬೇಕು, ಏಕಾಗ್ರತೆಯನ್ನು ಹೆಚ್ಚಿಸ ಬೇಕು, ನಮ್ಮೊಳಗಿನ ಪರಿಪೂರ್ಣ ಶಕ್ತಿಯನ್ನು ದೈನಂದಿನ ಜೀವನದಲ್ಲಿ ವ್ಯಕ್ತಗೊಳಿಸಬೇಕು.

## ಆದಾನ–ಪ್ರದಾನ

ನಮ್ಮ ದೇಶದ ಜನತೆಗೆ ಪಾಶ್ಚಾತ್ಯ ವಿಜ್ಞಾನವನ್ನು ಬೋಧಿಸ ಬೇಕು. ಭಾರತವು ತನ್ನ ಆಧ್ಯಾತ್ಮಿಕತೆಯನ್ನು ಪಾಶ್ಚಾತ್ಯರಿಗೆ ಕೊಟ್ಟು, ಅದಕ್ಕೆ ಬದಲಾಗಿ ಅವರಿಂದ ಆಧುನಿಕ ತಂತ್ರಜ್ಞಾನವನ್ನು ಪಡೆದು, ಕಾರ್ಖಾನೆಗಳನ್ನು ಸ್ಥಾಪಿಸಿ ಉತ್ತಮ ಮಟ್ಟದ ಆರ್ಥಿಕ ಜೀವನವನ್ನು ತನ್ನ ಜನತೆಗೆ ನೀಡಬೇಕು. ಯಾವ ರೀತಿಯಲ್ಲಿ ಭಾರತಕ್ಕೆ ಆರ್ಥಿಕ ಪ್ರಗತಿಯ ಅಗತ್ಯವಿದೆಯೊ, ಅದೇ ರೀತಿ ಪಾಶ್ಚಾತ್ಯ ರಾಷ್ಟ್ರಗಳಿಗೂ ಅಧ್ಯಾತ್ಮದ ಆವಶ್ಯಕತೆಯಿದೆ. ಹೀಗಿರುವಾಗ ಭಾರತವು ತಂತ್ರಜ್ಞಾನದ ಭಿಕ್ಷೆ ಬೇಡುವುದನ್ನು ಬಿಟ್ಟು ಅವರಿಂದ ಕೊಡಕೊಳ್ಳುವಿಕೆಯ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು. ಇವು ಸ್ವಾಮಿ ವಿವೇಕಾನಂದರ ಕೆಲವು ಕ್ರಾಂತಿಕಾರಿ ವಿಚಾರಗಳು. ಪಾಶ್ಚಾತ್ಯ ರಾಷ್ಟ್ರಗಳಿಗೆ ಅಧ್ಯಾತ್ಮ ವಿತರಣೆಯನ್ನು ಮಾಡುವ ಸಲುವಾಗಿ ತ್ಯಾಗಿಗಳ ಪಡೆಯನ್ನೇ ನಿರ್ಮಿಸಲು ಅವರು ಯೋಜನೆ ಮಾಡಿದರು. ರಾಮಕೃಷ್ಣ ಮಹಾಸಂಘದ ಮೂಲೋದ್ದೇಶಗಳಲ್ಲಿ ಇದೂ ಒಂದಾಗಿತ್ತು. ಇದನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಮಾಡಬೇಕಾದರೆ ಸಂಘಟನೆಯ ಆವಶ್ಯಕತೆಯಿರುವುದನ್ನು ಸ್ವಾಮೀಜಿ ಅರಿತಿದ್ದರು. 'ಸಂಘಟನೆಯ ಚಮತ್ಕಾರ'ವನ್ನು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಣ್ಣಾರೆ ಕಂಡಮೇಲೆ ಭಾರತದ ಅಭ್ಯುದಯಕ್ಕೆ ಈ ಉಪಕರಣದ ಮಹತ್ವ ವನ್ನು ಮನಗಂಡರು. ಈ ಹಿನ್ನೆಲೆಯಲ್ಲಿಯೇ ಸಂನ್ಯಾಸಿಗಳನ್ನು

ಒಂದುಗೂಡಿಸಲು, ಅದರ ಮೂಲಕ ಸಮಾಜದ ಉನ್ನತಿಗೆ ಕೊಡುಗೆ ನೀಡಲು, ಶ್ರೀರಾಮಕೃಷ್ಣರ ಹೆಸರಿನಲ್ಲಿ ಒಂದು ಸಂಘ ವನ್ನು ಸ್ಥಾಪಿಸಿದರು.

## ಸ್ತ್ರೀಸಮಾಜದ ಉದ್ಧಾರ

ಪ್ರಾಚೀನ ಭಾರತದಲ್ಲಿ, ಅಂದರೆ ವೈದಿಕ ಯುಗದಲ್ಲಿ ಸ್ತ್ರೀಯರಿಗೆ ವಿದ್ಯಾಭ್ಯಾಸ ನೀಡುವ ಪದ್ಧತಿ ಇತ್ತು. ಅನೇಕ ಸ್ತ್ರೀಋಷಿಗಳ, ಬ್ರಹ್ಮವಾದಿನಿಯರ ಉಲ್ಲೇಖ ವೇದ–ಪುರಾಣ ಗಳಲ್ಲಿ ಕಾಣಸಿಗುತ್ತವೆ. ನಂತರದ ಸಮಾಜದಲ್ಲಿ ಯಾವುದೋ ನಿಮಿತ್ತದಿಂದ ಅವರಿಗೆ ನೀಡುತ್ತಿದ್ದ ಶಿಕ್ಷಣವನ್ನು ನಿಲ್ಲಿಸಲಾಯಿತು. ಸಮಾಜದಲ್ಲಿ ಅವರ ಸ್ಥಾನವನ್ನು ಅಡುಗೆಮನೆಗೆ ಇಳಿಸಲಾಯಿತು. ಇದನ್ನು ಅರಿತಿದ್ದ ಸ್ವಾಮೀಜಿ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮಹಿಳೆಯರ ಉನ್ನತ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಕಂಡು ಆ ವ್ಯತ್ಯಾಸಕ್ಕೆ ಕಾರಣವನ್ನು ಕಂಡುಹುಡುಕಿದರು. ತಮ್ಮ ಒಬ್ಬ ಶಿಷ್ಯನೊಂದಿಗೆ ಮಾತನಾಡುತ್ತ, "ಯಾವ ದೇಶ ಅಥವಾ ಜನಾಂಗ ಸ್ತ್ರೀಯರಿಗೆ ಗೌರವ ಕೊಟ್ಟಿಲ್ಲವೋ ಅದು ಖಂಡಿತವಾಗಿಯೂ ಕೀರ್ತಿ ಪಡೆದಿಲ್ಲ; ಮುಂದೆ ಪಡೆಯುವುದೂ ಇಲ್ಲ. ಜೀವಂತ ದೇವಿ ಸ್ವರೂಪಿಣಿಯರಾದ ಸ್ತ್ರೀಯರಿಗೆ ಗೌರವ ಕೊಡದಿರುವುದೇ ನಮ್ಮ ಜನಾಂಗ ಇಷ್ಟೊಂದು ಅಧೋಗತಿಗಿಳಿದಿರುವುದಕ್ಕೆ ಕಾರಣ..." ಎಂದು (ಕೃ.ಶ್ರೇ. ೮.೨೧೩) ಹೇಳುತ್ತಾರೆ. ಸ್ತ್ರೀಯರ ತರಬೇತಿಗಾಗಿ ಒಂದು ಸ್ತ್ರೀಮಠವನ್ನು ಸ್ಥಾಪಿಸಿ ಅಲ್ಲಿ ಸಂನ್ಯಾಸಿನಿ, ಬ್ರಹ್ಮಚಾರಿಣಿಯರು ವಸತಿಶಾಲೆಯೊಂದನ್ನು ನಡೆಸಬೇಕು. ಅದರಲ್ಲಿ ಮಹಿಳೆಯರಿಗೆ ಧಾರ್ಮಿಕ ಗ್ರಂಥಗಳು, ಸಾಹಿತ್ಯ, ಸಂಸ್ಕೃತ, ವ್ಯಾಕರಣ, ಇಂಗ್ಲಿಷ್ ಭಾಷೆಗಳನ್ನು ಕಲಿಸಲಾಗುವುದು. ಅಲ್ಲಿ ಸ್ತ್ರೀಯರು ಹೊಲಿಗೆ, ಪಾಕಶಾಸ್ತ್ರ, ಗೃಹಕೆಲಸಗಳ ನಿಯಮ, ಮಕ್ಕಳ ಶಿಕ್ಷಣ ಮೊದಲಾದ ವಿಷಯಗಳನ್ನು ಕಲಿಯುವರು. ಜಪ, ಧ್ಯಾನ, ಪೂಜೆ ಮುಂತಾದುವೂ ಬೋಧನೆಯ ಅವಶ್ಯಕ ಅಂಗವಾಗಬೇಕು. ಸ್ತ್ರೀಸಮಾಜದ ಏಳ್ಗೆಯನ್ನು ಮಾಡಿ ಕೊಳ್ಳಬೇಕಾದವರು ಸ್ತ್ರೀಯರೇ. ಪುರುಷರು ಅದರಲ್ಲಿ ಹಸ್ತಕ್ಷೇಪ ಮಾಡುವ ಹಾಗಿಲ್ಲ. ಶಿಕ್ಷಣದಲ್ಲಿ ಚಾರಿತ್ರ್ಯ ಮತ್ತು ಪಾವಿತ್ರ್ಯಕ್ಕೆ ಹೆಚ್ಚು ಒತ್ತು ನೀಡಲಾಗುತ್ತದೆ. ಈ ಯೋಜನೆ ಸ್ವಾಮೀಜಿಯ ಮನಸ್ಸಿನಲ್ಲಿ ಇತ್ತು.

ಸ್ವಾತಂತ್ರ್ಯವೆನ್ನುವುದು ಬೆಳವಣಿಗೆಗೆ ಬೇಕಾದ ಮೊದಲ ಅಂಶವೆಂದು ಸ್ವಾಮೀಜಿ ಹೇಳುತ್ತಿದ್ದರು. ಬೆಳವಣಿಗೆಗೆ ಅಗತ್ಯ ವಾದ ಶಿಕ್ಷಣವನ್ನು ಅವರಿಗೆ ನೀಡಿದರೆ ಅವರೇ ತಮ್ಮ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವರು. ಸೀತೆ, ಸಾವಿತ್ರಿ, ಗಾರ್ಗಿಯೇ ಮೊದಲಾದವರ ಅಚ್ಚಿನಲ್ಲಿ ಸ್ತ್ರೀಯರನ್ನು ಆದರ್ಶ ಮಾತೃರೂಪಿಣಿಯರಾಗಿ ತರಬೇತು ಮಾಡಬೇಕೆಂದು ಸ್ವಾಮೀಜಿಯವರ ಆಶಯವಾಗಿತ್ತು. ಏಕೆಂದರೆ, "ಪಾಶ್ಚಾತ್ಯರು ಸ್ತ್ರೀಯರನ್ನು ಭೋಗದ ದೃಷ್ಟಿಯಿಂದ ನೋಡಿ ಅವರನ್ನು ಗೌರವಿಸುತ್ತ ಇಷ್ಟು ಮುಂದುವರೆದಿರಬೇಕಾದರೆ, ಇನ್ನು ಮಾತೃಸ್ಥಾನದಲ್ಲಿಟ್ಟು ಗೌರವಿಸುವ ಭಾರತೀಯರಿಗೆ ಇನ್ನೆಷ್ಟು ಪ್ರಗತಿಯಾಗಲಿಕ್ಕಿಲ್ಲ?" ಎಂದು ಸ್ವಾಮೀಜಿ ಪ್ರಶ್ನಿಸುತ್ತಾರೆ.

## ಯುವಕರಿಗೆ ಕರೆ

ತನ್ನ ತಾಯ್ನಾಡಿನ ಪುನರುತ್ಥಾನಕ್ಕಾಗಿ ಎಲ್ಲವನ್ನೂ ತ್ಯಾಗಮಾಡಲು ಸಿದ್ಧರಿರುವ ಯುವಕ–ಯುವತಿಯರಿಗೆ ಸ್ವಾಮೀಜಿ ಹೀಗೆ ಕರೆ ನೀಡುತ್ತಾರೆ: "ತ್ಯಾಗ ಮತ್ತು ಸೇವೆ– ಇವು ಭರತಖಂಡದ ಆದರ್ಶಗಳು. ಇವನ್ನು ಅನುಷ್ಠಾನಕ್ಕೆ ತರಲು ತೀವ್ರವಾಗಿ ಯತ್ನಿಸಿ; ಉಳಿದುವೆಲ್ಲ ತನ್ನಿಂದ ತಾನೇ ಸರಿಯಾಗುತ್ತದೆ." ಈ ಮೂಲಕ ಸ್ವಾಮೀಜಿ ಅವಳಿ ರಾಷ್ಟ್ರಾದರ್ಶಗಳನ್ನು ಯುವಕರಿಗೆ ನೀಡುತ್ತಾರೆ. "ಸುಧಾರಣೆ ಬೇಕು ಎನ್ನುವವರು ಎಲ್ಲಿದ್ದಾರೆ? ಅವರನ್ನು ಮೊದಲು ಸಿದ್ಧಗೊಳಿಸಿ... ಭಾರತ ತನ್ನ ಅತಿಶ್ರೇಷ್ಠ ಮತ್ತು ಉನ್ನತ ಮಟ್ಟದ ಜನರ ಬಲಿದಾನವನ್ನು ಬಯಸುತ್ತದೆ ಎಂಬುದು ನನಗೆ ನಿಸ್ಸಂಶಯವಾಗಿ ತಿಳಿದಿದೆ. ಬಹುಜನ ಹಿತಕ್ಕಾಗಿ, ಬಹುಜನ ಸುಖಕ್ಕಾಗಿ ಜಗತ್ತಿನ ಶೂರಾಧಿಶೂರರು, ಶ್ರೇಷ್ಠಾತಿಶ್ರೇಷ್ಠರು ತಮ್ಮ ಸರ್ವಸ್ವವನ್ನೂ ತ್ಯಾಗಮಾಡಬೇಕು. ನಿತ್ಯಪ್ರೇಮ ಮತ್ತು ಕರುಣೆಗಳಿಂದ ಕೂಡಿದ ನೂರಾರು ಬುದ್ಧರು ಬೇಕಾಗಿದ್ದಾರೆ.... ಪುರುಷಸಿಂಹರು, ಪುರುಷಸಿಂಹರೇ ಬೇಕಾಗಿರುವುದು, ಉಳಿದುದೆಲ್ಲವೂ ಸಿದ್ಧವಾಗುವುದು. ಬಲಿಷ್ಠರೂ, ವೀರ್ಯ ವಂತರೂ, ಶ್ರದ್ಧೆಯಿಂದ ಕೂಡಿದವರೂ, ಏಕನಿಷ್ಠೆಯುಳ್ಳ ವರೂ ಆದ ಯುವಕರು ಬೇಕಾಗಿದ್ದಾರೆ. ಇಂತಹ ನೂರಾರು ಮಂದಿ ಇದ್ದರೆ ಜಗತ್ತನ್ನೇ ಕ್ರಾಂತಿಗೊಳಿಸಬಹುದು. ಮೊದಲು ನಾವು ಅವರ ಜೀವನವನ್ನು ರೂಪಿಸಬೇಕು. ಆ ಬಳಿಕ ನಿಜ ವಾದ ಕೆಲಸವನ್ನೇನಾದರೂ ಅವರಿಂದ ಅಪೇಕ್ಷಿಸಬಹುದು." ಹೀಗೆ ಯುವಕರನ್ನು ಸ್ವಯಂಸೇವಕರಾಗಿ ರೂಪಿಸುವ ಕುರಿತು ಸ್ವಾಮೀಜಿ ಹೇಳುತ್ತಾರೆ.

ಸ್ವಾಮೀಜಿಯವರ ಪ್ರಕಾರ ಸುಧಾರಕರಲ್ಲಿ ಮೂರು ಅಂಶಗಳಿರಬೇಕು: ತಮ್ಮ ಸೋದರ–ಸೋದರಿಯರ ದೀನ ಪರಿಸ್ಥಿತಿಯ ಬಗ್ಗೆ ಮರುಕವಿರಬೇಕು. ಎರಡನೆಯದಾಗಿ ಅವರ ಸಮಸ್ಯೆಗಳನ್ನು ಪರಿಹರಿಸುವ, ಸಮಾಜದ ಒಳ್ಳೆಯದನ್ನು ಇಟ್ಟುಕೊಂಡು ಕೆಟ್ಟದ್ದನ್ನು ಮಾತ್ರ ನಿವಾರಿಸಿಕೊಳ್ಳುವ ವಿಧಾನ ವನ್ನು ಕಂಡುಹಿಡಿಯಬೇಕು. ಮೂರನೆಯದಾಗಿ, ಸಂಪತ್ತು, ಕೀರ್ತಿಗಳ ಗಳಿಕೆಯ ದಾಹದಿಂದ ಸುಧಾರಕರ ಉದ್ದೇಶ ಭ್ರಷ್ಟ ವಾಗಿರಬಾರದು. ಪ್ರತಿಯೊಬ್ಬ ವ್ಯಕ್ತಿ ಅಥವಾ ಪ್ರತಿಯೊಂದು ರಾಷ್ಟ್ರ ಉನ್ನತಮಟ್ಟಕ್ಕೇರಲು ಒಳಿತಿನ ಶಕ್ತಿಯಲ್ಲಿ ಅಚಲ ವಿಶ್ವಾಸ, ಸಂಶಯ– ಅಸೂಯೆಗಳಿಲ್ಲದಿರುವುದು ಮತ್ತು ತಾವು ಒಳ್ಳೆಯವರಾಗಲು ಯತ್ನಿಸುತ್ತ ಇತರರಿಗೆ ಒಳಿತನ್ನು ಮಾಡಲು ಬಯಸುವ ಎಲ್ಲರಿಗೂ ಸಹಾಯ ಮಾಡುವ ಪ್ರವೃತ್ತಿ – ಇವು ಬೇಕು. ಸುಧಾರಣೆಯ ಕಾರ್ಯದಲ್ಲಿ ನಾಯಕತ್ವವನ್ನು ಹಿಡಿದಿರುವವರಿಗೆ ಸ್ವಾಮೀಜಿ ಹೀಗೆ ಕಿವಿಮಾತು ಹೇಳುತ್ತಾರೆ:

"ಇನ್ನೊಬ್ಬರ ಮೇಲೆ ಅಧಿಕಾರ ಚಲಾಯಿಸುವುದನ್ನು ಬಿಟ್ಟು ತಮ್ಮವರೊಂದಿಗೆ ಬೆರೆತು ನಿಸ್ವಾರ್ಥದಿಂದ, ತ್ಯಾಗಭಾವನೆಯಿಂದ ಸೇವಕರಂತೆ ಕೆಲಸ ಮಾಡಿರಿ."

## ಭಾರತದ ಹೃದಯ

ಪ್ರತಿಯೊಂದು ದೇಶಕ್ಕೂ, ಜನಾಂಗಕ್ಕೂ ಒಂದು ಜೀವನಾಡಿಯಿದೆ. ಅದಕ್ಕೆ ಪೆಟ್ಟುಬಿದ್ದಾಗ ಆ ದೇಶ ಅಥವಾ ನಾಗರಿಕತೆ ನಾಶವಾದಂತೆ. ಭಾರತದ ಜೀವನಾಡಿ ಅಧ್ಯಾತ್ಮದಲ್ಲಿದೆ. ಅದನ್ನೇ ಸ್ಥೂಲದೃಷ್ಟಿಯಿಂದ 'ಧರ್ಮ' ಎನ್ನುತ್ತೇವೆ. ಎಲ್ಲಿಯವರೆಗೆ ಭಾರತವು ಈ ದಿಸೆಯಲ್ಲಿ ಮುನ್ನಡೆಯುವುದೊ, ತನ್ನ ಇತರ ಎಲ್ಲ ಕಾರ್ಯಕ್ಷೇತ್ರಗಳನ್ನು 'ಧರ್ಮ' ಅಥವಾ ಅಧ್ಯಾತ್ಮದ ಆಧಾರದಿಂದ ಸ್ವೀಕರಿಸಿ ಮುನ್ನಡೆಸುವುದೋ, ಭೋಗವಾದದ ಕಡೆಗೆ ವಾಲುವುದಿಲ್ಲವೊ, ಅಲ್ಲಿಯವರೆಗೂ ಅದನ್ನು ನಾಶ ಮಾಡುವ ಶಕ್ತಿ ಯಾರಿಗೂ ಇಲ್ಲ. ಎಂದು ಭಾರತವು ಧರ್ಮವನ್ನು ತ್ಯಜಿಸುತ್ತದೊ, ಅಂದು ಅದು ಸತ್ತಂತೆಯೆ. ಆದ್ದರಿಂದ ಸ್ವಾಮೀಜಿ ಎಚ್ಚರಿಕೆಯ ಮಾತನ್ನು ಹೇಳುತ್ತಾರೆ. ಈ ಧರ್ಮವನ್ನು ಎಲ್ಲ ರೀತಿಯಿಂದಲೂ ಬೆಳಸಿ, ಉಳಿಸಿಕೊಂಡು, ಜಗತ್ತಿನೆಲ್ಲೆಡೆ ಹರಡುವಂತೆ. ಉನ್ನತ ವೇದಾಂತದ ಆದರ್ಶಗಳನ್ನು ಕಾರ್ಯರೂಪಗೊಳಿಸಲು ಸದೃಢವಾದ ಶರೀರದ ಅಗತ್ಯವನ್ನು ಮನಗಂಡು 'ವೇದಾಂತದ ಮೇಧಾಶಕ್ತಿ ಮತ್ತು ಮುಸಲ್ಮಾನನ ಶರೀರ'ವೇ ಭಾರತದ ಭವಿಷ್ಯದ ಭರವಸೆಯೆನ್ನುತ್ತಾರೆ.

ಭಾರತವು ಭವಿಷ್ಯದಲ್ಲಿ ಅಧ್ಯಾತ್ಮದ ಮೂಲಕ ಜಗತ್ತನ್ನೇ ಗೆಲ್ಲುವುದನ್ನು ಮನಗಂಡಿದ್ದ ಸ್ವಾಮೀಜಿ ಹೀಗೆ ಭವಿಷ್ಯವಾಣಿ ನುಡಿಯುತ್ತಾರೆ: "ಸುದೀರ್ಘ ರಾತ್ರಿ ಕಡೆಗಿಂದು ಕೊನೆಗಾಣುತ್ತಿದೆ. ಬಹುಕಾಲದ ಶೋಕತಾಪಗಳು ಕಡೆಗಿಂದು ಮಾಯವಾಗುತ್ತಿದೆ. ಇದುವರೆಗೆ ಶವದಂತೆ ಬಿದ್ದಿದ್ದ ಶರೀರವಿಂದು ಸಚೇತನವಾಗುತ್ತಿದೆ. ಅದೋ ಕಿವಿಗೊಡಿ, ವಾಣಿಯೊಂದು ಕೇಳಿಬರುತ್ತಿದೆ. ಬಹು ಪುರಾತನ ಕಾಲದ ಇತಿಹಾಸದ ಕಾಲಗರ್ಭದಿಂದ ಹೊಮ್ಮಿ ಪರ್ವತ ಶಿಖರಗಳಿಂದ ಮರುದನಿಯಾಗಿ ಚಿಮ್ಮಿ, ಕಾನನ ಗಿರಿ ಕಂದರಗಳಲ್ಲಿ ಸಂಚರಿಸಿ, ಬರಬರುತ್ತ ಪ್ರಬಲವಾಗಿ ಬಂದಂತೆಲ್ಲ, ಅಪ್ರಹತವಾಗಿ ನಮ್ಮ ಈ ಪುಣ್ಯಭೂಮಿಯನ್ನು ನಿದ್ರೆಯಿಂದ ಹೊಡೆದೆಬ್ಬಿಸಿ ಜ್ಞಾನ, ಭಕ್ತಿ, ವೈರಾಗ್ಯ ಸೇವಾತತ್ತ್ವಗಳನ್ನು ಉಚ್ಚಕಂಠದಿಂದ ಸಾರುವ ತೂರ್ಯವಾಣಿಯೊಂದು ಕೇಳಿಬರುತ್ತಿದೆ..... ಇದು ಕುರುಡರಿಗೆ ಕಾಣದು, ಮೂರ್ಖರಿಗೆ ತಿಳಿಯದು. ನಮ್ಮ ಈ ಭರತಭೂಮಿ ಯುಗಯುಗಗಳ ನಿದ್ರೆಯಿಂದ ಏಳುತ್ತಿದೆ. ಭಾರತಮಾತೆಯನ್ನು ಇನ್ನು ಯಾರೂ ತಡೆಯಬಲ್ಲವರಿಲ್ಲ. ಇನ್ನು ಆಕೆ ನಿದ್ರೆ ಮಾಡುವುದಿಲ್ಲ. ಯಾವ ಶಕ್ತಿಯೂ ಆಕೆಯನ್ನು ಬಗ್ಗಿಸಲಾರದು." ಈಗಿನ ಇಪ್ಪತ್ತೊಂದನೇ ಶತಮಾನದಲ್ಲಿ ನಿಂತು ಭಾರತದತ್ತ ಕಣ್ಣು ಹಾಯಿಸುವ ಪ್ರತಿಯೊಂದು ಜೀವಿಗೂ ಇದು ಕಾಣದೇ ಹೋಗದು.



# 'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'
## – ಒಂದು ವಿವರಣೆ

ಸ್ವಾಮಿ ಗಿರಿಜಾತ್ಮಾನಂದ

**'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಎಂಬುದು ಒಂದು ಧ್ಯೇಯವಾಕ್ಯ. ಗುರಿಯನ್ನು ನೆನಪಿಸುವ ವಾಕ್ಯವೇ ಧ್ಯೇಯವಾಕ್ಯ. ಇದು ಸಂಸ್ಕೃತ ಭಾಷೆಯಲ್ಲಿದೆ. ಇದನ್ನು ರಚಿಸಿದವರು ಸ್ವಯಂ ಸ್ವಾಮಿ ವಿವೇಕಾನಂದರು. ಇದರ ಕನ್ನಡ ಅನುವಾದ ಈ ರೀತಿಯಾಗಿದೆ: **'ತನ್ನ ಮುಕ್ತಿಗಾಗಿ ಮತ್ತು ಜಗತ್ತಿನ ಹಿತಕ್ಕಾಗಿ.'** ಈ ಧ್ಯೇಯವಾಕ್ಯವನ್ನು ಸ್ವಾಮಿ ವಿವೇಕಾನಂದರು ರಾಮಕೃಷ್ಣ ಮಠದ ಸಂನ್ಯಾಸಿಗಳಿಗಾಗಿಯೇ ಸಿದ್ಧಪಡಿಸಿದ್ದರು. ಈ ವೈಜ್ಞಾನಿಕ ಯುಗದಲ್ಲಿಯೂ ಸಂನ್ಯಾಸದ ಮಹಾನ್ ಆದರ್ಶವನ್ನು ಜಗತ್ತಿನ ಮುಂದೆ ಪ್ರಸ್ತುತಪಡಿಸಿದವರು ಸ್ವಾಮಿ ವಿವೇಕಾನಂದರು. ರಾಮಕೃಷ್ಣ ಮಠಕ್ಕೆ ಸೇರಿದ ಎಲ್ಲ ಬ್ರಹ್ಮಚಾರಿಗಳು ಹಾಗೂ ಸಂನ್ಯಾಸಿಗಳು ಈ ಧ್ಯೆಯವಾಕ್ಯಕ್ಕೆ ಅನುಗುಣವಾಗಿ ಬದುಕಬೇಕೆಂದು ಅವರು ಆದೇಶವನ್ನಿತ್ತಿದ್ದರು. ಇದರಲ್ಲಿ ಒಬ್ಬ ಸಾಧಕನು ತನ್ನ ಸ್ವಂತ ಮುಕ್ತಿಯನ್ನು ಸಾಧಿಸುವುದರೊಂದಿಗೆ, ಎಲ್ಲ ವಿಧಗಳಿಂದಲೂ ಜಗತ್ತಿಗೆ ಹೆಚ್ಚು ಪ್ರಯೋಜನಕಾರಿಯಾಗಿ ಬದುಕಿ ಬಾಳಬಹುದಾಗಿದೆ.

ಈ ಮೇಲಿನ ಧ್ಯೇಯವಾಕ್ಯದಲ್ಲಿ ಎರಡು ಆದರ್ಶಗಳನ್ನು ಒಟ್ಟಿಗೆ ಇರಿಸಲಾಗಿದೆ. ಮೊದಲನೆಯದು **'ತನ್ನ ಮುಕ್ತಿಗಾಗಿ'**, ಎರಡನೆಯದು **'ಜಗತ್ತಿನ ಹಿತಕ್ಕಾಗಿ'**. ಇವೆರಡನ್ನೂ **'ಮತ್ತು'** ಎಂಬ ಸಂಬಂಧ ಕಲ್ಪಿಸುವ ಅವ್ಯಯಪದದೊಂದಿಗೆ ಸೇರಿಸಲಾಗಿದೆ. ಮೋಕ್ಷವನ್ನು ಜೀವನದ ಉದ್ದೇಶವಾಗಿರಿಸಿಕೊಂಡು ತನ್ನ ಸ್ವಂತ ಮುಕ್ತಿಗಾಗಿ ಪ್ರಯತ್ನಪಡಬೇಕು ಮತ್ತು ಅದರ ಜೊತೆಜೊತೆಯಲ್ಲಿಯೇ ಇತರರನ್ನೂ ಈ ಮಾರ್ಗದಲ್ಲಿ ಮುನ್ನಡೆಸಬೇಕು ಎಂಬುದು ಒಂದರ್ಥ. ಇನ್ನು ಭಗವಾನ್ ಬುದ್ಧನು ಬೋಧಿಸಿದಂತೆ, 'ಬಹುಜನ ಹಿತಾಯ ಬಹುಜನ ಸುಖಾಯ' ಎಂಬ ಆದರ್ಶದಂತೆ, ಜಗತ್ತಿನ ಜನರ ಕಷ್ಟಕಾರ್ಪಣ್ಯಗಳನ್ನು ನೀಗಲು ಸಂನ್ಯಾಸಿಗಳು ನಿಷ್ಕಾಮಕರ್ಮವನ್ನು ಆಚರಿಸುತ್ತ ತಮ್ಮ ಮುಕ್ತಿಯನ್ನು ಸಾಧಿಸಿಕೊಳ್ಳಬೇಕು ಎನ್ನುವುದು ಇನ್ನೊಂದರ್ಥ. ಸ್ವಾಮಿ ವಿವೇಕಾನಂದರು ಎರಡೂ ವಿಧಾನಗಳಿಗೆ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಈಗ ಧ್ಯೇಯವಾಕ್ಯದ ಮೊದಲ ಭಾಗವನ್ನು ಪರಿಶೀಲಿಸೋಣ.

**ಆತ್ಮನೋ ಮೋಕ್ಷಾರ್ಥಂ – ತನ್ನ ಮುಕ್ತಿಗಾಗಿ :** ಭೂಮಿಯ ಮೇಲೆ ಮನುಷ್ಯನ ಜೀವನವೆಂಬುದು ಕರ್ಮಬಂಧನದಿಂದ ಕೂಡಿದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನ ವಾಣಿ ಹೀಗೆನ್ನುತ್ತದೆ:

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥**

"ಯಾವೊಬ್ಬನೂ ಎಂದಿಗೂ ಒಂದು ಕ್ಷಣಮಾತ್ರವಾದರೂ ಕೆಲಸ ಮಾಡದೆ ಇರಲಾರನು. ಏಕೆಂದರೆ ಪ್ರತಿಯೊಬ್ಬನೂ ಪ್ರಕೃತಿಯಿಂದ ಹುಟ್ಟಿದ ಗುಣಗಳಿಗೆ ವಶನಾಗಿ ಕರ್ಮವನ್ನು ಮಾಡುತ್ತಲೇ ಇರುತ್ತಾನೆ." ಆದ್ದರಿಂದ ಈ ಜಗತ್ತಿನಲ್ಲಿ ಕಾಣಬರುತ್ತಿರುವ ಎಲ್ಲಾ ಕೆಲಸಕಾರ್ಯಗಳೂ ಪ್ರಕೃತಿಯ ಗುಣಗಳಿಂದ ಪ್ರೇರೇಪಿಸಲ್ಪಟ್ಟವು. ಅನೇಕ ಯಂತ್ರಗಳನ್ನು ಕಂಡುಹಿಡಿದಿರುವ ಮನುಷ್ಯನೂ ಕೂಡ ಪ್ರಕೃತಿಯು ಸೃಷ್ಟಿಸಿದ ಒಂದು ಯಂತ್ರವೆಂದಂತಾಯಿತು. ಹಾಗಾದರೆ ಈ ಯಾಂತ್ರಿಕ ಬದುಕಿನಿಂದ ಮನುಷ್ಯನಿಗೆ ಬಿಡುಗಡೆ ಯಾವಾಗ ಲಭಿಸುತ್ತದೆ ಎಂದು ಪ್ರಶ್ನೆ ಏಳುತ್ತದೆ. ಅದಕ್ಕೆ ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ: "ಈ ಪ್ರಪಂಚಯಂತ್ರದ ಚಕ್ರಗಳಿಂದ ದೂರ ಓಡದೆ,

ಈ ಲೇಖನದ ಶೀರ್ಷಿಕೆಯಲ್ಲಿನ ಸ್ವಾಮಿ ವಿವೇಕಾನಂದರ ಅನುಷ್ಠಾನಪ್ರದ ಧ್ಯೇಯವಾಕ್ಯವು ಆಧುನಿಕ ಜಗತ್ತಿಗೆ ಬೇಕಾದ ಅಧ್ಯಾತ್ಮ ಸಂದೇಶವಾಗಿದೆ. ರಾಮಕೃಷ್ಣ ಮಹಾಸಂಘದ ಸಂನ್ಯಾಸಿಗಳ ಜೀವನಾದರ್ಶವಾಗಿರುವ ಇದು, ಸಕಲ ಜನರಿಗೂ ಅತ್ಯವಶ್ಯವಾಗಿರುವ ಸೂತ್ರ. ಇದರ ವಿವರಣೆಯನ್ನು ಸರಳರೀತಿಯಲ್ಲಿ ಮಾಡಿಕೊಟ್ಟಿರುವ ಸ್ವಾಮೀಜಿಯವರು ಬೆಂಗಳೂರಿನ ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಹಲವು ಕವಿತೆಗಳು ಹಾಗೂ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

ಆದರೊಳಗೇ ಇದ್ದು ಕರ್ಮರಹಸ್ಯವನ್ನು ಅರಿಯಿರಿ. ಏಕೆಂದರೆ ಪ್ರಪಂಚದ ಯಂತ್ರದ ಒಳಗೇ ಇದ್ದು ಕರ್ಮವನ್ನು ಸರಿಯಾಗಿ ಮಾಡಿ ಅದರ ಹೊರಗೆ ಬರುವುದು ಸಾಧ್ಯ. ಆಗ ಮಾತ್ರ ಹೊರಗೆ ಬರುವ ತಂತ್ರ ತಿಳಿಯುತ್ತದೆ." ಈ ಹೊರಬರುವ ಬಯಕೆಯನ್ನೇ 'ಮುಮುಕ್ಷುತ್ವ' ಎನ್ನುವುದು. ಮುಕ್ತನಾಗಬೇಕೆಂಬ ಇಚ್ಛೆಯೇ ಮುಮುಕ್ಷುತ್ವ. ಆದರೆ ಈ ಮುಮುಕ್ಷುತ್ವವೆಂಬುದು ಬಹಳ ದುರ್ಲಭವೆನ್ನುತ್ತಾರೆ ಶ್ರೀಶಂಕರಾಚಾರ್ಯರು.

**ದುರ್ಲಭಂ ತ್ರಯಮೇವೈತದ್ದೈವಾನುಗ್ರಹಹೇತುಕಮ್ ।**
**ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷಸಂಶ್ರಯಃ ॥**

"ಭಗವಂತನ ಅನುಗ್ರಹವೇ ಕಾರಣವಾಗಿರುವ ಈ ಮೂರೂ ಕಷ್ಟಸಾಧ್ಯವೇ : ಮನುಷ್ಯಜನ್ಮ, ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆ ಮತ್ತು ಮಹಾತ್ಮರ ಸಂಗ."

ಮಾನವಜನ್ಮವೇ ಗಳಿಸಲು ದುರ್ಲಭ. ಇನ್ನು ಮಾನವಜನ್ಮವನ್ನು ಪಡೆದವನಿಗೆ ಮುಕ್ತನಾಗಬೇಕೆಂಬ ಇಚ್ಛೆ ಬರುವುದೇ ಬಹಳ ದುರ್ಲಭ. ಹಾಗೆ ಮುಕ್ತನಾಗಬೇಕೆಂದುಕೊಂಡರೂ ಅದಕ್ಕೆ ಸರಿಯಾದ ಮಾರ್ಗವನ್ನು ತೋರಿಸಿ ಮುನ್ನಡೆಸುವ ಸಮರ್ಥ ಗುರುಗಳು ಅಥವಾ ಮಹಾಪುರುಷರ ಸಂಗ ಅತ್ಯಂತ ದುರ್ಲಭ.

**"ಮಾನವ ಜನ್ಮ ದೊಡ್ಡದು. ಅದ ಹಾನಿ ಮಾಡಬೇಡಿ ಹುಚ್ಚಪ್ಪಗಳಿರಾ"** ಎಂದರು ದಾಸಶ್ರೇಷ್ಠರಾದ ಪುರಂದರದಾಸರು. ಸೃಷ್ಟಿಯಲ್ಲಿ ಮನುಷ್ಯನ ಜನ್ಮವೇ ದೊಡ್ಡದು, ಅದನ್ನು ವ್ಯರ್ಥವಾಗಿ ಕಳೆಯಬೇಡಿ ಎನ್ನುವುದರೊಂದಿಗೆ ಪ್ರೀತಿಯಿಂದ, 'ಹುಚ್ಚಪ್ಪಗಳಿರಾ' ಎಂಬ ನಿಂದಾವಾಕ್ಯವನ್ನೂ ಸೇರಿಸಿದ್ದಾರೆ ಅವರು.

ಮಾನವ ಮೃಗತ್ವದಿಂದ ಮನುಷ್ಯತ್ವಕ್ಕೇರಬೇಕಾಗಿದೆ. ಮೃಗತ್ವದ ಸ್ಥಿತಿಯಲ್ಲಿ ಅವನೊಬ್ಬ ಮಾತನಾಡುವ ಪ್ರಾಣಿಯಷ್ಟೆ. ಮನುಷ್ಯತ್ವದಲ್ಲಿ ಅವನು ಸಕಲಸೃಷ್ಟಿಯಲ್ಲಿಯೂ ತನ್ನ ವಿಶೇಷತೆಯನ್ನು ಮನಗಾಣುತ್ತಾನೆ; ಕಂಡು ಎಚ್ಚರಗೊಳ್ಳುತ್ತಾನೆ. ಅನಂತರ ದೈವತ್ವಕ್ಕೇರುವುದೇ ಮುಕ್ತಿಯೆನಿಸಿಕೊಳ್ಳುತ್ತದೆ.

ನಮ್ಮ ಶಾಸ್ತ್ರಗ್ರಂಥಗಳಲ್ಲಿ ಮನುಷ್ಯಜೀವನಕ್ಕೆ ನಾಲ್ಕು ಪುರುಷಾರ್ಥಗಳನ್ನು ಹೇಳಿದ್ದಾರೆ. ಅವುಗಳೆಂದರೆ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ. ಇಲ್ಲಿ ಮೋಕ್ಷವನ್ನೇ ಕೊನೆಯ ಹಂತವನ್ನೆಲಾಗಿದೆ. ಮನುಷ್ಯನು ಮೊದಲು ಧರ್ಮಮಾರ್ಗದಲ್ಲಿ ನಡೆದು ಬಾಳಬೇಕು. ಪ್ರಾಮಾಣಿಕವಾಗಿ ಹಣ ಮತ್ತು ಸಂಪತ್ತುಗಳನ್ನು ಗಳಿಸಬೇಕು. ಮನಸ್ಸಿನ ಸಕಲ ಕಾಮನೆಗಳನ್ನೂ ಧರ್ಮಸಮ್ಮತವಾದ ರೀತಿಯಲ್ಲಿ ಈಡೇರಿಸಿಕೊಳ್ಳಬೇಕು. ಜೀವನದ ಸುಖದೊಂದಿಗೆ ದುಃಖದ ಅನುಭವವೂ ಆಗುವುದರಿಂದ ಮುಕ್ತಿಯ ಬಯಕೆ ಕ್ರಮೇಣ ಉಂಟಾಗುವುದು. ಆಮೇಲೆ ಮೋಕ್ಷಪ್ರಾಪ್ತಿಗಾಗಿ ಧರ್ಮಶಾಸ್ತ್ರಗಳಲ್ಲಿ ತಿಳಿಸಿರುವಂತೆ ಪ್ರಯತ್ನಿಸಿ ಮುಕ್ತನಾಗುವ ಇಚ್ಛೆ ಬರುತ್ತದೆ.

ಈ ನಾಲ್ಕು ಪುರುಷಾರ್ಥಗಳ ಮಾರ್ಗವು ಸಂಸಾರಜೀವನವನ್ನು ನಡೆಸಿ ಮುಕ್ತಿಯನ್ನು ಬಯಸುವವರಿಗೆ ಅನ್ವಯಿಸುತ್ತದೆ. ಆದರೆ ಸಂನ್ಯಾಸಿಗಳು ಧರ್ಮಮಾರ್ಗವನ್ನು ಅವಲಂಬಿಸುತ್ತ, ಕಾಮಕಾಂಚನಗಳನ್ನು ತ್ಯಜಿಸಿ ಕೇವಲ ಮೋಕ್ಷಕ್ಕಾಗಿ ಪ್ರಯತ್ನಿಸುತ್ತಾರೆ. ಸಂನ್ಯಾಸಿಗಳೇ ಮೋಕ್ಷಾಕಾಂಕ್ಷಿಗಳು; ಜನನ–ಮರಣವೆಂಬ ಸಂಸಾರಚಕ್ರದಿಂದ ಪಾರಾಗಲು ಪ್ರಯತ್ನಿಸುತ್ತಿರುವವರು ಅಥವಾ ಪಾರಾದವರು. ಒಟ್ಟಿನಲ್ಲಿ ಮನುಷ್ಯರೆಲ್ಲರೂ ತಮಗೆ ತಿಳಿದೋ, ತಿಳಿಯದೆಯೋ ಮೋಕ್ಷದತ್ತಲೇ ಹೋಗುತ್ತಿರುವವರು. ಆದ್ದರಿಂದಲೇ ನಮ್ಮ ಋಷಿ–ಮುನಿಗಳು, ಸಾಧು–ಸಂತರು, ಅವತಾರಪುರುಷರೇ ಮೊದಲಾಗಿ ಎಲ್ಲರೂ ಮೋಕ್ಷವನ್ನೇ ಅಂತಿಮಗುರಿಯೆಂದು ಬೋಧಿಸಿದ್ದಾರೆ.

**ಜಗದ್ಧಿತಾಯ ಚ – ಮತ್ತು ಜಗತ್ತಿನ ಹಿತಕ್ಕಾಗಿ :** ಜಗತ್ತಿನ ಹಿತವೆಂದರೆ ಜಗತ್ತಿನಲ್ಲಿರುವ ಸಕಲ ಜೀವಿಗಳ ಹಿತ. 'ಭಗವಂತನೇ ಈ ಜೀವ ಜಗತ್ತಾಗಿ ವ್ಯಕ್ತವಾಗಿರುವುದರಿಂದ ನಾವು ಯಾರಿಗೇ ಸೇವೆ ಸಲ್ಲಿಸಲಿ, ಅದು ಭಗವಂತನಿಗೇ ಸಲ್ಲಿಸಿದ ಸೇವೆ' ಎಂಬ ಮನೋಭಾವ. ಈ ರೀತಿಯ ಭಾವದಿಂದ ಮಾಡುವ ಸೇವೆಯಿಂದ ಸಾಧಕನಿಗೆ ಮುಕ್ತಿಯು ಇನ್ನೂ ಸುಲಭದಲ್ಲಿ ಲಭ್ಯವಾಗುತ್ತದೆ. ಇದು ಮನುಷ್ಯನನ್ನು ನಿಸ್ವಾರ್ಥಿಯನ್ನಾಗಿ ಮಾಡುವುದಲ್ಲದೆ, ಜಗತ್ತಿನ ಎಲ್ಲಾ ಜನರಿಗೂ ಅವನು ಪ್ರಿಯನಾಗುತ್ತಾನೆ. ಸಮಾಜದ ಸಮತೋಲನವನ್ನು ಕಾಪಾಡುವುದಕ್ಕೂ ಈ 'ಜಗತ್ತಿನ ಹಿತಕ್ಕಾಗಿ' ಎಂಬ ಆದರ್ಶ ಬಹಳ ಉಪಯುಕ್ತವಾಗಿದೆ.

ಈ ಹಿಂದೆ, ಈ ಜಗತ್ತು ಕನಸಿನಂತೆ ಮಿಥ್ಯೆಯೆಂದು ತಿಳಿದ ಸಂನ್ಯಾಸಿಗಳು, ಸತ್ಯಸಾಕ್ಷಾತ್ಕಾರಕ್ಕಾಗಿ ತಪಸ್ಸನ್ನು ಆಚರಿಸಲು ನಿರ್ಜನ ಪ್ರದೇಶಕ್ಕೆ ಹೋಗುತ್ತಿದ್ದರು. ಯಾವುದಾದರೂ ಪರ್ವತದ ಗುಹೆಯೊಂದರಲ್ಲಿ ವಾಸಿಸುತ್ತ ಅಲ್ಲಿ ಆತ್ಮಧ್ಯಾನನಿರತರಾಗುತ್ತಿದ್ದರು. ಆದರೆ ತಮ್ಮ ಭಿಕ್ಷೆಗಾಗಿ ಮತ್ತು ಕೆಲವು ಅಗತ್ಯ ವಸ್ತುಗಳಿಗಾಗಿ ಅವರು ಜನಸಾಮಾನ್ಯರ ಬಳಿಗೇ ಬರಬೇಕಾಗಿತ್ತು. ಲೆಕ್ಕಾಚಾರದ ಬುದ್ಧಿಯ ಜನರು ಈ ಸಾಧುಗಳನ್ನು ಸೋಮಾರಿಗಳೆಂದೂ ಇಲ್ಲವೆ ಪರತಂತ್ರಜೀವಿಗಳೆಂದೂ ನಿಂದಿಸುವುದಿತ್ತು. ಸ್ತುತಿ ನಿಂದನೆಗಳನ್ನು ಸಮಾನವಾಗಿ ಕಾಣುವ ಸಂನ್ಯಾಸಿಗಳು ಅದಾವುದನ್ನೂ ಲೆಕ್ಕಿಸದೆ ಬಂದದ್ದರಲ್ಲಿ ತೃಪ್ತರಾಗಿ ಇರುತ್ತಿದ್ದರು. ಶಮ–ದಮಗಳನ್ನು ಅಭ್ಯಾಸಮಾಡುತ್ತ ಮಾನಸಿಕ ಶಾಂತಿ ಮತ್ತು ಆತ್ಮಾನಂದವನ್ನು ಅನುಭವಿಸುತ್ತಿದ್ದರು. ಆದರೆ ಈ ಸಂನ್ಯಾಸಿಗಳಿಂದ ಸಮಾಜಕ್ಕೇನು ಪ್ರಯೋಜನ ಎಂಬ ಪ್ರಶ್ನೆ ಬಂದಾಗ ಕಣ್ಣಿಗೆ ಕಾಣುವಂತಹ ಉತ್ತರವೇನೂ ದೊರಕುತ್ತಿರಲಿಲ್ಲ. ಆ ಸಾಧುಸಂನ್ಯಾಸಿಗಳು ಜಗತ್ತಿನ ಹಿತಕ್ಕಾಗಿಯೇ ಧ್ಯಾನಪ್ರಾರ್ಥನೆ ಮಾಡುತ್ತಿದ್ದರಾದರೂ, ಅದು ನಿರೀಕ್ಷಿತವಾದ ಪರಿಣಾಮ ಬೀರುತ್ತಿತ್ತು ಎಂದು ಹೇಳಲಾಗದು.

ಇತ್ತ ಸಮಾಜದಲ್ಲಿ ಧರ್ಮದ ಅನುಷ್ಠಾನವಿಲ್ಲದ ಪಂಡಿತರು ತಮ್ಮನ್ನೇ ಸರ್ವಜ್ಞರೆಂದು ಕರೆದುಕೂಂಡು ಹೆಮ್ಮೆಯಿಂದ ಬೀಗುತ್ತಿದ್ದರು. ಸಾಮಾನ್ಯಜನರನ್ನು ಪಶುಗಳಂತೆ ಕಾಣುತ್ತಿದ್ದರು. ವೇದ–ಉಪನಿಷತ್ತುಗಳು ಎಲ್ಲಾ ಜನರಿಗೂ ದೊರಕದೆ ಹೋದವು. ದೇವಸ್ಥಾನದ ಅರ್ಚಕರು ತಾವೇ ಬಹಳ ಶ್ರೇಷ್ಠರೆಂದು ವರ್ತಿಸತೊಡಗಿದರು. ಒಟ್ಟಿನಲ್ಲಿ ಜನಸಾಮಾನ್ಯರು ಕಡೆಗಣಿಸಲ್ಪಟ್ಟರು. ಜಾತೀಯತೆಯು ಉಗ್ರಸ್ವರೂಪವನ್ನು ತಾಳಿತು.

ನಿಸ್ವಾರ್ಥ ಪ್ರೇಮವನ್ನು ಹೊಂದಿರುವ ವ್ಯಕ್ತಿಗಳೇ ವಿರಳವಾದರು. ಎಲ್ಲರನ್ನೂ ಒಂದುಗೂಡಿಸುವ ಅಂಶಗಳೇ ಇಲ್ಲವಾದವು. ಅಂತಹ ಭಾರತದೇಶ ಪರಕೀಯರ ಆಳ್ವಿಕೆಗೆ ಒಳಗಾದದ್ದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ನಿಜಕ್ಕೂ ಧರ್ಮಗ್ಲಾನಿಯೆಂದರೆ ಇದೇ ಅಲ್ಲವೆ?

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥**

"ಎಲೈ ಅರ್ಜುನ, ಯಾವಾಗ ಧರ್ಮದ ಅವನತಿಯಾಗುವುದೋ, ಅಧರ್ಮದ ಉನ್ನತಿಯಾಗುವುದೋ ಆಗ ನಾನು ಅವತಾರ ಮಾಡುತ್ತೇನೆ" ಎಂಬ ಗೀತೆಯ ಭಗವದ್ವಾಣಿಯು ಸುಳ್ಳಾಗಲಿಲ್ಲ.

೧೮೩೬ರ ಫೆಬ್ರವರಿ ೧೮ನೇ ದಿನದಂದು ಪೂರ್ವದಿಗಂತದಲ್ಲಿ ಅರುಣೋದಯವಾಯಿತು. ಕಾಮಾರಪುಕುರವೆಂಬ ಹಳ್ಳಿಯಲ್ಲಿ ಶ್ರೀರಾಮಕೃಷ್ಣ ಪರಮಹಂಸರ ಜನನವಾಯಿತು. ಬಾಲ್ಯದಲ್ಲಿಯೇ ಶೈಕ್ಷಣಿಕ ವಿದ್ಯಾಭ್ಯಾಸವನ್ನು ತೊರೆಯುವುದರ ಮೂಲಕ ಪಂಡಿತರಾಗುವ ಹಂಬಲವನ್ನೇ ಅವರು ಕಿತ್ತೊಗೆದರು. ಜಾತೀಯತೆಯ ಪಿಡುಗು ಅವರಿಗೆ ಸೋಂಕಲೇ ಇಲ್ಲ. ಆ ಊರಿನ ಎಲ್ಲ ವರ್ಗದ ಜನರೂ ಅವರನ್ನು ಪ್ರೀತಿಯಿಂದ ಕಾಣುತ್ತಿದ್ದರು. ಮುಂದೆ ದಕ್ಷಿಣೇಶ್ವರದ ಕಾಳಿದೇವಾಲಯದಲ್ಲಿ ಅರ್ಚಕರಾಗಿ ತಮ್ಮ ಸರಳ ಭಕ್ತಿಶ್ರದ್ಧೆಗಳಿಂದ ಕಾಳಿಕಾಂಬೆಯನ್ನು ಸಾಕ್ಷಾತ್ಕರಿಸಿಕೊಂಡರು. "ಚಂದಮಾಮ ಹೇಗೆ ಎಲ್ಲರಿಗೂ ಮಾಮನೋ ಹಾಗೆಯೇ ಭಗವಂತ ಎಲ್ಲರಿಗೂ ಸೇರಿದವನು" ಎಂಬ ವಿನೂತನ ಸಂದೇಶವನ್ನು ಕೊಟ್ಟರು. ವಿವಿಧ ಧಾರ್ಮಿಕ ಮಾರ್ಗಗಳನ್ನು ಒಂದೊಂದಾಗಿ ಅಭ್ಯಸಿಸಿ ಅವುಗಳೆಲ್ಲವೂ ಆ ಏಕಮಾತ್ರ ಸದ್ವಸ್ತುವಿನೆಡೆಗೆ ಕರೆದೊಯ್ಯುವ ಪಥಗಳೆಂದು ಪ್ರಮಾಣೀಕರಿಸಿದರು. ತಮ್ಮ ಲೀಲಾಕಾರ್ಯದ ವೈಭವ ಸ್ವರೂಪನಾದ ನರೇಂದ್ರನನ್ನು ಸ್ವಾಮಿ ವಿವೇಕಾನಂದರನ್ನಾಗಿ ನಿರ್ಮಿಸಿದರು.

ಸ್ವಾಮಿ ವಿವೇಕಾನಂದರು ಅಮೇರಿಕಾದಲ್ಲಿ ನಾಲ್ಕು ವರ್ಷಗಳ ಕಾಲ ನಿರಂತರವಾಗಿ ಸಂಚರಿಸುತ್ತಾ, ವೇದಾಂತ ಪ್ರಸಾರ ಕಾರ್ಯವನ್ನು ಯಶಸ್ವಿಯಾಗಿ ಮಾಡಿ ಮುಗಿಸಿ ಭಾರತಕ್ಕೆ ಹಿಂದಿರುಗಿದರು. ಒಮ್ಮೆ ಅವರು ತಮ್ಮ ಸೋದರ ಸಂನ್ಯಾಸಿಗಳ ಮುಂದೆ ಜಗತ್ತಿನ ಹಿತಕ್ಕಾಗಿ ಸಂನ್ಯಾಸಿಗಳು ಏನು ಮಾಡಬೇಕೆಂದು ತಿಳಿಸಿದರು: "ಬಹುಜನರ ಹಿತಕೋಸ್ಕರ, ಬಹುಜನರ ಸುಖಕೋಸ್ಕರವೇ ಸಂನ್ಯಾಸಿಯ ಜನ್ಮ. ಸಂನ್ಯಾಸವನ್ನು ಪಡೆದು ಯಾರು ಈ ಉಚ್ಚಲಕ್ಷ್ಯವನ್ನು ಮರೆತುಬಿಡುತ್ತಾರೆಯೊ ಅವನ ಬಾಳು ವ್ಯರ್ಥವೇ ಸರಿ. ಪರರಿಗೋಸ್ಕರ ಪ್ರಾಣಕೊಡುವುದಕ್ಕೆ, ಆಕಾಶವನ್ನು ಮುಟ್ಟುತ್ತಿರುವ ಪ್ರಾಣಿಗಳ ಗೋಳಾಟವನ್ನು ಹೋಗಲಾಡಿಸುವುದಕ್ಕೆ, ವಿಧವೆಯರ ಕಣ್ಣೀರನ್ನು ತೊಡೆಯುವುದಕ್ಕೆ, ಪುತ್ರವಿಯೋಗದಿಂದ ಸಂಕಟಪಡುತ್ತಿರುವವರ ಹೃದಯದಲ್ಲಿ ಶಾಂತಿಯನ್ನು ಉಂಟುಮಾಡುವುದಕ್ಕೆ, ಅಜ್ಞರಾದ ಸಾಧಾರಣ ಜನರಿಗೆ ಜೀವನಸಂಗ್ರಾಮದಲ್ಲಿ ದಕ್ಷತೆಯನ್ನು ಉಂಟುಮಾಡುವುದಕ್ಕೆ, ಶಾಸ್ತ್ರೋಪದೇಶವನ್ನು ಹರಡುವುದರ ಮೂಲಕ ಎಲ್ಲರಿಗೂ ಐಹಿಕ ಮತ್ತು ಪಾರಮಾರ್ಥಿಕ ಮಂಗಳವನ್ನುಂಟುಮಾಡುವುದಕ್ಕೆ ಮತ್ತು ಜ್ಞಾನದ ಬೆಳಕನ್ನು ಬೆಳಗಿ ಎಲ್ಲರಲ್ಲಿಯೂ ನಿದ್ರಿಸುತ್ತಿರುವ ಬ್ರಹ್ಮಸಿಂಹವನ್ನು ಎಬ್ಬಿಸುವುದಕ್ಕೆ – ಈ ಕಾರ್ಯಗಳಿಗಾಗಿಯೇ ಜಗತ್ತಿನಲ್ಲಿ ಸಂನ್ಯಾಸಿಯ ಜನ್ಮವಿರುವುದು. ಏಳಿ, ಎಚ್ಚರಗೊಳ್ಳಿ, ಮೊದಲು ನೀವು ಎಚ್ಚೆತ್ತುಕೊಂಡು ಎಲ್ಲರನ್ನೂ ಜಾಗೃತಗೊಳಿಸಿ, ನರಜನ್ಮವನ್ನು ಸಾರ್ಥಕಗೊಳಿಸಿಹೋಗಿ. **ಉತ್ತಿಷ್ಠತ, ಜಾಗ್ರತ, ಪ್ರಾಪ್ಯ–ವರಾನ್ನಿಬೋಧತ."**

ಸ್ವಾಮಿ ವಿವೇಕಾನಂದರು ಮೂರು ವಿಧದ ಸೇವಾಕ್ರಮವನ್ನು ತಿಳಿಸುತ್ತಾರೆ. ಮೊದಲನೆಯದು ಹಸಿದವರಿಗೆ, ರೋಗಿಗಳಿಗೆ ಅನ್ನಹಾರ ಔಷಧಗಳನ್ನು ಒದಗಿಸುವುದರ ಮೂಲಕ ಸೇವೆ ಸಲ್ಲಿಸುವುದು. ಇದರಲ್ಲಿ ದಾನಿಗಳು, ವೈದ್ಯರು, ಮತ್ತು ಸ್ವಯಂಸೇವಕರೆಲ್ಲರಿಗೂ ಸೇವೆ ಮಾಡಲು ಅವಕಾಶವಿದೆ. ಎರಡನೆಯದಾಗಿ ಶೈಕ್ಷಣಿಕವಾಗಿ ವಿದ್ಯಾಭ್ಯಾಸ ಮತ್ತು ಉದ್ಯೋಗ ತರಬೇತಿಗಳ ಮೂಲಕ ವ್ಯಕ್ತಿಗಳನ್ನು ಸ್ವಾವಲಂಬಿಗಳನ್ನಾಗಿ ಮಾಡಿ, ಅವರು ಇತರರಿಗೆ ಸಹಾಯಕರಾಗುವಂತೆ ಮಾಡುವುದು.

ಮೂರನೆಯದಾಗಿ ಮನುಷ್ಯನಲ್ಲಿ ಹುದುಗಿರುವ ಆಧ್ಯಾತ್ಮಿಕತೆಯನ್ನು ತಿಳಿಸಿಕೊಡುವುದು. ಭಜನೆ, ಪ್ರವಚನ, ಆಧ್ಯಾತ್ಮಿಕ ಶಿಬಿರಗಳ ಮೂಲಕ ಧಾರ್ಮಿಕ ವಿಚಾರಗಳನ್ನು ತಿಳಿಸುವುದು. ತನ್ಮೂಲಕ ಮನುಷ್ಯನು ಶಾರೀರಿಕ ಅಗತ್ಯಗಳನ್ನು ಮೀರಿ ಹೋಗುವಂತೆ ಮಾಡುವುದು.

ಈ ಮೂರೂ ಹಂತದ ಸೇವೆಗಳು ರಾಮಕೃಷ್ಣ ಮಹಾಸಂಘದ ಕಾರ್ಯಪ್ರಣಾಳಿಗಳಾಗಿವೆ. ಇಂದು ಅದರಿಂದ ಸ್ಫೂರ್ತಿ ಪಡೆದು ಅನೇಕ ಸಂಪ್ರದಾಯಸ್ಥ ಮಠಗಳೂ ಸಹ ಶಿಕ್ಷಣ, ವೈದ್ಯಕೀಯ ಮುಂತಾದ ಹಲವು ವಿಧವಾದ ಸೇವೆಯನ್ನು ಮಾಡುತ್ತಿರುವುದು ಅತ್ಯಂತ ಹೆಮ್ಮೆಯ ವಿಚಾರವಾಗಿದೆ.

ಇಂದು ಈ **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಎಂಬ ಆದರ್ಶ ಕೇವಲ ಸಂನ್ಯಾಸಿಗಳ ಪಾಲಿಗೆ ಮಾತ್ರ ಮೀಸಲಾಗಿಲ್ಲ. ಅನೇಕ ಗೃಹೀಭಕ್ತರೂ ಸಹ ಈ ಧ್ಯೇಯ ವಾಕ್ಯವನ್ನು ಪಾಲಿಸುತ್ತಾ ಸಮಾಜದ ಸೇವೆಯ ಜೊತೆಜೊತೆಗೆ ಆಧ್ಯಾತ್ಮಿಕ ಸಾಧನೆಯನ್ನೂ ಮಾಡುತ್ತಿರುವುದು ಕಂಡುಬರುತ್ತಿದೆ. ಮುಖ್ಯವಾಗಿ ಉನ್ನತ ಅಧಿಕಾರಿಗಳು, ರಾಜಕಾರಣಿಗಳು, ಶ್ರೀಮಂತರು ಈ ಆದರ್ಶವನ್ನು ಅರಿತು ಆಚರಣೆಗೆ ತಂದಲ್ಲಿ ಭ್ರಷ್ಟಾಚಾರವೇ ಮೊದಲಾದ ಸಾಮಾಜಿಕ ಪಿಡುಗುಗಳು ಕೊನೆಗಾಣುತ್ತವೆ. ಇದನ್ನು ಹೆಚ್ಚು ಹೆಚ್ಚು ಜನರು ಅರಿತು ಪಾಲಿಸತೊಡಗಿದರೆ ಮನುಷ್ಯಕುಲದಲ್ಲಿ ಶಾಂತಿ, ಆನಂದಗಳು ಎಲ್ಲರಿಗೂ ಲಭ್ಯವಾಗದೆ ಇರಲಾರವು. ಒಟ್ಟಿನಲ್ಲಿ ಸ್ವಾಮಿ ವಿವೇಕಾನಂದರ ಈ ಧ್ಯೇಯವಾಕ್ಯವು ರಾಮಕೃಷ್ಣ ಮಹಾಸಂಘದ ಆದರ್ಶ ಮಾತ್ರವಲ್ಲ, ಎಲ್ಲ ಜನರೂ ತಪ್ಪದೆ ಪಾಲಿಸಬೇಕಾದ ಜೀವನಸೂತ್ರವೂ ಹೌದು.





# ರಾಮಕೃಷ್ಣ ಮಹಾಸಂಘದ ವೈದ್ಯಕೀಯ ಕಾರ್ಯ

ಪ್ರವ್ರಾಜಿಕಾ ಪರಮಪ್ರಾಣಾ

**ರಾಮಕೃಷ್ಣ ಮಹಾಸಂಘದ ಸೇವಾಕಾರ್ಯಗಳಲ್ಲಿ ವೈದ್ಯಕೀಯ ಸೇವೆಯು ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಈ ಕ್ಷೇತ್ರದಲ್ಲಿ ಮಹಾಸಂಘವು ಒಂದು ಶತಮಾನಕ್ಕೂ ಹೆಚ್ಚಿನ ಕಾಲದ ಸಮೃದ್ಧ ಅನುಭವವನ್ನು ಹೊಂದಿದೆ. ನಾಡಿನಾದ್ಯಂತ ಹಬ್ಬಿರುವ ಇದರ ವೈದ್ಯಕೀಯ ಸೌಲಭ್ಯಗಳು ಆದಿವಾಸಿಗಳು, ನಿಮ್ನವರ್ಗದವರೂ ಸೇರಿ ಲಕ್ಷಾಂತರ ಮಂದಿಯ ಜೀವನಾಡಿಯಾಗಿದೆ.**

**ಈ ವೈದ್ಯಕೀಯ ಸೇವೆಯ ಸೋದಾಹರಣ ಪರಿಚಯವನ್ನು ಮಾಡಿಕೊಟ್ಟಿರುವ ಪೂಜ್ಯ ಮಾತಾಜಿಯವರು ದಕ್ಷಿಣೇಶ್ವರದಲ್ಲಿರುವ ಶ್ರೀಶಾರದಾಮಠದ ಮುಖ್ಯ ಕೇಂದ್ರದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಉತ್ತಮ ಬರಹಗಾರರಾಗಿರುವ ಇವರ ಹಲವಾರು ಲೇಖನಗಳು ಈ ಪತ್ರಿಕೆಯಲ್ಲಿ ಈಗಾಗಲೇ ಪ್ರಕಟವಾಗಿವೆ.**

ಚಿಕಿತ್ಸೆಯನ್ನು ಪಡೆಯಲು ಅವಕಾಶವಿಲ್ಲದ ಸಾಧಾರಣ ಜನರ ದುಃಖ ಕಷ್ಟಗಳನ್ನು ನಿವಾರಿಸುವ ಉದ್ದೇಶದಿಂದ ರಾಮಕೃಷ್ಣ ಸಂಘದ ವೈದ್ಯಕೀಯ ಕಾರ್ಯಗಳು ಆರಂಭವಾದವು. ಇವುಗಳ ಮೂಲಪ್ರೇರಣೆ ಸ್ವಾಮಿ ವಿವೇಕಾನಂದರೇ. ರೋಗಿಗಳ ಸೇವೆ, ಶುಶ್ರೂಷೆ ಮಾಡುತ್ತಿದ್ದ ಸ್ವಾಮೀಜಿಯ ಶಿಷ್ಯರನ್ನು ಹರಿದ್ವಾರ ಹೃಷಿಕೇಶಗಳ ಸಾಧುಸಮಾಜ ತಮ್ಮ ಬಳಿ ಸೇರಿಸದೆ, 'ಭಂಗಿ ಸಾಧುಗಳು' ಎಂದು ದೂರವೇ ಇಟ್ಟಿತ್ತು. ಇಂಥ ಕಾಲದಲ್ಲಿ ಮೇಲೆದ್ದು ಬಂದ ವಾರಾಣಸಿ, ಕನ್‌ಖಲ್, ಬೃಂದಾವನಗಳ ಸೇವಾಶ್ರಮಗಳು ಮುಂದೆ ದೇಶದ ವಿಭಿನ್ನ ಜಾಗಗಳಲ್ಲಿ ಆರಂಭವಾದ ವೈದ್ಯಕೀಯ ಕಾರ್ಯಗಳಿಗೆ ಆದರ್ಶ ಮಾದರಿಯಾಗಿವೆ. ರಾಮಕೃಷ್ಣರ ಅಂತರಂಗ ಶಿಷ್ಯರಾದ ಸ್ವಾಮಿ ಬ್ರಹ್ಮಾನಂದರು, ಶಿವಾನಂದರು, ತುರೀಯಾನಂದರು ಮುಂತಾದವರು ಈ ಸೇವಾಶ್ರಮಗಳಲ್ಲಿ ನೆಲೆಸಿ, ಅಲ್ಲಿಯ ಕೆಲಸಕಾರ್ಯಗಳಿಗೆ ಪ್ರೋತ್ಸಾಹ ನೀಡಿ, ಕೆಲಸ ಹಾಗೂ ಭಗವಂತನ ಆರಾಧನೆ– ಎರಡೂ ಒಂದಕ್ಕೊಂದು ಹೇಗೆ ಸಹಾಯಕವಾಗಬಹುದೆಂದು ತೋರಿಸಿದರು. ಇದೇ ಇತರ ಆಸ್ಪತ್ರೆಗಳಿಗೂ ರಾಮಕೃಷ್ಣ ಸಂಘದ ಆಸ್ಪತ್ರೆಗಳಿಗೂ ಇರುವ ವ್ಯತ್ಯಾಸ. ಶ್ರೀರಾಮಕೃಷ್ಣರು ಹೇಳಿದ, 'ಶಿವಜ್ಞಾನದಲ್ಲಿ ಜೀವಿಗಳ ಸೇವೆ' ಎಂಬ ಮಾತಿನ ತಳಪಾಯದ ಮೇಲೆಯೇ, ಸ್ವಾಮೀಜಿಯ ಪ್ರೇರಣೆಯಿಂದ ಆರಂಭವಾದ ಸೇವಾಶ್ರಮಗಳು ನೆಲೆನಿಂತಿವೆ. ಈ ಆದರ್ಶವನ್ನಿಟ್ಟುಕೊಂಡು ಸ್ವಾಮಿಜಿಯ ಶಿಷ್ಯರಾದ ಸ್ವಾಮಿ ಕಲ್ಯಾಣಾನಂದರು ಹರಿದ್ವಾರದ ಕನ್‌ಖಲ್‌ನಲ್ಲಿ ವೈದ್ಯಕೀಯ ಸೇವೆಯ ಕೆಲಸಗಳನ್ನು ಮೊಟ್ಟ ಮೊದಲ ಬಾರಿಗೆ ಆರಂಭಿಸಿದರು.

ಇದೇ ಸಮಯದಲ್ಲಿ ಕಾಶಿಯಲ್ಲಿ ಕೆಲವರು ಯುವಕರು ಒಟ್ಟಾಗಿ ಶ್ರೀರಾಮಕೃಷ್ಣರು ಮತ್ತು ಸ್ವಾಮೀಜಿಯ ಜೀವನ ಮತ್ತು ಉಪದೇಶಗಳನ್ನು ತಮ್ಮ ಜೀವನಗಳಲ್ಲಿ ಅಳವಡಿಸಿಕೊಂಡು, ಆಧ್ಯಾತ್ಮಿಕ ಜೀವನದಲ್ಲಿ ಮುಂದುವರೆಯುವ ಪ್ರಯತ್ನದಲ್ಲಿ ತೊಡಗಿದ್ದರು. ೧೯೦೦ರ ಜೂನ್ ೧೨ರ ಸಂಜೆ ಚಾರುಚಂದ್ರ ಎಂಬ ಯುವಕ ಕಾಶಿಯ ತನ್ನ ಮನೆಯಲ್ಲಿ ಕುಳಿತು, 'ಉದ್ಬೋಧನ' ಪತ್ರಿಕೆಯ ಪುಟಗಳನ್ನು ತಿರುಗಿಸುತ್ತಿದ್ದಾಗ ಅವನ ಕಣ್ಣಿಗೆ ಸ್ವಾಮಿ ವಿವೇಕಾನಂದರು ಬರೆದ 'ನನ್ನ ಗೆಳೆಯನಿಗೆ' ಎಂಬ ಕವನ ಬಿದ್ದಿತು. ಆ ಪದ್ಯದ ಸಾಲುಗಳು ಹೀಗಿದ್ದವು:

**ಆ ಉನ್ನತ ಬ್ರಹ್ಮ, ಇಲ್ಲಿ ಹೊರಳುವ ಕೀಟ**
**ಮತ್ತೆ ಹರಡಿ ಹಬ್ಬಿರುವ ಅಣು ಪರಮಾಣುಗಳ ರಾಶಿ**
**ಎಲ್ಲೆಲ್ಲೂ ಇರುವನೊಬ್ಬನೇ ಆ ದೇವ ದೇವ**
**ಎಲ್ಲವನ್ನೂ ಆವರಿಸಿ ನಿಂತಿರುವ ಪ್ರೇಮಮಯ**
**ಓ ಗೆಳೆಯಾ, ಅರ್ಪಿಸು ನಿನ್ನ ತನುಮನ ಪ್ರಾಣಗಳ**
**ಈ ಎಲ್ಲರ ಚರಣ ತಲದಿ**
**ಹುಡುಕದೆ ಈಶ್ವರನ ಅಲ್ಲಿ ಇಲ್ಲಿ**

ಚಾರುಚಂದ್ರನ ಮನಸ್ಸಿನಲ್ಲಿ ಹೊಸ ಭಾವವೊಂದರ ಸಂಚಾರವಾಯಿತು. ಅವನು ತನ್ನ ಸ್ನೇಹಿತ ಯಾಮಿನಿ ರಂಜನನ ಬಳಿ ಓಡಿಹೋಗಿ ಕವಿತೆಯ ಅರ್ಥವನ್ನು ವಿವರಿಸುತ್ತ ಹೇಳಿದನು, "ಸ್ವಾಮೀಜಿ ಏನು ಹೇಳುತ್ತಿದ್ದಾರೆ ಕೇಳು... ನಮ್ಮ ಸುತ್ತಮುತ್ತಲೂ ಇರುವ ರೋಗಿಗಳು, ದುಃಖಿಗಳು, ದರಿದ್ರರೇ ನಮ್ಮ ದೇವರು, ನಮ್ಮ ಶಿವ."

ವಾರಾಣಸಿ ಭಾರತದ ಸುಪ್ರಸಿದ್ಧ ತೀರ್ಥಕ್ಷೇತ್ರ. ದೇಶದ ವಿವಿಧ ಭಾಗಗಳಿಂದ ಜನ ಇಲ್ಲಿಗೆ ಬರುತ್ತಿದ್ದರು. ಚಿಕಿತ್ಸೆಯ ಅಭಾವದಿಂದ ನರಳುತ್ತಿರುವ, ದೇವಸ್ಥಾನಗಳ ಬಾಗಿಲಿನಲ್ಲಿ ಓಡಾಡುವ ಶಕ್ತಿಯಿಲ್ಲದೆ ಬಿದ್ದುಕೊಂಡಿರುವ ಜನಗಳನ್ನು ಚಾರು ಚಂದ್ರ ಮತ್ತು ಆತನ ಸ್ನೇಹಿತರು ದಿನವೂ ನೋಡುತ್ತಿದ್ದರು.

ಚಾರುಚಂದ್ರ ಕಲ್ಕತ್ತದ ರಿಪ್ಪನ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಿದ್ದನು. ಶ್ರೀರಾಮಕೃಷ್ಣರ ಜೀವನದಿಂದ ಆಕರ್ಷಿತನಾದ ಈ ಯುವಕ ತನ್ನ ತಂದೆತಾಯಿಯರ ಸೇವೆ ಮತ್ತು ಸಾಧನೆ, ಭಜನೆಗಳಿಂದ ಜೀವನವನ್ನು ಸಾರ್ಥಕಗೊಳಿಸುವ ಉದ್ದೇಶ ದಿಂದ ಕಾಶಿಗೆ ಬಂದಿದ್ದನು. ಕಾಶಿಯಲ್ಲಿ ತಪಸ್ಸಿನಲ್ಲಿ ನಿರತ ರಾಗಿದ್ದ ಸ್ವಾಮಿ ನಿರಂಜನಾನಂದರ ಸತ್ಸಂಗದಿಂದ ಚಾರು ಚಂದ್ರ ಮತ್ತು ಆತನ ಸ್ನೇಹಿತರ ತ್ಯಾಗ, ವೈರಾಗ್ಯಭಾವಗಳು ಮತ್ತೂ ಗಾಢವಾದವು. ಈ ಯುವಕರಲ್ಲಿ ಚಾರುಚಂದ್ರ (ಸ್ವಾಮಿ ಶುಭಾನಂದ), ಕೇದಾರನಾಥ (ಸ್ವಾಮಿ ಅಚಲಾನಂದ) ಹರಿದಾಸ್ (ಸದಾಶಿವಾನಂದ) ಮುಂದೆ ರಾಮಕೃಷ್ಣ ಮಠದ ಸಂನ್ಯಾಸಿಗಳಾದರು. ಹರಿದ್ವಾರದಲ್ಲಿ ವೈದ್ಯಕೀಯ ಸೇವೆಯಲ್ಲಿ ತೊಡಗಿರುವ, ಸ್ವಾಮಿ ವಿವೇಕಾನಂದರ ಶಿಷ್ಯರಾದ ಸ್ವಾಮಿ ಕಲ್ಯಾಣಾನಂದರನ್ನು ಭೇಟಿಯಾದ ಮೇಲೆ ಈ ಯುವಕರಲ್ಲಿ ಸೇವೆಯ ಭಾವನೆ ಮತ್ತೂ ಹೆಚ್ಚಾಯಿತು.

ಸ್ವಾಮೀಜಿಯ ಕವಿತೆಯನ್ನು ಕುರಿತು ಚಾರುಚಂದ್ರ ಹೇಳಿದ ಮಾತುಗಳು ಯಾಮಿನಿ ರಂಜನನ ಮನದಾಳವನ್ನು ಹೊಕ್ಕವು. ಮರುದಿನ ೧೯೦೦ರ ಜೂನ್ ೧೩ರ ಬೆಳಗಿನ ಜಾವ ಯಾಮಿನಿ ಎಂದಿನಂತೆ ಗಂಗಾಸ್ನಾನ ಮಾಡಲೆಂದು ಕಾಶಿಯ ಗಲ್ಲಿಯಲ್ಲಿ ಹೋಗುತ್ತಿರುವಾಗ, ಮುದುಕಿಯೊಬ್ಬಳ ನರಳಾಟ ಅವನ ಕಿವಿಗೆ ಬಿದ್ದಿತು. ಯಾಮಿನಿ ಹಸಿವು ರೋಗಗಳಿಂದ ಕಂಗಾಲಾಗಿ ಹೋಗಿದ್ದ ಆ ಮುದುಕಿಯ ಬಳಿ ಹೋಗಿ ಆಕೆಯನ್ನು ಎತ್ತಿ, ಹತ್ತಿರದ ಒಂದು ಮನೆಯ ವರಾಂಡದಲ್ಲಿ ಮಲಗಿಸಿದನು. ಗಂಗೆಯ ಘಾಟಿನ ಬಳಿ ಸಿಕ್ಕ ಒಬ್ಬ ವ್ಯಕ್ತಿಯಿಂದ ನಾಲ್ಕು ಆಣೆಯನ್ನು ಬೇಡಿ, ಆಹಾರವನ್ನು ಕೊಂಡು, ಆಕೆಗೆ ತಿನ್ನಿಸಿದನು. ಹತ್ತಿರದಲ್ಲೆಲ್ಲೂ ಆಸ್ಪತ್ರೆ ಇಲ್ಲದ್ದರಿಂದ ತನ್ನ ಸ್ನೇಹಿತರ ಸಹಾಯದಿಂದ, ವೇಲುಪುರ ಎಂಬ ಜಾಗದಲ್ಲಿದ್ದ ಆಸ್ಪತ್ರೆಗೆ ಕರೆದುಕೊಂಡು ಹೋದನು. ಹೀಗೆ ಆರಂಭವಾದ ಈ ಯುವಕರ ಕೆಲಸವೇ ಕಾಶಿಯ ರಾಮಕೃಷ್ಣ ಮಿಷನ್ ಸೇವಾಶ್ರಮದ ಮೂಲವಾಗಿದೆ. ಅನಂತರ ಈ ಯುವಕರು ರಸ್ತೆಯಲ್ಲಿ ಈ ರೀತಿ ಸಿಕ್ಕ ರೋಗಿಗಳನ್ನು ಕೇದಾರನಾಥನ ಮನೆಯ ಒಂದು ಕೋಣೆಯಲ್ಲಿ ಮಲಗಿಸಿ ತಾವೇ ಚಿಕಿತ್ಸೆಯನ್ನು ಮಾಡಲಾರಂಭಿಸಿದರು. ಹಣವನ್ನು ಸಂಗ್ರಹಿಸಿ ರೋಗಿಗಳಿಗೆ



ಬೇಕಾದ ಹಾಸಿಗೆ, ಪಥ್ಯ ಔಷಧಿಗಳನ್ನು ತಂದರು. ೧೯೦೦ರ ಸೆಪ್ಟೆಂಬರ್ ತಿಂಗಳ ೧೩ನೇ ತಾರೀಖು, ೫ ರೂ. ತಿಂಗಳ ಬಾಡಿಗೆ ಕೊಟ್ಟು ಒಂದು ಮನೆಯನ್ನು ತೆಗೆದುಕೊಂಡರು. ರೋಗಿಗಳ ಸಂಖ್ಯೆ ಹೆಚ್ಚಾದಂತೆ ಈ ಮನೆಯನ್ನೂ ಬದಲಿಸಬೇಕಾಯಿತು. ಚಾರುಚಂದ್ರ ಮತ್ತು ಅವನ ಸ್ನೇಹಿತರು ತಮ್ಮ ಸಂಘಕ್ಕೆ 'Poor mens' Relief Association' ಎಂದು ಹೆಸರಿಟ್ಟು ಕೊಂಡರು. ಆರಂಭವಾದ ೧೮ ತಿಂಗಳೊಳಗೆ ಈ ಸಂಘದಿಂದ ೬೭೪ ರೋಗಿಗಳು ಚಿಕಿತ್ಸೆಯನ್ನು ಪಡೆದರು. ೧೯೦೨ರ ಫೆಬ್ರವರಿಯಲ್ಲಿ ಕಾಶಿಗೆ ಬಂದ ಸ್ವಾಮಿ ವಿವೇಕಾನಂದರು ಈ ಹುಡುಗರ ಕೆಲಸವನ್ನು ನೋಡಿ ಅತ್ಯಂತ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಸ್ವಾಮೀಜಿ ಅವರೆಲ್ಲರಿಗೆ ಹೇಳಿದರು: "ಈ ಸೇವಾಧರ್ಮದ ಸಹಾಯದಿಂದ ಸಕಲ ಜೀವಿಗಳೊಂದಿಗೆ ಈಶ್ವರನ ಐಕ್ಯತೆ ಇರುವುದು ಅನುಭವಕ್ಕೆ ಬರುತ್ತದೆ. ನಿಮ್ಮ ಕೆಲಸಗಳಲ್ಲಿ ಒಂದೇ ಒಂದು ಕೊರತೆ ನನಗೆ ಕಾಣಿಸುತ್ತಿದೆ. ನೀವು ಸೇವೆಯ ಭಾವವನ್ನಿಟ್ಟುಕೊಂಡು ಕೆಲಸ ಮಾಡುತ್ತಿಲ್ಲ. ನಿಮ್ಮ ಕೆಲಸಗಳಿಗೆ ಮುಖ್ಯ ಪ್ರೇರಣೆಯಾಗಿರುವುದು ದಯೆ ಹಾಗೂ ಕರುಣೆ. ನೆನಪಿನಲ್ಲಿಟ್ಟುಕೊಳ್ಳಿ, ದಯೆ ತೋರಿಸುವ ಅಧಿಕಾರ ನಿಮಗಾರಿಗೂ ಇಲ್ಲ. ಭಗವಂತನೊಬ್ಬನೇ ದಯೆ ತೋರಿಸಬಲ್ಲನು. ದಯೆಯನ್ನು ತೋರಿಸುವವನೊಳಗೆ ಅಹಂಕಾರ ಇದ್ದೇ ಇರುತ್ತದೆ. ಬೇರೆಯವರು ನಮಗಿಂತ ಹೀನ ಸ್ಥಿತಿಯಲ್ಲಿದ್ದಾರೆ ಎಂಬ ಭಾವನೆಯೇ ದಯೆ, ಕರುಣೆಗಳ ಮೂಲ, ದಯೆ ಅಲ್ಲ. ಸೇವೆಯೇ ನಿಮ್ಮ ಜೀವನದ ಆದರ್ಶ ವಾಗಲಿ... ನಿಮ್ಮ ಸಂಘದ ಹೆಸರನ್ನು 'Home of Service' – ಸೇವಾಶ್ರಮ' ಎಂದಿಡಿ."

೧೯೦೩ರಲ್ಲಿ ಈ ಸಂಸ್ಥೆ ರಾಮಕೃಷ್ಣ ಮಿಷನ್ನಿಗೆ ಸೇರಿತು. ೧೯೧೨ರಲ್ಲಿ ಕಾಶಿಗೆ ಬಂದ ಶ್ರೀಮಾತೆ ಶಾರದಾದೇವಿಯವರು ಸೇವಾಶ್ರಮದ ಕೆಲಸಗಳನ್ನು ನೋಡಿ, "ಶ್ರೀರಾಮಕೃಷ್ಣರು ಇಲ್ಲಿಯ ಎಲ್ಲಾ ಕೆಲಸಗಳ ನಡುವೆ ವಿರಾಜಮಾನರಾಗಿದ್ದಾರೆ" ಎಂದು ಆನಂದವನ್ನು ವ್ಯಕ್ತಪಡಿಸಿದರು. ೧೯೧೮ರಲ್ಲಿ ಮಹಿಳಾ ರೋಗಿಗಳಿಗಾಗಿ ಪ್ರತ್ಯೇಕವಾದ ಕಟ್ಟಡ ನಿರ್ಮಾಣವಾಯಿತು. ಸ್ವಾಮಿ ಬ್ರಹ್ಮಾನಂದರ ಆದೇಶದಂತೆ ನಿವೇದಿತಾ ಸ್ಕೂಲಿನ ಸೋದರಿ ಸುಧೀರಾ ನರ್ಸ್‌ಗಳ ತರಬೇತಿಗಾಗಿ ಪರಿಶ್ರಮಿ




ಸಿದರು. ಕ್ರಮೇಣ Mobile Medical Unit, ಆಪರೇಷನ್ ಥಿಯೇಟರ್ ಇತ್ಯಾದಿಗಳು ಈ ಆಸ್ಪತ್ರೆಯ ವಿಶಾಲತೆಯಲ್ಲಿ ಸೇರಿಕೊಂಡವು. ಸ್ತ್ರೀ, ಪುರುಷರಿಗಾಗಿ ವೃದ್ಧಾಶ್ರಮಗಳು ಆರಂಭವಾದವು. ೧೯೬೫ರಲ್ಲಿ, ಪ್ರತ್ಯೇಕವಾದ ಕಣ್ಣಿನ ಆಸ್ಪತ್ರೆಯ ಸ್ಥಾಪನೆಯಾಯಿತು. ಸೇವಾಶ್ರಮಕ್ಕೆ ೧೦೦ ವರ್ಷಗಳಾದಾಗ, ೨೦೦೦ನೇ ಇಸವಿಯಲ್ಲಿ ಪೂಜ್ಯ ಸ್ವಾಮಿ ಆತ್ಮಸ್ಥಾನಂದರು ಹೀಗೆ ಹೇಳಿದರು: "...ನೂರು ವರ್ಷಗಳ ಹಿಂದೆ ನಾಲ್ಕು ಆಣೆ ಭಿಕ್ಷೆಯಿಂದ ಈ ಆಸ್ಪತ್ರೆ ಆರಂಭವಾಯಿತೆಂದು ಈಗ ಯೋಚಿಸಿದರೆ ಆಶ್ಚರ್ಯವಾಗುತ್ತದೆ. ಸ್ವಾಮಿ ಶುಭಾನಂದ (ಚಾರು ಚಂದ್ರ) ಮತ್ತು ಅಚಲಾನಂದರ (ಕೇದಾರನಾಥ) ತ್ಯಾಗ ಮತ್ತು ಸೇವೆಯ ಮೇಲೆ ಈ ಆಸ್ಪತ್ರೆ ಇಂದಿಗೂ ಸದೃಢವಾಗಿ ನಿಂತಿದೆ."

ಇದೇ ರೀತಿ ಸ್ವಾಮಿ ಕಲ್ಯಾಣಾನಂದರು ಸ್ವಾಮೀಜಿಯ ಆದೇಶದಂತೆ ಹರಿದ್ವಾರ, ಹೃಷೀಕೇಶಗಳಲ್ಲಿ ಚಿಕಿತ್ಸೆಯಿಲ್ಲದೆ ನರಳಿ ಸಾಯುತ್ತಿದ್ದ ಸಂನ್ಯಾಸಿಗಳ ಹಾಗೂ ತೀರ್ಥಯಾತ್ರಿಗಳ ಸೇವೆಗೆ ಇಳಿದರು. ೧೯೦೧ರ ಜೂನ್ ತಿಂಗಳಲ್ಲಿ ಅವರು ಸ್ವಾಮೀಜಿ ಕೊಟ್ಟ ಹಣದಿಂದ ಹರಿದ್ವಾರದ ಬಳಿಯ ಕನ್‌ಖಲಿನಲ್ಲಿ ಕೆಲಸ ವನ್ನು ಆರಂಭಿಸಿದರು. ಮೂರು ರೂಪಾಯಿಗಳಿಗೆ ಎರಡು ಕೋಣೆಗಳನ್ನು ಬಾಡಿಗೆಗೆ ತೆಗೆದುಕೊಂಡರು. ತಾವು ಭಿಕ್ಷೆ ಬೇಡಿ ಉಣ್ಣುತ್ತಿದ್ದರೂ, ಸಿಕ್ಕ ದುಡ್ಡಿನಲ್ಲಿ ರೋಗಿಗಳ ಔಷಧ ಮತ್ತು ಪಥ್ಯ ಗಳನ್ನು ಕೊಳ್ಳುತ್ತಿದ್ದರು. ಕನ್‌ಖಲಿನಿಂದ ಹೃಷಿಕೇಶದವರೆಗೂ ಕಲ್ಯಾಣಾನಂದರು ನಡೆದೇ ಓಡಾಡುತ್ತಿದ್ದರು. ೧೯೦೨ರಲ್ಲಿ ಕಲ್ಯಾಣಾನಂದರು ತಮ್ಮ ಕೆಲಸದ ವರದಿಯನ್ನು ಸ್ವಾಮೀಜಿಗೆ ಒಪ್ಪಿಸಲು ಬೇಲೂರು ಮಠಕ್ಕೆ ಬಂದರು. ಸ್ವಾಮೀಜಿ ಅವರಿಗೆ ಹೇಳಿದರು: "ಕಲ್ಯಾಣ್, ನನ್ನ ಕಲ್ಪನೆ ಏನೆಂದು ನಿನಗೆ ಅರ್ಥ ಮಾಡಿಸುತ್ತೇನೆ. ಒಂದು ಕಡೆ ದೇವರ ಮಂದಿರ. ಸಂನ್ಯಾಸಿ ಬ್ರಹ್ಮಚಾರಿಗಳು ಧ್ಯಾನಪ್ರಾರ್ಥನೆಗಳಲ್ಲಿ ಮಗ್ನರಾಗಬೇಕು. ನಂತರ ಇದೇ ಭಾವವನ್ನು ತಮ್ಮ ಕೆಲಸಗಳ ಮಧ್ಯದಲ್ಲೂ ತರಬೇಕು. ವೇದಾಂತ Practical ಆಗಬೇಕು; ಬರಿಯ ಸಿದ್ಧಾಂತದಲ್ಲಿ ನಿಂತರೆ ಯಾವ ಪ್ರಯೋಜನವೂ ಇಲ್ಲ."

ಸ್ವಾಮೀಜಿಯ ಶಿಷ್ಯರಾದ ಸ್ವಾಮಿ ನಿಶ್ಚಯಾನಂದರು ಕಲ್ಯಾಣಾನಂದರಿಗೆ ಸಹಾಯಕರಾಗಿ ಕನ್‌ಖಲ್‌ಗೆ ಬಂದರು. ಇವರಿಬ್ಬರ ಪರಿಶ್ರಮದ ಫಲವೇ ಸುವಿಶಾಲವಾದ ಕನ್‌ಖಲ್‌ನ ರಾಮಕೃಷ್ಣ ಮಿಷನ್ ಆಸ್ಪತ್ರೆ. ಇದು ಉತ್ತರಾಖಂಡ ರಾಜ್ಯ ದಲ್ಲಿಯೇ ನಿಸ್ವಾರ್ಥ ಸೇವೆಗೆ ಉತ್ತಮ ಉದಾಹರಣೆಯಾಗಿದೆ. ಅತ್ಯಂತ ಬಡವರು ಮತ್ತು ಸಂನ್ಯಾಸಿಗಳೇ ಹೆಚ್ಚಾಗಿ ಚಿಕಿತ್ಸೆಗೆ ಬರುತ್ತಿದ್ದುದರಿಂದ ಕಲ್ಯಾಣಾನಂದರು ರೋಗಿಗಳಿಂದ ಒಂದು ಪೈಸೆಯನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಇವರ ಕೆಲಸದ ಹಿರಿಮೆ ಯನ್ನು ಕಂಡು ಸಹಾಯ ಮಾಡಲು ಅನೇಕರು ಮುಂದೆ ಬಂದರು. ೧೯೦೫ರಲ್ಲಿ ಸೇವಾಶ್ರಮ ತನ್ನದೇ ಸ್ವಂತ ಜಮೀನಿಗೆ ಸ್ಥಳಾಂತರಗೊಂಡಿತು.

೧೯೩೪ರಲ್ಲಿ ದಕ್ಷಿಣ ಭಾರತದ ಯುವಕನಾದ ನಾರಾಯಣ ಎನ್ನುವವನು ಸ್ವಾಮಿ ವಿವೇಕಾನಂದರ ಆದರ್ಶದಂತೆ ಜೀವನ ವನ್ನು ನಡೆಸುವ ಇಚ್ಛೆಯಿಂದ ಸ್ವಾಮಿ ಅಖಂಡಾನಂದರನ್ನು ಭೇಟಿ ಮಾಡಿದನು. ಅವರು ಅವನಿಗೆ ಕನ್‌ಖಲ್‌ಗೆ, ಸ್ವಾಮಿ ಕಲ್ಯಾಣಾನಂದರ ಬಳಿ ಹೋಗಲು ಹೇಳಿದರು. ಸ್ವಾಮಿ ಸರ್ವಗತಾನಂದ (ಬ್ರಹ್ಮಚಾರಿ ನಾರಾಯಣ) ಕನ್‌ಖಲ್‌ನ ತಮ್ಮ ನೆನಪುಗಳಲ್ಲಿ ಬರೆಯುತ್ತಾರೆ: "... ಸಂಘಕ್ಕೆ ಹೊಸದಾಗಿ ಸೇರಿದ ಒಬ್ಬ ಬ್ರಹ್ಮಚಾರಿಗೆ ಆಧ್ಯಾತ್ಮಿಕ ಜೀವನದ ಬಗ್ಗೆ ಸರಿಯಾದ ತಿಳುವಳಿಕೆ ಬರಲು ಅತ್ಯಂತ ಅನುಕೂಲವಾಗಿತ್ತು, ಕನ್‌ಖಲ್ ಸೇವಾಶ್ರಮದ ವಾತಾವರಣ... ಒಮ್ಮೆ ನನಗೆ ಆಸ್ಪತ್ರೆಯಲ್ಲಿ ರಾತ್ರಿಯ ಡ್ಯೂಟಿ ಮಾಡಬೇಕಾಗಿ ಬಂದಿತು. ಕಲ್ಯಾಣಾನಂದರು ರಾತ್ರಿ ರೋಗಿಗಳನ್ನು ನೋಡಲು ಬಂದರು. ನಾನೂ ಅವರ ಹಿಂದೆ ಎಲ್ಲಾ ಕೋಣೆಗಳಿಗೂ ಹೋದೆ. ಕೊನೆಯಲ್ಲಿ ಅವರು ಒಂದು ಕೋಣೆಯ ಮುಚ್ಚಿದ ಬಾಗಿಲಿನೆದುರು ನಿಂತರು... ಆ ದಿನವೇ ತೀರಿಕೊಂಡಿದ್ದ ಒಬ್ಬ ರೋಗಿಯ ಶರೀರವನ್ನು ಆ ಕೋಣೆಯಲ್ಲಿ ಇಡಲಾಗಿತ್ತು. ಚಿಕ್ಕಂದಿನಿಂದಲೂ ಶವವನ್ನು ಕಂಡರೆ ನನಗೆ ಭಯವಾಗುತ್ತಿತ್ತು. ಆಸ್ಪತ್ರೆಯಲ್ಲಿ ಆ ಕೋಣೆಯ ಬಳಿ ನಾನು ಹೋಗುತ್ತಿರಲಿಲ್ಲ. ಈಗ ಉಪಾಯವಿಲ್ಲದೆ ನಾನು ಕಲ್ಯಾಣಾನಂದರ ಹಿಂದೆ ಆ ಕೋಣೆಯೊಳಗೆ ಹೋದೆ. ಅವರು ಮಲಗಿಸಿದ್ದ ಶವದ ಬಳಿ ಹೋಗಿ, ಮುಖದ ಮೇಲಿನ ಬಟ್ಟೆಯನ್ನು ಸರಿಸಿ ನೋಡಿದರು. ನಂತರ ನನ್ನತ್ತ ತಿರುಗಿ ಹೇಳಿದರು, 'ಹೆಣವನ್ನು ನೋಡಲು ಜನರು ಹೆದರಿಕೊಳ್ಳುತ್ತಾರೆ. ಈ ಜಗತ್ತಿನಲ್ಲಿ ಯಾರಿಗೂ ಏನೂ ತೊಂದರೆ ಕೊಡದಿರುವುದು ಏನಾದರೂ ಇದ್ದರೆ ಅದೇ ಈ ಶವ... ಜನ ಇದನ್ನು ನೋಡಿ ಹೆದರಿಕೊಳ್ಳುತ್ತಾರೆ !' ಎನ್ನುತ್ತಾ ಅಲ್ಲಿಂದ ಹೊರಗೆ ಹೋದರು. ಹೆಣದ ಮೇಲಿನ ಬಟ್ಟೆಯನ್ನು ಮೊದಲಿನಂತೆಯೇ ಮುಚ್ಚುವ ಕೆಲಸ ನನ್ನ ಪಾಲಿಗೆ ಬಂತು. ನನಗೀಗ ಸ್ವಲ್ಪವೂ ಹೆದರಿಕೆ ಆಗುತ್ತಿರಲಿಲ್ಲ... ಅವರು ಕೊಡುತ್ತಿದ್ದ ಶಿಕ್ಷಣವೇ ಹೀಗಿತ್ತು. ಒಮ್ಮೆಯಾದರೂ ಹೇಳಲಿಲ್ಲ, 'ಎಂಥ ಹೆದರುಪುಕ್ಕನೋ ನೀನು' ಎಂದು.

"ನಾನು ಆಸ್ಪತ್ರೆಯ ಲೆಕ್ಕಪತ್ರವನ್ನು ನೋಡಿಕೊಳ್ಳುತ್ತಿದ್ದೆ. ಒಬ್ಬ ವ್ಯಕ್ತಿ ಪ್ರತಿತಿಂಗಳೂ ಕಾಣಿಕೆ ಕೊಡುವುದಾಗಿ ಹೇಳಿದ್ದವನು, ಕೆಲವು ತಿಂಗಳಿಂದ ಹಣವನ್ನು ಕೊಡುವುದನ್ನು ನಿಲ್ಲಿಸಿದ್ದನು. ನಾನು ಕಲ್ಯಾಣಾನಂದರನ್ನು, 'ಆಗಾಗ ಮಾರುಕಟ್ಟೆಯಲ್ಲಿ ಅವನನ್ನು ನೋಡುತ್ತೇನೆ. ದುಡ್ಡಿನ ವಿಚಾರ ಅವನಿಗೆ ನೆನಪಿಸಲೆ?' ಎಂದು ಕೇಳಿದೆ. ಅವರೆಂದರು, 'ಹಣವನ್ನು ಸಂಗ್ರ ಹಿಸಲು ಅಖಂಡಾನಂದರು ನಿನ್ನನ್ನು ಇಲ್ಲಿಗೆ ಕಳುಹಿಸಿದರೆ?'

ನಾನು 'ಇಲ್ಲ' ಎಂದೆ. 'ಹಾಗಿದ್ದರೆ ನಿನಗೇಕೆ ಅದರ ಚಿಂತೆ? ಆಧ್ಯಾತ್ಮಿಕ ಜೀವನ ನಡೆಸಲು ಇಲ್ಲಿಗೆ ಬಂದೆ. ಆ ಕಡೆಯೇ ನಿನ್ನ ಮನಸ್ಸಿರಲಿ... ರಾಮಕೃಷ್ಣರ ಕೃಪೆಯಿಂದ ಹಣ ಬಂದರೆ ಅದನ್ನು ಸರಿಯಾಗಿ ಉಪಯೋಗಿಸು... ನಿಷ್ಠೆಯಿಂದ ಕೆಲಸ ಮಾಡು. ಹಣದತ್ತ, ಕಟ್ಟಡಗಳನ್ನು ಕಟ್ಟುವತ್ತ ಮನಸ್ಸು ಕೊಡಬೇಡ.'

"ಆಸ್ಪತ್ರೆಯ ಅಭಿವೃದ್ಧಿಗಾಗಿ ಹಣಕ್ಕಾಗಿ ಮನವಿಯನ್ನು ಮಾಡಬೇಕಾಯಿತು, ನಿಜ. ಆದರೆ ಹೊಸ ಬ್ರಹ್ಮಚಾರಿ ತನ್ನ ಜೀವನದ ಉದ್ದೇಶವನ್ನು ಮರೆಯದಿರಲಿ ಎನ್ನುವತ್ತ ಕಲ್ಯಾಣಾನಂದರು ಯಾವಾಗಲೂ ಗಮನಕೊಡುತ್ತಿದ್ದರು."

ಸೇವಾಶ್ರಮಕ್ಕೆ ಬಂದ ಹಣದಲ್ಲಿ ತಾವು ಊಟ ಮಾಡ ಬಾರದೆಂದು, ಸೇವಾಶ್ರಮದಲ್ಲಿ ಕೆಲಸ ಮಾಡುತ್ತಿದ್ದ ಸಂನ್ಯಾಸಿ, ಬ್ರಹ್ಮಚಾರಿಗಳು ಮನೆ ಮನೆಗೆ ಹೋಗಿ ಭಿಕ್ಷೆ ಬೇಡಿ ಆಹಾರವನ್ನು ಸ್ವೀಕರಿಸುತ್ತಿದ್ದರು. ೧೯೨೧ರಲ್ಲಿ ಸ್ವಾಮಿ ಶಾರದಾನಂದರು ದಿನೇ ದಿನೇ ಬೆಳೆಯುತ್ತಿದ್ದ ಆಸ್ಪತ್ರೆಯ ಕೆಲಸಗಳಿಗೆ ಇದರಿಂದ ತೊಂದರೆಯಾಗುತ್ತಿರುವುದೆಂದು ಅರಿವು ಮಾಡಿಕೊಟ್ಟು, ಭಿಕ್ಷೆಗೆ ಹೋಗುವುದನ್ನು ನಿಲ್ಲಿಸಿದರು.

ಈಗ ಕನ್‌ಖಲಿನ ಸೇವಾಶ್ರಮದಲ್ಲಿ ಸಾವಿರಾರು ರೋಗಿಗಳ ಸೇವೆ ನಡೆಯುತ್ತದೆ. ಕುಂಭಮೇಳದ ಸಮಯದಲ್ಲಿ ಬರುವ ಲಕ್ಷಾಂತರ ಜನಗಳ ಸೇವೆ ಹಾಗೂ ಆಸ್ಪತ್ರೆಯ ಶಿಸ್ತಿನ ವ್ಯವಸ್ಥೆ ಜನರ ಪ್ರಶಂಸೆಗೆ ಕಾರಣವಾಗಿದೆ. ಸುಮಾರು ೫,೫೮,೦೦೦ ಹೊರರೋಗಿಗಳು ಚಿಕಿತ್ಸೆ ಪಡೆಯುತ್ತಿದ್ದಾರೆ. ಅವರಲ್ಲಿ ಕಣ್ಣು ಬೇನೆ ಮತ್ತು ಕ್ಷಯರೋಗವುಳ್ಳ ರೋಗಿಗಳೂ ಸೇರಿದ್ದಾರೆ.

ಮೂರನೇ ಸೇವಾಶ್ರಮ ಬೃಂದಾವನದಲ್ಲಿ ಆರಂಭ ವಾಯಿತು. ಸ್ವಾಮಿ ವಿವೇಕಾನಂದರ ಶರೀರತ್ಯಾಗದ ನಂತರ ಮನಸ್ಸಿನ ಕಷ್ಟವನ್ನು ಮರೆಯಲೆಂದು ಬ್ರಹ್ಮಚಾರಿ ಹರೇಂದ್ರ ನಾಥ ೧೯೦೩ರಲ್ಲಿ ಬೃಂದಾವನಕ್ಕೆ ಬಂದನು. ಇಲ್ಲಿ ಕಾಲಾ ಬಾಬುವಿನ ಕುಂಜ ಎಂಬ ಜಾಗದಲ್ಲಿ ಏಕಾಂತವಾಗಿ ಸಾಧನೆ ಭಜನೆಗಳಲ್ಲಿ ಮಗ್ನನಾದನು. ದೇವಸ್ಥಾನಗಳಿಗೆ ಹೋಗುವಾಗ, ಅಲ್ಲಿಯ ಸಾಧಾರಣ ಜನಗಳ ಮತ್ತು ತೀರ್ಥಯಾತ್ರಿಗಳ ಕಷ್ಟ ಅವನ ಕಣ್ಣಿಗೆ ಬೀಳದೆ ಇರುತ್ತಿರಲಿಲ್ಲ. ಜನಗಳ ಚಿಕಿತ್ಸೆಗಾಗಿ ಯೋಗ್ಯವಾದ ಆಸ್ಪತ್ರೆಯ ಅಭಾವ ಆತನ ಗಮನಕ್ಕೆ ಬಂದಿತು. ಹರೇಂದ್ರನಾಥ ತನಗೆ ತಿಳಿದ ಕೆಲವು ಹೋಮಿಯೋಪತಿ ಔಷಧಗಳನ್ನು ಸಂಗ್ರಹಿಸಿ, ರಸ್ತೆಯಲ್ಲಿ ಹೋಗುವಾಗ ತೆಗೆದುಕೊಂಡು ಹೋಗುತ್ತಿದ್ದನು. ತನಗೆ ಸಾಧ್ಯವಾದಷ್ಟು, ಅಸಹಾಯಕರಾದ ರೋಗಿಗಳ ಚಿಕಿತ್ಸೆ ಮಾಡ ಲಾರಂಭಿಸಿದನು. ಜನ ಅವನನ್ನು 'ಔಷಧಿ ಬಾಬಾಜಿ' ಎಂದೇ ಕರೆಯಲಾರಂಭಿಸಿದರು. ೧೯೦೫ರಲ್ಲಿ ಹರೇಂದ್ರನ ಈ ನಿಸ್ವಾರ್ಥ ಸೇವೆ ಜ್ಞಾನೇಶ್ವರ ಚಂದ್ರ ಸೇನ್ ಎಂಬ ಗೃಹಸ್ಥನ ದೃಷ್ಟಿಯನ್ನು ಆಕರ್ಷಿಸಿತು. ೧೯೦೭ರ ವೇಳೆಗೆ ಇವರಿಬ್ಬರಿಗೆ ಸಹಾಯ ಮಾಡಲು ಇನ್ನೂ ಕೆಲವರು ಮುಂದೆ ಬಂದರು. ಊರಿನ ವಿಭಿನ್ನ ಜಾಗಗಳಿಂದ ರೋಗಿಗಳನ್ನು ಕರೆತಂದು, ಚಿಕಿತ್ಸೆ



ಮಾಡಲಾರಂಭಿಸಿದರು. ೧೯೦೮ ರ ಜನವರಿ ೧೨ರಂದು ಈ ಸಂಸ್ಥೆಯ ಭಾರವನ್ನು ರಾಮಕೃಷ್ಣ ಮಿಷನ್ ವಹಿಸಿಕೊಂಡಿತು. ರಾಮಕೃಷ್ಣ ಮಠದ ಹಲವಾರು ಸಾಧುಗಳ ಪರಿಶ್ರಮದಿಂದ ಈ ಸೇವಾಶ್ರಮ ಈಗ ಬೃಹದಾಕಾರವಾಗಿ ಬೆಳೆದು ನಿಂತಿದೆ. ಶೇ. ೬೦ ರೋಗಿಗಳು ಇಲ್ಲಿ ಉಚಿತ ಚಿಕಿತ್ಸೆ ಪಡೆಯುತ್ತಾರೆ. ಆರು ಶೀತತಾಪ ನಿಯಂತ್ರಣವಿರುವ ಆಪರೇಷನ್ ಥಿಯೇಟರುಗಳಿವೆ. ೫೦ ಜನ ಡಾಕ್ಟರುಗಳಿರುವ, ಸುಮಾರು ೨೪ ರೀತಿಯ ಚಿಕಿತ್ಸೆಯ ವಿಭಾಗಗಳಿವೆ.

ಈ ಸೇವಾಶ್ರಮಗಳ ಮಾದರಿಯಲ್ಲಿ ೧೯೧೦ರಲ್ಲಿ ಅಲಹಾಬಾದ್, ೧೯೧೪ರಲ್ಲಿ ಲಖ್‌ನೌ, ೧೯೧೫ರಲ್ಲಿ ಬಂಗಾಳದ ಕಾಂಟೈ, ೧೯೧೭ರಲ್ಲಿ ಬಾಂಕುರಾ ಇತ್ಯಾದಿ ಜಾಗಗಳಲ್ಲಿ ಸೇವಾಶ್ರಮಗಳು ಸ್ಥಾಪಿತವಾದುವು. 'ಜಗತ್ತಿನ ಹಿತದ ಸಾಧನೆಯಿಂದ ಸ್ವಂತ ಮೋಕ್ಷಕ್ಕೆ' ಯತ್ನಿಸುತ್ತಿರುವ ಈ ಸೇವಾಶ್ರಮಗಳ ಸಂನ್ಯಾಸಿಗಳೇ ತಮ್ಮ ನಿಸ್ವಾರ್ಥ ಸೇವೆಯಿಂದ ರಾಮಕೃಷ್ಣ ಮಿಷನ್ ತದನಂತರ ಆರಂಭಿಸಿದ ಎಲ್ಲಾ ಆಸ್ಪತ್ರೆ ಗಳಿಗೂ ಮಾದರಿಯಾಗಿದ್ದಾರೆ. ಕಾಶಿಯ ಸೇವಾಶ್ರಮದಲ್ಲಿ ಒಬ್ಬರು ಸಂನ್ಯಾಸಿ ಮಳೆ ಬಿಸಿಲೆನ್ನದೆ ತರಕಾರಿಯ ತೋಟದಲ್ಲಿ ದುಡಿಯುತ್ತಿದ್ದರು. ಇದಕ್ಕೆ ಕಾರಣವನ್ನು ಕೇಳಿದಾಗ, 'ಆಸ್ಪತ್ರೆಯ ರೋಗಿಗಳ ಪಥ್ಯಕ್ಕಾಗಿ ತರಕಾರಿಯನ್ನು ಬೆಳೆಯುತ್ತಿದ್ದೇನೆ' ಎಂದವರು ಉತ್ತರಿಸಿದರು. ಸ್ವಾಮಿ ಮುಕ್ತಾನಂದರು ಕಾಶಿ ಸೇವಾಶ್ರಮದಲ್ಲಿ ಬ್ಯಾಂಡೇಜ್ ಕಟ್ಟುವ ಕೆಲಸ ಮಾಡುತ್ತಿದ್ದರು. ಅವರಿಂದಲೇ ತಮ್ಮ ಗಾಯಗಳ ಚಿಕಿತ್ಸೆ ಮಾಡಿಸಿಕೊಳ್ಳಲು ದೂರದೂರದಿಂದ ರೋಗಿಗಳು ಬರುತ್ತಿದ್ದರು. ನಿಷ್ಠೆಯಿಂದ ರೋಗಿಗಳ ಆರೈಕೆಯಲ್ಲಿ ಮಗ್ನರಾಗಿರುತ್ತಿದ್ದ ಅವರನ್ನು ಕಂಡು ಜನರು ವಿಸ್ಮಯಪಡುತ್ತಿದ್ದರು. ಸ್ವಾಮಿ ಅಚಲಾನಂದರು ಎಂದೂ 'ರೋಗಿಗಳು' ಎಂಬ ಶಬ್ದವನ್ನು ಉಪಯೋಗಿಸುತ್ತಿರಲಿಲ್ಲ. 'ನಾರಾಯಣ' ಎಂದೇ ಕರೆಯುತ್ತಿದ್ದರು.

ಈ ಸೇವಾಶ್ರಮಗಳ ಸ್ಥಾಪನೆಯಾದ ನಂತರ ಆರಂಭವಾದ ಕೆಲವು ಆಸ್ಪತ್ರೆಗಳು ಆಯಾ ಸಮಯದಲ್ಲಿ ಸಮಾಜದಲ್ಲಿನ ಕೆಲವು ಕೊರತೆಗಳನ್ನು ಪೂರೈಸಲು ಆರಂಭವಾದಂಥವು. ಶ್ರೀಮಾತೆಯ ಶಿಷ್ಯರಾದ ಸ್ವಾಮಿ ದಯಾನಂದರು ೧೯೨೭ರಲ್ಲಿ ವೇದಾಂತ ಪ್ರಚಾರಕ್ಕೆಂದು ಅಮೆರಿಕಾಕ್ಕೆ ಹೋಗಿದ್ದರು.

ಅಲ್ಲಿಯ ಆರೋಗ್ಯ ಚಿಮ್ಮುವ ಮಕ್ಕಳನ್ನು ನೋಡಿದಾಗಲೆಲ್ಲಾ, ಅವರಿಗೆ ಮನಸ್ಸಿನಲ್ಲಿಯೇ ಕಷ್ಟವಾಗುತ್ತಿತ್ತು. ನಮ್ಮ ದೇಶದಲ್ಲಿ ಅನಾರೋಗ್ಯದಿಂದ, ಪುಷ್ಟಿಕರ ಆಹಾರವಿಲ್ಲದೆ ಕಡ್ಡಿಯಂತಿರುವ ಮಕ್ಕಳ ಹಾಗೂ ತಾಯಂದಿರ ನೆನಪು ಅವರಿಗೆ ಬರುತ್ತಿತ್ತು. ೧೯೩೦ರ ಕೊನೆಯಲ್ಲಿ ಅವರು ಭಾರತಕ್ಕೆ ಹಿಂತಿರುಗಿದರು. 'ರಾಮಕೃಷ್ಣ ಮಿಷನ್ ತಾಯಿ ಮತ್ತು ಮಕ್ಕಳ ಚಿಕಿತ್ಸೆಗಾಗಿ ಒಂದು ಆಸ್ಪತ್ರೆಯನ್ನು ಆರಂಭಿಸಬೇಕು' ಎಂಬ ಇಚ್ಛೆಯನ್ನು ಅವರು ವ್ಯಕ್ತಪಡಿಸಿದರು. 'ಸಂನ್ಯಾಸಿಯೊಬ್ಬರು ಈ ಬಗ್ಗೆ ಚಿಂತೆ ಮಾಡುವ ಅಗತ್ಯವೇನಿದೆ?' ಎಂಬ ಭಿನ್ನ ಮತ ಬಂದು ಅವರ ವಿಚಾರಗಳು ಕಟು ವಿಮರ್ಶೆಗೆ ಒಳಗಾದವು. ದಯಾನಂದರು ಇದರಿಂದ ಕುಗ್ಗಲಿಲ್ಲ. ೧೯೩೨ ರ ಮೇ ತಿಂಗಳ ಉದ್ಬೋಧನ ಪತ್ರಿಕೆಯಲ್ಲಿ ಪ್ರಧಾನ ಕಾರ್ಯದರ್ಶಿಗಳಾದ (General Secretary) ಸ್ವಾಮಿ ಶುದ್ಧಾನಂದರು, 'ರಾಮಕೃಷ್ಣ ಮಿಷನ್ ಮತ್ತು ಶಿಶುಮಂಗಳ' ಎಂಬ ಲೇಖನವನ್ನು ಬರೆದು, ಅದರಲ್ಲಿ ತಾಯಿ ಮತ್ತು ಮಕ್ಕಳಿಗಾಗಿ ಒಂದು ಆಸ್ಪತ್ರೆಯ ಅಗತ್ಯವನ್ನು ವಿವರಿಸಿ, ಸಹಾಯ ಮಾಡಲು ಜನರು ಮುಂದೆ ಬರಬೇಕೆಂದು ಕೇಳಿಕೊಂಡರು. ೧೯೩೨ರಲ್ಲಿ ದಕ್ಷಿಣ ಕೊಲ್ಕತಾದಲ್ಲಿ ಇಂಥ ಒಂದು ಆಸ್ಪತ್ರೆಯ ಕೆಲಸ ಆರಂಭವಾಯಿತು. ಸ್ವಾಮಿ ದಯಾನಂದರು ನರ್ಸ್‌ಗಳಿಗೆ ತರಬೇತಿ ಕೊಡುವುದಕ್ಕೂ ಪ್ರಾಮುಖ್ಯ ಕೊಟ್ಟರು. ೧೯೫೬ರಲ್ಲಿ ಈ 'ಶಿಶುಮಂಗಳ' ಆಸ್ಪತ್ರೆ ಜನರಲ್ ಆಸ್ಪತ್ರೆಯಾಗಿ, ೧೯೫೭ರಲ್ಲಿ 'ಸೇವಾ ಪ್ರತಿಷ್ಠಾನ' ಎಂದು ಹೆಸರು ಪಡೆಯಿತು. ಅಂದಿನ ಬಂಗಾಳದ ಸರ್ಕಾರ ಹೊಸ ಕಟ್ಟಡದ ನಿರ್ಮಾಣಕ್ಕಾಗಿ ರೂ. ೮೯,೦೦೦/– ಕೊಟ್ಟಿತು.

ಸೇವಾ ಪ್ರತಿಷ್ಠಾನದ ಡಾಕ್ಟರ್ ಆಗಿದ್ದ ರಮೇಂದ್ರ ಬಸು ಸ್ವಾಮಿ ದಯಾನಂದರ ವಿಚಾರವಾಗಿ ತಮ್ಮ ನೆನಪುಗಳಲ್ಲಿ ಹೀಗೆ ಬರೆಯುತ್ತಾರೆ: "M.B.B.S. ಓದದೆ ಇದ್ದರೂ ಅವರಿಗೆ ಆಳವಾದ ವೈದ್ಯಕೀಯ ಜ್ಞಾನವಿತ್ತು. ಅತ್ಯಂತ ಕಡಿಮೆ ಮಾತು... ಹೊರಗಿನ ಜನರೊಂದಿಗೆ ಹೆಚ್ಚಾಗಿ ಬೆರೆಯುತ್ತಿರಲಿಲ್ಲ. ಹಗಲೆನ್ನದೆ ಮಧ್ಯರಾತ್ರಿ ಎನ್ನದೆ, ಕಷ್ಟದಲ್ಲಿದ್ದ ರೋಗಿಗಳ ಪಕ್ಕದಲ್ಲಿ ಅವರಿರುತ್ತಿದ್ದರು. ರೋಗಿಗಳಿಗೆ ಎಲ್ಲಾ ರೀತಿಯ ಅನುಕೂಲಗಳನ್ನು ಒದಗಿಸುವುದೇ ಅವರ ಮುಖ್ಯ ಚಿಂತೆಯಾಗಿತ್ತು. ಶಿಶುಮಂಗಳ ಆರಂಭವಾದಾಗ ಆಸ್ಪತ್ರೆಯಲ್ಲಿ ಹೆರಿಗೆ ಮತ್ತು ಮಕ್ಕಳ ಚಿಕಿತ್ಸೆ – ಈ ಎರಡೇ ವಿಭಾಗಗಳಿದ್ದವು. ಬೇರೆಲ್ಲಾ ಆಸ್ಪತ್ರೆಗಳಲ್ಲಿ ಬೆಳಿಗ್ಗೆ ೮ ಗಂಟೆಗೇ ಹೊರರೋಗಿಗಳ ವಿಭಾಗ ಆರಂಭವಾದರೆ ನಮ್ಮ ಆಸ್ಪತ್ರೆಯಲ್ಲಿ ಅದು ೧೦.೩೦ ಗಂಟೆಗೆ ಶುರುವಾಗುತ್ತಿತ್ತು. ನಾವೂ ೮ ಗಂಟೆಗೇ ಆರಂಭಿಸಿದರೆ ಅನುಕೂಲವಾಗುತ್ತದೆ ಎಂದಾಗ, ದಯಾನಂದರು ಕೊಟ್ಟ ಉತ್ತರ ಚಮತ್ಕಾರವಾಗಿತ್ತು. ಅವರೆಂದರು, 'ಹೆಂಗಸರು ಆ ಸಮಯದಲ್ಲಿ ಮನೆಯಲ್ಲಿ ನಾನಾ ಕೆಲಸಗಳ ಮಧ್ಯದಲ್ಲಿರುತ್ತಾರೆ. ಬೆಳಿಗ್ಗೆ ೯ ಗಂಟೆಗೆ ಗಂಡನನ್ನು ಕೆಲಸಕ್ಕೆ ಕಳುಹಿಸಿ, ಮಕ್ಕಳನ್ನು ಸ್ಕೂಲಿಗೆ ಹೊರಡಿಸಿದ ಮೇಲೆಯೇ ಅವರಿಗೆ ಬಿಡುವು ಸಿಗುತ್ತದೆ...'

"ಒಬ್ಬಳು ಹೆಂಗಸು ಹೆರಿಗೆಗೆಂದು ಆಸ್ಪತ್ರೆಗೆ ಸೇರಿದಳು. ಅವಳಲ್ಲಿ ಸಿಡುಬಿನ ರೋಗ ಕಾಣಿಸಿಕೊಂಡಿದ್ದರಿಂದ, ಆಕೆಯನ್ನು ಮನೆಗೆ ಕಳುಹಿಸಲಾಯಿತು. ವಿಷಯ ತಿಳಿದು ಸ್ವಾಮಿ ದಯಾನಂದರು, ಮೆಟರ್ನಿಟಿ ಸರ್ಜನ್ ಡಾ. ಪಿ. ಕೆ. ರಾಯ್ ಅವರಿಗೆ, ತಮ್ಮ ಸಹಾಯಕರೊಂದಿಗೆ ರೋಗಿಯ ಮನೆಗೇ ಹೋಗಿ ಹೆರಿಗೆಯನ್ನು ನೆರವೇರಿಸುವಂತೆ ಕೇಳಿಕೊಂಡರು. ಆ ರಾತ್ರಿ ಬಹಳ ಹೊತ್ತಿನ ನಂತರ, ತಾಯಿ ಮತ್ತು ಮಗು ಆರೋಗ್ಯವಾಗಿರುವರೆಂದು ಸುದ್ದಿ ಬಂದಮೇಲಷ್ಟೇ ದಯಾನಂದರು ಮಲಗಲು ಹೋದರು. ಆ ಬಡಕುಟುಂಬದಿಂದ ಅವರು ಕಿಂಚಿತ್ತೂ ಹಣವನ್ನೂ ತೆಗೆದುಕೊಳ್ಳಲಿಲ್ಲ."

೧೯೬೩ರಲ್ಲಿ ಆಗಿನ ಭಾರತದ ಪ್ರಧಾನಮಂತ್ರಿಗಳಾಗಿದ್ದ ಪಂಡಿತ್ ಜವಹರಲಾಲ್ ನೆಹರು ಅವರು ಆಸ್ಪತ್ರೆಯ ಹೊಸ ಕಟ್ಟಡದ ಉದ್ಘಾಟನೆಯನ್ನು ನೆರವೇರಿಸಿದರು. ಅದೇ ವರ್ಷ ಸ್ವಾಮಿ ದಯಾನಂದರು, ತಮ್ಮೆಲ್ಲ ಜವಾಬ್ದಾರಿಯನ್ನು ಸ್ವಾಮಿ ಗಹನಾನಂದರಿಗೆ ರವಾನಿಸಿದರು.

ಪರರ ಸೇವೆಯನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡು ನಡೆದ ಬಂದ ಈ ಆಸ್ಪತ್ರೆಯಲ್ಲಿ, ಹಣದ ಕೊರತೆಯನ್ನು ಪ್ರತಿ ಹಂತದಲ್ಲಿಯೂ ಎದುರಿಸಬೇಕಾಗಿತ್ತು. ಒಮ್ಮೆ ತಿಂಗಳ ಸಂಬಳದ ಹಣದಲ್ಲಿ ಸುಮಾರು ಮೂರು ಲಕ್ಷ ರೂಪಾಯಿಗಳಷ್ಟು ಹಣ ಕಡಮೆ ಬಿದ್ದಿತು. ಎಲ್ಲರೂ ಚಿಂತೆಗೀಡಾಗಿದ್ದರು. ಆದರೆ ಸ್ವಾಮಿ ಗಹನಾನಂದರು ಒಂದೂ ಮಾತನಾಡದೆ, ನಿಶ್ಚಲರಾಗಿ ಕುಳಿತಿದ್ದರು. ಅವರನ್ನು ವಿಚಾರಿಸಿದಾಗ ಅವರು ಹೀಗೆ ಹೇಳಿದರು: "ನನ್ನನ್ನು ಇಲ್ಲಿಗೆ ಕೆಲಸಕ್ಕೆ ಕಳಿಸಿದವರು ಶ್ರೀರಾಮಕೃಷ್ಣರು. ಅವರೇ ಎಲ್ಲಾ ನೋಡಿಕೊಳ್ಳಲಿ." ಅವರ ಮೌನ ಮತ್ತು ಗಂಭೀರ ಮುಖಮಂಡಲವನ್ನು ನೋಡಿದಾಗಲೇ, ಅವರು ಶ್ರೀರಾಮಕೃಷ್ಣರೊಂದಿಗೆ ಯುದ್ಧ ಮಾಡುತ್ತಿದ್ದಾರೆ ಎನ್ನುವುದು ಗೊತ್ತಾಗುತ್ತಿತ್ತು. ಆ ಸಂಜೆ, ಸೇವಾಪ್ರತಿಷ್ಠಾನದ ಆಸ್ಪತ್ರೆಗೆ ಬಂದ ಒಬ್ಬ ಶ್ರೀಮಂತ ಭಕ್ತರು ಗಹನಾನಂದರ ಮೌನಭಾವವನ್ನು ಗಮನಿಸಿ, ಪ್ರಶ್ನಿಸಿದರು. ಅವರಿಂದ ಸರಿಯಾದ ಉತ್ತರ ಸಿಕ್ಕಲಿಲ್ಲ. ಆತ ಅವರಿವರನ್ನು ವಿಚಾರಿಸಿ, ಪರಿಸ್ಥಿತಿಯನ್ನು ಅರ್ಥಮಾಡಿಕೊಂಡರು. ಕೂಡಲೇ ಮೂರು ಲಕ್ಷ ರೂಪಾಯಿಗಳ ಒಂದು ಚೆಕ್ಕನ್ನು ತಂದುಕೊಟ್ಟರು. ಮುಂದೆ ಅನುಕೂಲಕರವಾದ ಪರಿಸ್ಥಿತಿ ಒದಗಿಬಂದಾಗ, ಈ ಹಣವನ್ನು ಹಿಂತಿರುಗಿ ನೀಡಲಾಯಿತು. ಕಷ್ಟದ ಸಮಯಗಳಲ್ಲಿ ಸೇವಾಪ್ರತಿಷ್ಠಾನವು ರೋಗಿಗಳ ಆಸ್ಪತ್ರೆಯ ದರವನ್ನು ಹೆಚ್ಚಿಸಬೇಕೆಂದು ಕೆಲವರು ಸಲಹೆ ಮಾಡಿದರು. ಅದಕ್ಕೆ ಸ್ವಾಮಿ ಗಹನಾನಂದರು ಅಸಂತುಷ್ಟರಾಗಿ ನಿರಾಕರಿಸಿದರು.

೧೯೫೦ರಲ್ಲಿ ಮಕ್ಕಳು ಮತ್ತು ತಾಯಂದಿರಿಗಾಗಿ, ದಕ್ಷಿಣ ಕೊಲ್ಕತಾದಲ್ಲಿ 'ಮಾತೃಭವನ' ಎಂಬ ಆಸ್ಪತ್ರೆಯನ್ನು ರಾಮಕೃಷ್ಣ ಮಿಷನ್ ತೆರೆಯಿತು. ಶ್ರೀಶಾರದಾ ಮಠ ಆರಂಭವಾದ ಮೇಲೆ, ೧೯೫೫ರಲ್ಲಿ ಪೂಜ್ಯ ಭಕ್ತಿಪ್ರಾಣಾ ಮಾತಾಜಿ (ಶಾರದಾ ಮಠದ ಈಗಿನ ಅಧ್ಯಕ್ಷರು) ಮಾತೃಭವನದ ಮುಖ್ಯಸ್ಥೆಯಾದರು. ೧೯೬೧ರಲ್ಲಿ ರಾಮಕೃಷ್ಣ ಮಿಷನ್, ಈ ಆಸ್ಪತ್ರೆಯ ಪೂರ್ಣ ಜವಾಬ್ದಾರಿಯನ್ನು ಶಾರದಾ ಮಠಕ್ಕೆ ವಹಿಸಿತು. ಇಲ್ಲಿ ಬಡ ಕುಟುಂಬದಿಂದ ಬಂದ ಮಹಿಳೆಯರಿಗೆ, ಶುಲ್ಕವಿಲ್ಲದೆ, ಔಷಧಿ

ಮತ್ತು ಚಿಕಿತ್ಸೆಯನ್ನು ನೀಡಲಾಗುತ್ತದೆ. ಹಾಗೆಯೇ ಇಲ್ಲಿನ ಕಾರ್ಯಕರ್ತರು ಸುತ್ತಲಿನ ಕೊಳಚೆಗೇರಿಗಳಿಗೆ ತೆರಳಿ, ಮಕ್ಕಳ ಮತ್ತು ತಾಯಂದಿರ ಆರೋಗ್ಯದ ಬಗ್ಗೆ ಜಾಗೃತಿಯನ್ನು ಉಂಟು ಮಾಡುತ್ತಾರೆ.

ರಾಂಚಿಯ ಟಿ.ಬಿ. ಸ್ಯಾನಿಟೋರಿಯಂನ ಸಂಚಾರಿ ಸೇವೆಯು ಸುತ್ತಮುತ್ತಲಿನ ೩೦೦ ಹಳ್ಳಿಗಳಿಗೆ ಉಚಿತ ಚಿಕಿತ್ಸೆ ಮತ್ತು ಔಷಧಿಗಳನ್ನು ಒದಗಿಸುತ್ತದೆ. ಇಚ್ಛಾಪುರ, ಕಾಮಾರಪುಕುರ, ಲಕನೌ ಮುಂತಾದ ಜಾಗಗಳಲ್ಲಿ ಕುಷ್ಠರೋಗದ ಚಿಕಿತ್ಸೆಯನ್ನು ನಡೆಸಲಾಗುತ್ತಿದೆ.

ಈಗಿನ ಆಧುನಿಕ ಚಿಕಿತ್ಸೆಯ ಪದ್ಧತಿಗಳಿಗೆ ಅನುಗುಣವಾಗಿ ಮಿಷನ್ನಿನ ವೈದ್ಯಕೀಯ ಸೌಲಭ್ಯಗಳೂ ಅಭಿವೃದ್ಧಿಯನ್ನು ಹೊಂದುತ್ತಿವೆ. ೧೯೨೪ರಲ್ಲಿ ಆರಂಭವಾದ ಮುಂಬೈನ ಖಾರ್ ನಲ್ಲಿಯ ಆಸ್ಪತ್ರೆ ಈಗ ಅತ್ಯಾಧುನಿಕ ಉಪಕರಣಗಳನ್ನು ಮತ್ತು ಚಿಕಿತ್ಸೆಯ ವಿಧಾನವನ್ನು ಅಳವಡಿಸಿಕೊಂಡಿದೆ. ಸಾಮಾನ್ಯ ಜನರ ಅನುಕೂಲಕ್ಕಾಗಿ ನೋಂದಾವಣಿ ಶುಲ್ಕವನ್ನು ಅತಿ ಕಡಮೆ ಇಡಲಾಗಿದೆ. ಈ ಆಸ್ಪತ್ರೆಯಲ್ಲಿ Plastic Surgery ಮೂಲಕ Knee ಮತ್ತು Hip replacement ಇತ್ಯಾದಿ ಚಿಕಿತ್ಸೆಯ ಸೌಲಭ್ಯಗಳಿವೆ. ಈ ರೀತಿಯ ದೊಡ್ಡ ಆಸ್ಪತ್ರೆಗಳು ದೇಶದ ಹತ್ತು ರಾಜ್ಯಗಳಲ್ಲಿ ನಡೆಯುತ್ತಿದ್ದರೆ, ಭಾರತದ ಬಹುತೇಕ ಎಲ್ಲಾ ಶಾಖೆಗಳಲ್ಲೂ ಔಷಧಾಲಯಗಳಿವೆ (Dispensary). ಕೇರಳದ ತಿರುವನಂತಪುರದಲ್ಲಿನ ದೊಡ್ಡ ಆಸ್ಪತ್ರೆ ಮತ್ತು ಚೆನ್ನೈ ಮಠ ನಡೆಸುತ್ತಿರುವ ಡಿಸ್ಪೆನ್ಸರಿ ಅವುಗಳಲ್ಲಿ ಮುಖ್ಯವಾದುವು. ಸಂಚಾರಿ ಔಷಧಾಲಯವನ್ನು ೪೯ ಕೇಂದ್ರಗಳು ಹೊಂದಿದ್ದು, ಹಳ್ಳಿಯ ಹಾಗೂ ಗುಡ್ಡಗಾಡಿನ ಕಡೆ ಇವುಗಳು ಅವಿಶ್ರಾಂತ ಸೇವೆಯನ್ನು ಸಲ್ಲಿಸುತ್ತಿವೆ. ಕಲ್ಕತ್ತಾದ ಸೇವಾ ಪ್ರತಿಷ್ಠಾನವು Post Graduate Medical College ಮತ್ತು ರಿಸರ್ಚ್ ಸೆಂಟರನ್ನು ಹೊಂದಿದೆ.

ಇತರ ಆಸ್ಪತ್ರೆಗಳಿಗೂ ರಾಮಕೃಷ್ಣ ಸಂಘದ ಆಸ್ಪತ್ರೆಗಳಿಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ೧) ಹಣವನ್ನು ಮಾಡುವುದು ಇಲ್ಲಿ ಮುಖ್ಯವಲ್ಲ, ಸೇವೆಯೇ ಮುಖ್ಯ. ೨) ಸಂಘದ ಕೆಲಸಗಳಿಗೆ ನಿಯೋಜಿತರಾದ ಸಂನ್ಯಾಸಿಗಳು ಸ್ವಾಮಿ ವಿವೇಕಾನಂದರು ಹೇಳಿಕೊಟ್ಟ, **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಮಹಾಮಂತ್ರದ ಸಾಧಕರು ಮಾತ್ರ. ಈ ಸೇವಾಕಾರ್ಯಗಳಲ್ಲಿ ಯಾವುದೇ ವ್ಯಕ್ತಿ ಮುಖ್ಯನಲ್ಲ; ಸಂಘವೇ ಮುಖ್ಯ. ಸಂಘ ವೆಂದರೆ ಶ್ರೀರಾಮಕೃಷ್ಣರ ಭೌತಿಕ ಶರೀರವೇ ಎಂದು ಪೂಜ್ಯ ಸ್ವಾಮೀಜಿ ಹೇಳಿದ್ದಾರೆ.

"ಸ್ವಾಮೀಜಿಯ ಮಾತಿನಲ್ಲಿ ವಿಶ್ವಾಸವಿಡಿ. ಸೇವಾಶ್ರಮದಲ್ಲಿ ರೋಗಿಗಳ ರೂಪದಲ್ಲಿರುವ ಶಿವನ ಸೇವೆಯನ್ನು ಮನಸ್ಸಿಟ್ಟು ಮಾಡಿದರೆ, ನೀವು ಮುಕ್ತರಾಗುತ್ತೀರಿ... ಮನಸ್ಸು ಪವಿತ್ರವಾಗುತ್ತದೆ. ನಾರಾಯಣನೆಂಬ ಅರಿವಿನಿಂದ ಮನುಷ್ಯರ ಸೇವೆ ಮಾಡುವುದೇ ಈ ಯುಗದ ಸಾಧನೆ" ಎಂಬ ಸ್ವಾಮಿ ತುರಿಯಾನಂದರ ಮಾತುಗಳು ವೈದ್ಯಕೀಯ ಕ್ಷೇತ್ರದಲ್ಲಿ ರಾಮಕೃಷ್ಣ ಸಂಘದ ಆದರ್ಶವನ್ನು ಎತ್ತಿಹಿಡಿಯುತ್ತವೆ.



# ರಾಮಕೃಷ್ಣ ಮಹಾಸಂಘದ



# ಶೈಕ್ಷಣಿಕ ಸೇವೆ

**ಮಾತಾ ತ್ಯಾಗಮಯೀ**

ಬ್ರಿಟಿಷರು ಭರತಖಂಡವನ್ನು ಜಯಿಸಲು ಉಪಕ್ರಮಿಸಿದಾಗ ಆರ್ಯಧರ್ಮದ ಚಿರಜ್ವಾಜ್ವಲ್ಯಮಾನವಾಗಿದ್ದ ಪ್ರದೀಪ ಜನರ ಪಾಲಿಗೆ ನಂದಿಹೋಗುವಂತಾದ ವಿಷಮ ಸನ್ನಿವೇಶ ಉಂಟಾಯಿತು. ಆ ಸಮಯದಲ್ಲಿ ಉದಿಸಿ ಬಂದ ಗುರುವರ ಸ್ವಾಮಿ ವಿವೇಕಾನಂದರ ಋಷಿದೃಷ್ಟಿಯು, ಭಾರತದ ಎಲ್ಲ ಸಮಸ್ಯೆಗಳ ತಾಯಿಬೇರು ಇರುವುದು ವಿದ್ಯಾಭ್ಯಾಸದ ಅಭಾವದಲ್ಲಿ ಎಂದು ಕಂಡುಕೊಂಡಿತು. ಸ್ವಾಮೀಜಿ ಹೀಗೆ ಹೇಳುತ್ತಾರೆ: "ಯೂರೋಪಿನ, ಅಮೇರಿಕಾದ ದೇಶಗಳ ಪ್ರಗತಿಯೊಂದಿಗೆ ಭಾರತದ ಸ್ಥಿತಿಗತಿಗಳನ್ನು ಹೋಲಿಸಿ ನೋಡಿದಾಗ ನನಗೆ ಬಹಳ ವ್ಯಥೆಯಾಯಿತು. ಈ ವ್ಯತ್ಯಾಸವಿರುವುದು ಎಲ್ಲಿ ಎಂದು ಆಲೋಚಿಸಿದಾಗ ನನಗೆ ಉತ್ತರ ಹೊಳೆಯಿತು, ವಿದ್ಯಾಭ್ಯಾಸದಲ್ಲಿ ಎಂದು... ವಿದ್ಯಾಭ್ಯಾಸವಿಲ್ಲದೆ ನಮ್ಮ ದೇಶದ ಒಂದು ಗ್ರಾಮದ ಮೇಲೆ ಕುಬೇರನ ಆಸ್ತಿಯನ್ನೇ ಸುರಿದರೂ ಆ ಗ್ರಾಮ ಉದ್ಧಾರವಾಗಲಾರದು."

"ನಮಗಿಂದು ಬೇಕಾಗಿರುವುದು ಭಾವಿಸಬಲ್ಲ ಹೃದಯ, ಅರಿತುಕೊಳ್ಳಬಲ್ಲ ಮೆದುಳು ಮತ್ತು ಕಾರ್ಯವೆಸಗಬಲ್ಲ ಬಲಿಷ್ಠ ಬಾಹುಗಳು. ಮಹತ್ಕಾರ್ಯಗಳನ್ನೆಸಗಲು ನಿಮ್ಮನ್ನು ನೀವು ಸೂಕ್ತ ಉಪಕರಣಗಳನ್ನಾಗಿ ರೂಪಿಸಿಕೊಳ್ಳಿರಿ."

ಈ ಬಗೆಯ ವಿದ್ಯಾಭ್ಯಾಸದ ಕೋಶಾಗಾರದಿಂದ ಇಡೀ ದೇಶಕ್ಕೆ ಬೆಳಕಿನ ಆಹಾರವನ್ನು ಉಣಬಡಿಸುವ ಹಂಚಿಕೆ ಸ್ವಾಮೀಜಿಯವರದಾಗಿತ್ತು. ಆದ್ದರಿಂದ ೧೮೯೭ರ ಮೇ ೧ರಂದು ಸ್ವಾಮೀಜಿ 'ಆತ್ಮಮೋಕ್ಷ' ಮತ್ತು 'ಜಗತ್ತಿನ ಹಿತ' ಎಂಬ ಜಂಟಿ ಆದರ್ಶಗಳೊಂದಿಗೆ 'ರಾಮಕೃಷ್ಣ ಮಹಾಸಂಘ'ವನ್ನು ಪ್ರಾರಂಭಿಸಿದಾಗ ಆಧ್ಯಾತ್ಮಿಕ ಸೇವಾಕಾರ್ಯಗಳೊಂದಿಗೆ ಶೈಕ್ಷಣಿಕ ಸೇವೆಯ ಉತ್ತರದಾಯಿತ್ವವನ್ನೂ ಅದಕ್ಕೆ ವಹಿಸಿದರು. ಮಾನವನಲ್ಲಿನ ದೈವತ್ವದ ಅಭಿವ್ಯಕ್ತಿ, ಮಾನವ ಸೇವೆ, ಪೌರಸ್ತ್ಯ ಧರ್ಮದೊಂದಿಗೆ ಪಾಶ್ಚಾತ್ಯ ವಿಜ್ಞಾನದ ಮಿಲನ ಮತ್ತು ಪರಿಪೂರ್ಣ ವ್ಯಕ್ತಿತ್ವ ನಿರ್ಮಾಣದ ಉದ್ದೇಶವನ್ನುಳ್ಳ ಶಿಕ್ಷಣವನ್ನು ಭಾರತೀಯರಿಗೆ ನೀಡುವ ಕನಸು ಸ್ವಾಮೀಜಿಯವರದಾಗಿತ್ತು. ಈ ಹಿನ್ನೆಲೆಯಲ್ಲಿ ಸ್ವಾಮೀಜಿ, "Belur Math would ultimately blossom into a full-fledged university" – "ಬೇಲೂರು ಮಠವು ಒಂದು

**ರಾಮಕೃಷ್ಣ ಮಹಾಸಂಘವು ತನ್ನ ಶೈಕ್ಷಣಿಕ ಸಂಸ್ಥೆಗಳಿಗೆ ಹೆಸರುವಾಸಿಯಾಗಿದೆ. ಸ್ವಾಮಿ ವಿವೇಕಾನಂದರು ಮೌಲ್ಯಗಳನ್ನು ಬೋಧಿಸುವ, ಮಾನವನಿರ್ಮಾಣ ಹಾಗೂ ಚಾರಿತ್ರ್ಯ ನಿರ್ಮಾಣದ ಶಿಕ್ಷಣಕ್ಕೆ ಒತ್ತುಕೊಟ್ಟಿದ್ದರು. ಈ ಬಗೆಯ ಸರ್ವಾಂಗೀಣ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ನೀಡುವ ಅನುಷ್ಠಾನ ಕೇಂದ್ರಗಳಾಗಿವೆ, ರಾಮಕೃಷ್ಣ ಮಿಷನ್ನಿನ ಶಾಲಾಕಾಲೇಜುಗಳು. ಈ ಅಂಶವನ್ನು ವಿಶಿಷ್ಟವಾಗಿ ಬಿಂಬಿಸಿರುವ ಪೂಜ್ಯ ಮಾತಾಜಿಯವರು ಚಳ್ಳಕೆರೆಯ ಶಾರದಾಶ್ರಮದ ಮುಖ್ಯಸ್ಥರಾಗಿದ್ದಾರೆ. ಉತ್ತಮ ವಾಗ್ಮಿಗಳಾಗಿರುವ ಇವರ ಹಲವು ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

ಪರಿಪೂರ್ಣ ವಿಶ್ವವಿದ್ಯಾನಿಲಯವಾಗಿ ಅರಳಿ ನಿಲ್ಲಲಿದೆ" ಎಂಬ ಮಾತನ್ನು ಹೇಳಿದರು.

### ವಿದ್ಯಾಧನಂ ಸರ್ವಧನಾತ್ ಪ್ರಧಾನಂ

ಸ್ವಾಮೀಜಿ ನಾಲ್ಕು ಬಗೆಯ ದಾನಗಳನ್ನು ಕುರಿತು ಹೇಳುತ್ತಾರೆ : **ಅನ್ನದಾನ, ಪ್ರಾಣದಾನ, ವಿದ್ಯಾದಾನ** ಮತ್ತು **ಅಧ್ಯಾತ್ಮದಾನ**. ಸ್ವಾಮೀಜಿ ರಾಮಕೃಷ್ಣ ಮಹಾಸಂಘಕ್ಕೆ ಹಾಕಿಕೊಟ್ಟ ಕರ್ಮಯೋಗವೂ ನಾಲ್ಕು ಬಗೆಯದು : ೧. ಪ್ರಕೃತಿ ವಿಕೋಪ ಪರಿಹಾರ ಮತ್ತು ಪುನರ್ವಸತಿ, ೨. ಆರೋಗ್ಯರಕ್ಷೆ ಅಥವಾ ವೈದ್ಯಕೀಯ ಸೇವೆ, ೩. ಶೈಕ್ಷಣಿಕ ಸೇವೆ, ಮತ್ತು ೪. ಅಧ್ಯಾತ್ಮ ವಿದ್ಯಾದಾನ – ಈ ನಾಲ್ಕು ಸೇವೆಗಳು ಕ್ರಮವಾಗಿ ಮೇಲಿನ ನಾಲ್ಕು ದಾನಗಳನ್ನು ಪ್ರತಿನಿಧಿಸುತ್ತವೆ.

ಕಳೆದ ೧೧೫ ವರ್ಷಗಳ ರಾಮಕೃಷ್ಣ ಮಹಾಸಂಘದ ಇತಿಹಾಸದಲ್ಲಿ ಸ್ವಾಮೀಜಿಯವರ ಶಿಕ್ಷಣಕ್ಷೇತ್ರದ ಕನಸನ್ನು ಸಾಕಾರಗೊಳಿಸುವಲ್ಲಿ ರಾಷ್ಟ್ರಾದ್ಯಂತ ನಿರತವಾಗಿರುವ ಮಠದ ವಿವಿಧ ಶಿಕ್ಷಣ ಸಂಸ್ಥೆಗಳು ಒಟ್ಟು ೮೫೮. ಅವುಗಳಲ್ಲಿ, ಸ್ನಾತಕ ಕಾಲೇಜುಗಳು, ಶಿಕ್ಷಕರ ತರಬೇತಿ ಕಾಲೇಜುಗಳು, ಹಿರಿಯ ಮಾಧ್ಯಮಿಕ ಶಾಲೆಗಳು ವಿದ್ಯಾರ್ಥಿ ಮಂದಿರಗಳು, ಅನಾಥಾ ಲಯಗಳು, ಕೃಷಿ ಕಾಲೇಜುಗಳು, ಗ್ರಾಮೀಣ ಕೈಗಾರಿಕಾ ತರಬೇತಿ ಕೇಂದ್ರಗಳು, ಸಂಸ್ಕೃತ ಕಾಲೇಜು – ಇವೆಲ್ಲವೂ ಸೇರಿಕೊಂಡಿವೆ. ೨೦೧೨–೨೦೧೩ರಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಒಟ್ಟು ೨೨೦.೪೨ ಕೋಟಿ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ. ಶಿಶುವಿಹಾರದಿಂದ ವಿಶ್ವವಿದ್ಯಾನಿಲಯದವರೆಗೆ ಇರುವ ಹಲವಾರು ವಿದ್ಯಾಸಂಸ್ಥೆಗಳಲ್ಲಿ ಸುಮಾರು ೩. ೨೩ ಲಕ್ಷ ವಿದ್ಯಾರ್ಥಿ ವಿದ್ಯಾರ್ಥಿ ನಿಯರು ಶಿಕ್ಷಣ ಪಡೆದಿದ್ದಾರೆ.

ಮೊಟ್ಟಮೊದಲು ೧೯೨೨ರ ಮೇ ತಿಂಗಳಿನಲ್ಲಿ, ಸ್ವಾಮಿ ತುರೀಯಾನಂದಜಿಯವರ ಪ್ರೇರಣೆಯಿಂದ ಸ್ವಾಮಿ ಸದ್ಭಾವಾ ನಂದಜಿ ಮತ್ತು ಸ್ವಾಮಿ ಜ್ಞಾನೇಶ್ವರಾನಂದಜಿಯವರ ಸತತ ಪರಿಶ್ರಮ, ನಿಷ್ಠೆ ಮತ್ತು ಅದಮ್ಯ ಉತ್ಸಾಹದಿಂದ ವೈದ್ಯನಾಥ ಕ್ಷೇತ್ರ ದೇವಘರದಲ್ಲಿ **'ರಾಮಕೃಷ್ಣ ಮಿಷನ್ ವಿದ್ಯಾಪೀಠ'** ತೆರೆಯಲ್ಪಟ್ಟಿತು. ಅವರ ಹತ್ತಿರ ಹಣವಿರಲಿಲ್ಲ. ಸ್ವಾಮೀಜಿಯವರ ಬೆಂಕಿಯಂತಹ ನುಡಿಗಳು, ಉತ್ಸಾಹ ಮತ್ತು ರಾಷ್ಟ್ರನಿರ್ಮಾಣದ ಸಂಕಲ್ಪವೇ ಅವರ ಧನವಾಗಿತ್ತು. ವಿದ್ಯಾರ್ಥಿಗಳ ಚಾರಿತ್ರ್ಯನಿರ್ಮಾಣಕ್ಕಾಗಿ ಗುರುಗೃಹವಾಸ ಶಿಕ್ಷಣ ಪದ್ಧತಿಯನ್ನು ರೂಢಿಗತಗೊಳಿಸುವ ಬಹು ದೊಡ್ಡ ಪ್ರಯತ್ನ ಅದಾಗಿತ್ತು.

ಸರಿಸುಮಾರು ಅದೇ ಸಮಯದಲ್ಲಿ ಸ್ವಾಮಿ ರಾಮಕೃಷ್ಣಾ ನಂದಜಿಯವರ ಸತ್‌ಸಂಕಲ್ಪದಿಂದ ಮತ್ತು ಮದ್ರಾಸ್ ಆಶ್ರಮದ ಪ್ರಮುಖಭಕ್ತರಾದ ಶ್ರೀ ರಾಮಸ್ವಾಮಿ ಐಯ್ಯಂಗಾರ್ (ರಾಮು) ಅವರ ಅವಿಶ್ರಾಂತ ಪ್ರಯತ್ನದಿಂದ ಬಡ ಅನಾಥ ಮಕ್ಕಳ ಆಶ್ರಯಸ್ಥಾನವಾದ 'ರಾಮಕೃಷ್ಣ ಮಿಷನ್ ವಿದ್ಯಾರ್ಥಿಮಂದಿರ' ಆರಂಭವಾಯಿತು. ಅಲ್ಲಿ ಶಾಲಾ ವಿದ್ಯಾಭ್ಯಾಸದ ಜೊತೆಜೊತೆಯಲ್ಲಿ ಮನಸ್ಸಿನ ಏಕಾಗ್ರತೆ, ಪ್ರಾರ್ಥನೆ, ಭಜನೆ, ವೇದಪಠಣ, ಧ್ಯಾನ, ಶುಚಿತ್ವ ಮತ್ತು ಸ್ವಾವಲಂಬನೆಯ ಜೀವನಕ್ರಮವನ್ನೂ ಹೇಳಿ ಕೊಡಲಾಗುತ್ತದೆ. ಜೊತೆಯಲ್ಲಿ ವಿದ್ಯಾರ್ಥಿಗಳ ಮನಸ್ಸುಗಳಲ್ಲಿ ಸೇವಾಭಾವವನ್ನು ತುಂಬಲು ಅನೇಕ ರೀತಿಯ ಸೇವಾ ಕಾರ್ಯಗಳಲ್ಲಿ ಹಾಗೂ ಬಡವಿದ್ಯಾರ್ಥಿಗಳಿಗೆ ಉಚಿತ ವಿದ್ಯಾ ದಾನ ಕಾರ್ಯಗಳಲ್ಲಿ ಅವರನ್ನು ತೊಡಗಿಸಲಾಗುತ್ತದೆ. ಸ್ವಾಮಿ ರಾಮಕೃಷ್ಣಾನಂದಜಿಯವರು ನೆಟ್ಟ ಪುಟ್ಟ ಬೀಜವಿಂದು ಮಹಾ ವೃಕ್ಷವಾಗಿದೆ. ಏಳು ನಿರಾಶ್ರಿತ ಮಕ್ಕಳಿಂದ ಆರಂಭವಾದ ಸಂಸ್ಥೆ ಇಂದು ನೂರಾರು ಮಕ್ಕಳಿಗೆ ಆಶ್ರಯವಾಗಿದೆ.

ಶ್ರೀಮಾತೆಯವರ ಶುಭಾಶೀರ್ವಾದದೊಂದಿಗೆ ಕೊಲ್ಕತಾದಲ್ಲಿ ಆರಂಭವಾದ ಸೋದರಿ ನಿವೇದಿತಾಳ ಬಾಲಕಿಯರ ವಿದ್ಯಾಸಂಸ್ಥೆ ಈ ೧೧೯ ವರ್ಷಗಳಲ್ಲಿ ಸಾವಿರಾರು ಹೆಣ್ಣುಮಕ್ಕಳ ಜೀವನ ನಿರ್ಮಾಣದಲ್ಲಿ ನಿರತವಾಗಿದೆ. ಭಾರತೀಯ ಹೆಣ್ಣುಮಕ್ಕಳಿಗಾಗಿಯೇ ಎಂದು ವಿಶೇಷ ಮುತುವರ್ಜಿಯನ್ನು ವಹಿಸಿ ಸ್ವಾಮೀಜಿ ನಿವೇದಿತೆಯನ್ನು ಭಾರತಕ್ಕೆ ಅರ್ಪಿಸಿದುದಲ್ಲವೇ? ಆ ವಿದ್ಯಾ ಸಂಸ್ಥೆ ಹೆಣ್ಣುಮಕ್ಕಳಿಗೆ ಭಾರತೀಯ ವಿದ್ಯಾಭ್ಯಾಸವನ್ನು ನೀಡು ವುದರೊಂದಿಗೆ ಸ್ವಾವಲಂಬನೆಯನ್ನೂ ಕಲಿಸಿಕೊಟ್ಟಿತು; ರಾಷ್ಟ್ರೀಯ ಮೌಲ್ಯಗಳನ್ನು ಅವರ ಮನಸ್ಸುಗಳಲ್ಲಿ ಬಿತ್ತರಿಸಿತು. ತ್ಯಾಗ–ಸೇವೆಯ ಆದರ್ಶಕ್ಕೆ ತನ್ನನ್ನು ಸಮರ್ಪಿಸಿಕೊಂಡ ಸೋದರಿ ಸುಧೀರಾ, ಶ್ರೀಶಾರದಾ ಮಠದ ಕರ್ಣಧಾರತ್ವವನ್ನು ವಹಿಸಿದ ಪೂಜ್ಯ ಮಾತಾಜಿ ಭಾರತೀಪ್ರಾಣಾಜಿ ಹಾಗೂ ಇತರ ಧೀಮಂತ ಚೇತನಗಳನ್ನು ರಾಷ್ಟ್ರಕ್ಕೆ ನೀಡಿದ ಹಿರಿಮೆ ನಿವೇದಿತಾ ವಿದ್ಯಾಸಂಸ್ಥೆಯದು.

ಸೋದರಿ ನಿವೇದಿತಾಳ ವಿದ್ಯಾಸಂಸ್ಥೆಯ ಮಾದರಿ ಯಲ್ಲಿಯೇ ಮದ್ರಾಸಿನಲ್ಲಿ (ಇಂದಿನ ಚೆನ್ನೈ) ಶಾರದಾ ವಿದ್ಯಾ ಲಯ, ತನ್ನ ಸೇವಾಯಜ್ಞವನ್ನು ಆರಂಭಿಸಿತು. ಇಂದು ಶಾರದಾ ವಿದ್ಯಾಲಯದಲ್ಲಿ ಪ್ರತಿವರ್ಷ ೫೦೦೦ಕ್ಕಿಂತ ಅಧಿಕ ವಿದ್ಯಾರ್ಥಿ ನಿಯರು ಆಧುನಿಕ ವಿದ್ಯಾಭ್ಯಾಸದೊಂದಿಗೆ ನೈತಿಕ ಹಾಗೂ ಧಾರ್ಮಿಕ ಶಿಕ್ಷಣವನ್ನೂ ಪಡೆಯುತ್ತಿದ್ದಾರೆ.

ಇದಲ್ಲದೆ ಬೆಂಗಳೂರಿನ ವಿದ್ಯಾರ್ಥಿಮಂದಿರ, ಕಲ್ಕತ್ತಾದ ವಿದ್ಯಾರ್ಥಿಮಂದಿರ, ಸ್ವಾಮಿ ಅಖಂಡಾನಂದರು ಆರಂಭಿಸಿದ ಸಾರಗಾಚಿಯ ರಾಮಕೃಷ್ಣ ಮಿಷನ್ ಆಶ್ರಮದ ವಿದ್ಯಾಸಂಸ್ಥೆ ಮತ್ತು ಗ್ರಾಮೀಣ ಉದ್ಯೋಗ ತರಬೇತಿ ಕೇಂದ್ರ, ಕೊಯಮತ್ತೂರಿನ ರಾಮಕೃಷ್ಣ ಮಿಷನ್ ವಿದ್ಯಾಲಯ, ಬಂಗಾಳದ ಶಿರೀಷಾದ ರಾಮಕೃಷ್ಣ ಮಿಷನ್ ಆಶ್ರಮ, ಹರಿಜನರ ಉದ್ಧಾರಕ್ಕೆಂದು ಸ್ವಾಮಿ ತ್ಯಾಗೀಶಾನಂದಜೀಯವರಿಂದ ಆರಂಭಿಸಲ್ಪಟ್ಟ ಕೇರಳದ ತ್ರಿಶೂರಿನ ವಿದ್ಯಾರ್ಥಿಮಂದಿರ, ಝಾರ್‌ಖಂಡ ಪ್ರಾಂತ್ಯದ ಜಮಶೆಡ್‌ಪುರದ ವಿವೇಕಾನಂದ ಸೊಸೈಟಿಯ ವಿದ್ಯಾಸಂಸ್ಥೆಗಳು, ಸ್ವಾಮಿ ಶಾಂಭವಾನಂದಜೀಯವರ ದಕ್ಷ ನೇತೃತ್ವ ಮತ್ತು ಮಹಾತ್ಯಾಗದಿಂದ ಸ್ಥಾಪಿಸಲ್ಪಟ್ಟ ಮೈಸೂರಿನ ಶ್ರೀರಾಮಕೃಷ್ಣ ವಿದ್ಯಾಶಾಲೆ ಮತ್ತು ಶಿಕ್ಷಕರ ತರಬೇತಿ ಸಂಸ್ಥೆಯಾದ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ (RIMSE), ನರೇಂದ್ರಪುರದ ರಾಮಕೃಷ್ಣ ವಿದ್ಯಾಸಂಸ್ಥೆ, ಬೇಲೂರು ಮಠದ

ಶ್ರೀಶಾರದಾಪೀಠದ ಶೈಕ್ಷಣಿಕ ಸಮುಚ್ಚಯ – ಇನ್ನೂ ಹತ್ತು ಹಲವು ಶಾಲಾ–ಕಾಲೇಜುಗಳು ಮೌಲಿಕ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ನೀಡುವುದರೊಂದಿಗೆ ಸ್ವಾಮೀಜಿಯವರ ರಾಷ್ಟ್ರ ನಿರ್ಮಾಣದ ಕನಸನ್ನು ಸಾಕಾರಗೊಳಿಸುತ್ತಿವೆ.



## ಅತ್ಯುತ್ಕೃಷ್ಟ ಮಾನವ ನಿರ್ಮಾಣ

ಭಾರತೀಯ ಸಂಸ್ಕೃತಿ ಪ್ರಸಾರ ಹಾಗೂ ಸಂಶೋಧನೆಗೆ ಮೀಸಲಾದ ವಿಶೇಷ ಸಂಸ್ಥೆ ಕೊಲ್ಕತಾದ ರಾಮಕೃಷ್ಣ ಮಿಷನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್. ೧೯೩೮ರಲ್ಲಿ ರೂಪುತಾಳಿದ ಈ ಸಂಸ್ಥೆ ಕ್ರಮಿಸಿದ ಹಾದಿ ಶ್ಲಾಘ್ಯವಾದುದು. ಸ್ವಾಮೀಜಿಯವರ ಸಂದೇಶವು ಪೂರ್ವ–ಪಶ್ಚಿಮವನ್ನು ಬೆಸೆಯಬಲ್ಲುದು. ಈ ಪ್ರಯತ್ನದಲ್ಲಿ ಪೂರ್ವ ಹಾಗೂ ಪಶ್ಚಿಮದ ಚಿಂತಕರು, ವಿದ್ವಾಂಸರನ್ನು ಒಂದೆಡೆ ಸೇರಿಸಿ, ಅವರ ಅಭಿಪ್ರಾಯಗಳನ್ನು ಚರ್ಚಿಸುವ ಒಂದು ಪ್ರಮುಖ ಕೇಂದ್ರ ಇದು. ಇದು ನಮ್ಮ ಧೀಮಂತ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಪರಂಪರೆಯನ್ನು ಯುವಜನಾಂಗಕ್ಕೆ ಪರಿಚಯಿಸುವ ಕೇಂದ್ರವೂ ಹೌದು. ಭಾರತೀಯ ಪುರಾತತ್ತ್ವ ವಿದ್ಯೆ (Indological Studies) ಕುರಿತ ಸಂಶೋಧನ ಕೇಂದ್ರವೂ ಅಲ್ಲಿದೆ.

ಹೈದರಾಬಾದಿನ ವಿವೇಕಾನಂದ ಇನ್‌ಸ್ಟಿಟ್ಯೂಟ್ ಆಫ್ ಹ್ಯೂಮನ್ ಎಕ್ಸಲನ್ಸ್ ಸಮಾಜದ ವಿವಿಧ ಅಂಗಗಳಾದ ಯುವಕರು, ಶಿಕ್ಷಕರು, ಸರಕಾರಿ ಉದ್ಯೋಗಿಗಳು, ಸಾರ್ವಜನಿಕ ಸಂಸ್ಥೆಗಳು, ಇಂಜಿನಿಯರುಗಳು, ಡಾಕ್ಟರರು ಹಾಗೂ ಇತರರ ಆವಶ್ಯಕತೆಗೆ ತಕ್ಕಂತಹ ಸ್ಫೂರ್ತಿ ಮತ್ತು ಪ್ರೇರಣಾದಾಯಕ ಕಾರ್ಯಕ್ರಮಗಳು, ಆತ್ಮವಿಶ್ವಾಸವನ್ನು ನೀಡುವಂತಹ ಕಾರ್ಯಾಗಾರಗಳು, ವ್ಯಕ್ತಿತ್ವ ವಿಕಾಸ ತರಗತಿಗಳು, ಧ್ಯಾನ ತರಗತಿಗಳು, ಪೋಷಕರಿಗೆ ಕಾರ್ಯಾಗಾರಗಳು, ಗ್ರಾಮೀಣ ವಿಕಾಸ ಯೋಜನೆಗಳು – ಹೀಗೆ ಬಹಳಷ್ಟು ಮಹತ್ವಪೂರ್ಣ ಕಾರ್ಯಕ್ರಮಗಳನ್ನು ನಡೆಸುತ್ತಿದೆ.

ಕಲ್ಕತ್ತಾದ ಸ್ವಾಮಿ ವಿವೇಕಾನಂದರ ಪುರಾತನ ಗೃಹದಲ್ಲಿ ವಿವೇಕಾನಂದ ಸಂಶೋಧನ ಕೇಂದ್ರ ಕಾರ್ಯನಿರತವಾಗಿದ್ದು ಅದು ರಾಮಕೃಷ್ಣ–ವಿವೇಕಾನಂದ ಭಾವಧಾರೆಯ ಸಂಶೋಧನೆ, ಪ್ರಜ್ಞೆ ಅಥವಾ ಚೈತನ್ಯದ (consciousness) ವಿವಿಧ ಸ್ತರಗಳ ಅಧ್ಯಯನ, ಗಣಿತಶಾಸ್ತ್ರ, ಕಂಪ್ಯೂಟರ್ ವಿಜ್ಞಾನ ಇತ್ಯಾದಿ ಶಾಖೆಗಳಲ್ಲಿ ವಿಶೇಷ ಸಂಶೋಧನೆಯನ್ನು ಕೈಗೊಂಡಿದೆ.

ಮಾನವನ ಬುದ್ಧಿಸತ್ವದ ಪೂರ್ಣ ವಿಕಾಸದೊಂದಿಗೆ ಅತ್ಯುತ್ಕೃಷ್ಟ ಮಾನವ ನಿರ್ಮಾಣವೇ ಈ ಎಲ್ಲ ಸಂಸ್ಥೆಗಳ ಗುರಿ.

## ಬುಡಕಟ್ಟು ಜನಾಂಗಗಳಲ್ಲಿ ಭಾರತ ನಿರ್ಮಾಣ

ಸ್ವಾಮೀಜಿಯವರು, ನಮ್ಮ ಭಾರತ ಇರುವುದು ಗ್ರಾಮಗಳಲ್ಲಿ ಎಂದು ಹೇಳಿದ್ದರು. ಜನಸಾಮಾನ್ಯರನ್ನು ಕಡೆಗಣಿಸಿದುದು ನಮ್ಮ ದೊಡ್ಡ ತಪ್ಪು ಎಂಬ ಎಚ್ಚರಿಕೆಯನ್ನೂ ನೀಡಿದರು. ಸಂಸ್ಕೃತಿಯ ಗಂಧಗಾಳಿ ಇಲ್ಲದೆ ಆದಿವಾಸಿ ಬಾಳುವೆಯನ್ನು ನಡೆಸುತ್ತಿರುವ ಹಿಂದುಳಿದ ಜನರು ವಾಸಿಸುತ್ತಿರುವ ಗುಡ್ಡಗಾಡು ಪ್ರದೇಶಗಳಲ್ಲಿ ರಾಮಕೃಷ್ಣ ಮಿಷನ್ ಶೈಕ್ಷಣಿಕ ಕೇಂದ್ರಗಳನ್ನು ತೆರೆದಿದೆ. ಮೇಘಾಲಯದ ಚಿರಾಪುಂಜಿ, ಅರುಣಾಚಲ ಪ್ರದೇಶದ ಅಲಾಂಗ್, ತ್ರಿಪುರಾದ ಅಗರ್ತಲಾ, ಛತ್ತೀಸಗಢದ ನಾರಾಯಣಪುರ – ಹೀಗೆ ಎಲ್ಲಿ ಜನರಿಗೆ ಬಟ್ಟೆಬರೆಗಳನ್ನು ಹಾಕಿಕೊಳ್ಳಲೂ ಬರುತ್ತಿರಲಿಲ್ಲವೋ, ಅಲ್ಲೆಲ್ಲ ಪ್ರೇಮವಿಶ್ವಾಸದಿಂದ ಅವರ ಮನಗಳನ್ನು ಗೆದ್ದು, ಅವರ ಮೂಢ ನಂಬಿಕೆಗಳನ್ನೆಲ್ಲ ನಿವಾರಿಸಿ, ಅವರಿಗೆ ಶಿಕ್ಷಣ, ಸಂಸ್ಕೃತಿ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ನೀಡಿ, ಅವರ ಸ್ಥಳೀಯ ಕಲೆ–ಪ್ರತಿಭೆಗಳನ್ನು ಪುರಸ್ಕರಿಸಿ ಅವರನ್ನು ಮೇಲೆತ್ತುವ ಭೀಮಕಾರ್ಯದಲ್ಲಿ ರಾಮಕೃಷ್ಣ ಮಿಷನ್ನಿನ ಸಾಧುಗಳು ನಿರತರಾಗಿದ್ದಾರೆ. ಪಾವಿತ್ರ್ಯದ ಜ್ವಾಲೆಯಿಂದ ಕೂಡಿ, ಭಗವಂತನಲ್ಲಿ ಅಪ್ರತಿಮ ಶ್ರದ್ಧೆಯನ್ನು ಹೊಂದಿ, ಸಿಂಹಸದೃಶ ಕೆಚ್ಚಿನಿಂದ ಕೂಡಿ ಮಾನವತೆಯ ಕಲ್ಯಾಣಕ್ಕಾಗಿ ಕೋಟಿ ತಾಯಂದಿರ ಹೃದಯವನ್ನು ಹೊಂದಿ ಈ ಸಂನ್ಯಾಸಿಗಳು ಕಾರ್ಯನಿರತರಾಗಿದ್ದಾರೆ. ಒಂದೊಂದು ಪ್ರದೇಶದ ಜನಾಂಗವನ್ನು ಮೇಲೆತ್ತುವಲ್ಲಿ ಒಂದೊಂದು ಆಶ್ರಮದ ಮಹಾನ್ ಸಾಹಸಗಾಥೆಯು ರೋಮಾಂಚಕವಾದುದು; ತ್ಯಾಗ–ಸೇವಾಯಜ್ಞದಲ್ಲಿ ನಮ್ಮೆಲ್ಲರಿಗೂ ಸದಾ ಸ್ಫೂರ್ತಿಯನ್ನು ನೀಡುವಂಥದು.

## ವಿದ್ಯಾರ್ಥಿ ದೇವೋಭವ

ಶ್ರೀರಾಮಕೃಷ್ಣರ ಪ್ರತ್ಯಕ್ಷಶಿಷ್ಯರಾದ ಸ್ವಾಮಿ ಅಖಂಡಾನಂದಜಿಯವರು ಬರಗಾಲಪೀಡಿತ ಮುರ್ಷಿದಾಬಾದ್ ಜಿಲ್ಲೆಯ ಸಾರಗಾಚಿ ಎಂಬ ಹಳ್ಳಿಯಲ್ಲಿ ಬಡ ನಿರಾಶ್ರಿತ ಮಕ್ಕಳಿಗೆ ಅನಾಥಾಶ್ರಮವನ್ನು ಆರಂಭಿಸಿದರು. ಜೀವರಲ್ಲಿ ಶಿವನನ್ನು ಕಾಣುತ್ತಿದ್ದ ಸ್ವಾಮಿಗಳ ಮನಸ್ಸು ಅದಾವ ಉನ್ನತ ಭೂಮಿಕೆಯಲ್ಲಿ ಇದ್ದಿತೆಂದರೆ, ಅವರು ದಾರಿಯಲ್ಲಿ ಸಂಚರಿಸುವಾಗ ಯಾವ ಅನಾಥ ಮಗು ನರಳುವುದನ್ನು ಕಂಡರೂ, ಅದನ್ನೆತ್ತಿಕೊಂಡು ಆಶ್ರಮಕ್ಕೆ ಕರೆತರುತ್ತಿದ್ದರು. ಬೆಚ್ಚನೆಯ ನೀರು ಮತ್ತು ಸಾಬೂನಿನಿಂದ ಮಕ್ಕಳಿಗೆ ಸ್ನಾನ ಮಾಡಿಸುವಾಗ ದೇವರಿಗೆ

ಅಭಿಷೇಕ ಮುಹೂರ್ತದಲ್ಲಿ ಹೇಳುವಂತಹ ಪುರುಷಸೂಕ್ತದ ಮಂತ್ರಗಳನ್ನು ಅವರು ಹೇಳುತ್ತಿದ್ದರು. ಆಗ ಅವರ ಮನಸ್ಸು ದೈವೀಭಾವದಿಂದ ಓತಪ್ರೋತವಾಗುತ್ತಿತ್ತು. ರಕ್ತಮಾಂಸಗಳಿಂದ ಕೂಡಿದ ಮಾನವರೂಪಿ ಭಗವಂತನು ತಮ್ಮ ಪೂಜೆಯನ್ನು ಸ್ವೀಕರಿಸಿದನಲ್ಲವೇ ಎಂಬ ಸಾರ್ಥಕತೆಯ ಭಾವ ಅವರ ಮನಸ್ಸಿನಲ್ಲಿ ಮೂಡುತ್ತಿತ್ತು.

ಅಜ್ಞಾನ, ಅನಕ್ಷರತೆ ಮತ್ತು ಮೂಢನಂಬಿಕೆಗಳಿಂದ ಅತ್ಯಂತ ಹಿಂದುಳಿದ, ಹಿಂದೂ–ಮುಸಲ್ಮಾನರಿಬ್ಬರಿಂದಲೂ ತಿರಸ್ಕಾರಕ್ಕೆ ಒಳಗಾದ ಪ್ರದೇಶಗಳೆಂದರೆ ಬಾಂಗ್ಲಾದೇಶದ ಸಿಲ್‌ಹಟ್, ಹಬಿಗಂಜ್ ಗ್ರಾಮಗಳು. ಅಲ್ಲಿನ ಬಡ ಚಮ್ಮಾರರಿಗೆ ಸ್ವಾಮಿ ಅಶೋಕಾನಂದಜಿಯವರು (ಆಗ ಯೋಗೇಶ ಚಂದ್ರ ದತ್ತ) ರಾತ್ರಿ ಶಾಲೆಗಳನ್ನು ತೆರೆದರು. ಸುಶಿಕ್ಷಿತ ಯುವಕರ ತಂಡವೊಂದು ಅವರಿಗೆ ನೆರವಾಯಿತು. ಅವರು ರಾತ್ರಿ ಲಾಟೀನುಗಳನ್ನು ಹಿಡಿದುಕೊಂಡು ಮನೆಯಿಂದ ಮನೆಗೆ ಸಂಚರಿಸಿ, ಕೊಳಗೇರಿಯಲ್ಲಿದ್ದ ಮಕ್ಕಳನ್ನು ಅಕ್ಷರಶಃ ಹಿಡಿದುತಂದು ಆ ರಾತ್ರಿ ಶಾಲೆಗಳಿಗೆ ಸೇರಿಸುತ್ತಿದ್ದರು. ಮಳೆಯ ಪ್ರವಾಹದ ನಡುವೆಯೂ ಅವರು ಅಲ್ಲಿದ್ದ ಪುಟ್ಟ ನದಿಯನ್ನು ಈಜಿಕೊಂಡು ಹೋಗಿ ಮಕ್ಕಳಿಗೆ ವಿದ್ಯೆಯನ್ನು ಬೋಧಿಸುತ್ತಿದ್ದರು. ಆ ಹಸಿದ ಮಕ್ಕಳ ಮುಖಗಳನ್ನು ನೋಡಲಾಗದೆ ಮನೆಯಿಂದ ಮನೆಗೆ ಹೋಗಿ ಭಿಕ್ಷೆಬೇಡಿ, ಅವರಿಗೆ ಆಹಾರವನ್ನು ನೀಡುತ್ತಿದ್ದರು. ಅವರೊಂದಿಗೆ ಆತ್ಮೀಯವಾಗಿ ಬೆರೆತು ಕಷ್ಟ–ದುಃಖ–ಸಮಸ್ಯೆಗಳನ್ನು ಹಂಚಿಕೊಂಡು ಅವನ್ನು ತಗ್ಗಿಸಲು ಪ್ರಯತ್ನಿಸುತ್ತಿದ್ದರು. ಜೀವರಲ್ಲಿ ಶಿವನನ್ನು ಕಾಣದೆ ಈ ಬಗೆಯ ಮಹಾಯಜ್ಞ ನಡೆಯಲು ಸಾಧ್ಯವೇ?

## ಉಪಸಂಹಾರ

ಶ್ರೀರಾಮಕೃಷ್ಣರ ಸಾಕ್ಷಾತ್ ಶಿಷ್ಯರಾದ ಸ್ವಾಮಿ ಪ್ರೇಮಾನಂದಜಿ ಒಮ್ಮೆ ಹೀಗೆ ಹೇಳಿದರು: "ಶಾಲೆಗಳನ್ನು, ಶಿಕ್ಷಣಸಂಸ್ಥೆಗಳನ್ನು ತೆರೆದು ವಿದ್ಯಾದಾನ, ಜ್ಞಾನದಾನವನ್ನು ಮಾಡುವುದು ಸ್ವಾಮೀಜಿಯವರಿಗೆ ಅತಿಪ್ರಿಯವಾಗಿತ್ತು. ಅದನ್ನು ಹೆಚ್ಚೆಚ್ಚು ಮಾಡಲು ಪ್ರಯತ್ನಿಸಿರಿ. ಈ ಸತ್ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಭಾಗ್ಯಶಾಲಿಗಳು ಭೂಮಿಯ ಮೇಲಣ ದೇವರುಗಳೇ ಆಗಿದ್ದಾರೆ. ಅವರು ಮಾತ್ರವೇ ಸ್ವಾಮೀಜಿಯವರ ನಿಸ್ವಾರ್ಥ ಕಿಂಕರರು; ಅಂಥವರ ಜೀವನ ನಿಜವಾಗಿಯೂ ಸಾರ್ಥಕವಾದುದು; ಅವರೇ ಈ ಭೂಮಿಯ ಸಾರಸತ್ತ್ವವಾಗಿದ್ದಾರೆ."

ಶ್ರೀರಾಮಕೃಷ್ಣ ಮಹಾಸಂಘವು ಅಧ್ಯಾತ್ಮವಿದ್ಯಾಪ್ರಸಾರ ಹಾಗೂ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳ ಪ್ರಸಾರಕಾರ್ಯದಲ್ಲಿ ಮುಂದೆ ಕೈಗೊಳ್ಳಲಿರುವ ಮಹಿಮಾಪೂರ್ಣ ಶ್ಲಾಘನೀಯ ಸೇವೆಯನ್ನು ಮನಗಂಡು ಸ್ವಾಮಿ ವಿವೇಕಾನಂದರು ಅಂದೇ ಸಾರಿದ್ದರು: "ಬೇಲೂರು ಮಠದಿಂದ ಹೊರಹೊಮ್ಮಲಿರುವ ಮಹಾಶಕ್ತಿಯು ಇಡೀ ಜಗತ್ತನ್ನು ಪಾವನಗೊಳಿಸಿ ವಿವಿಧ ಕ್ಷೇತ್ರಗಳಲ್ಲಿರುವ ಮಾನವ ಜೀವನವನ್ನು ಪರಿವರ್ತನಗೊಳಿಸಲಿದೆ" ಎಂದು. ಆ ಭವಿಷ್ಯವಾಣಿ ಇಂದು ನಿಜವಾಗಿರುವುದನ್ನು ನಾವು ಕಣ್ಣಾರೆ ಕಾಣಬಹುದು.



# ಸೇವಾಕಲ್ಪತರು ರಾಮಕೃಷ್ಣ ಮಿಷನ್ ಆಸ್ಪತ್ರೆ, ಇಟಾನಗರ್



ಬ್ರ. ಸುವಿಮಲಚೈತನ್ಯ

**ರಾಮಕೃಷ್ಣ ಮಿಷನ್ ಗಿರಿಜನರ ನಾಡಾದ ಅರುಣಾಚಲ ಪ್ರದೇಶದಲ್ಲಿ ಅತಿ ಉನ್ನತ ಮಟ್ಟದ ವೈದ್ಯಕೀಯ ಸೇವೆಯನ್ನು ನಡೆಸುತ್ತಿದೆ. ಇದನ್ನು ಸಾಕಾರಗೊಳಿಸುವಲ್ಲಿ ಸಂನ್ಯಾಸಿಗಳ ನಿಸ್ವಾರ್ಥ ಸೇವೆ ಮತ್ತು ದಕ್ಷತೆಯ ಸಾಹಸ ಕಥೆಯನ್ನು ಬಿಂಬಿಸಿರುವ ಲೇಖಕರು ಮೈಸೂರಿನ ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

**ಧ್ಯೇಯ:** **'ಸರ್ವಂ ಖಲ್ವಿದಂ ಬ್ರಹ್ಮ'** ಎಂಬ ಉಪನಿಷತ್ತಿನ ವಾಕ್ಯವನ್ನು ಕೇವಲ ಬಾಯಿ ಮಾತಾಗಿಸದೆ ಅನುಷ್ಠಾನ ರೂಪಗೊಳಿಸಲು, ಸ್ವಾಮಿ ವಿವೇಕಾನಂದರು ರಾಮಕೃಷ್ಣ ಮಹಾಸಂಘವನ್ನು ಪ್ರಾರಂಭಿಸಿದರು. **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಎಂಬ ಧ್ಯೇಯವಾಕ್ಯವನ್ನು ನೀಡಿದರು. ತಮ್ಮ ಆತ್ಮಕಲ್ಯಾಣ ಮತ್ತು ಜಗತ್ತಿನ ಹಿತವನ್ನು 'ಸೇವೆ' ಮತ್ತು 'ವೈರಾಗ್ಯ' ಎಂಬ ಸಾಧನಗಳ ಮೂಲಕ ಸಾಧಿಸಲು ತಿಳಿಸಿದರು. ಕರ್ಮಯೋಗ ಅಥವಾ ನಿಸ್ವಾರ್ಥ ಸೇವೆಯನ್ನು ಸಂನ್ಯಾಸಿಗಳಿಗೂ ಮಾಡಲು ಹೇಳುವ ಮೂಲಕ, ಅವರನ್ನು ಹೀಯಾಳಿಸುವವರ ಮಾತಿಗೆ ಅರ್ಥವಿಲ್ಲದಂತೆ ಮಾಡಿದರು. ನರರೂಪಿ ಭಗವಂತನ ಸೇವೆ ಮಾಡುವುದರಿಂದ ಭಗವಂತನನ್ನು ಕಾಣಲು ಸಾಧ್ಯ ಎಂಬ ನವೀನ ವೇದಾಂತ ಅಥವಾ ಪ್ರಾಯೋಗಿಕ ವೇದಾಂತವನ್ನು ಸಮಾಜಕ್ಕೆ ನೀಡಿದರು. ಇದನ್ನು ಅನುಷ್ಠಾನಗೊಳಿಸಲೆಂದು ರಾಮಕೃಷ್ಣ ಮಹಾಸಂಘ ಮತ್ತು ಹಲವಾರು ಸಂಘ-ಸಂಸ್ಥೆಗಳು ವಿಶ್ವದಾದ್ಯಂತ ಪರಿಶ್ರಮಿಸುತ್ತಿವೆ.

**ಸೇವಾಕಾರ್ಯದ ಅಂಕುರ:** ನಮ್ಮ ವಿಶಾಲ ಭಾರತಕ್ಕೆ ಸ್ವಾತಂತ್ರ್ಯ ಬಂದ ಹದಿನೈದು ವರ್ಷಗಳಲ್ಲಿ, ಚೀನಾ ದೇಶವು ಈಶಾನ್ಯ ಭಾರತದ ಹಿಮಾಲಯದ ಗಡಿಯ ಭಾಗದ ವಿವಾದವನ್ನು ತೆಗೆದು, ನಮ್ಮ ಮೇಲೆ ಯುದ್ಧವನ್ನು ಸಾರಿತು. ಅಂದು ಭಾರತಕ್ಕೆ ಚೀನಾವನ್ನು ಎದುರಿಸಲು ಸಾಧ್ಯವಾಗದೆ ಸೋಲನ್ನು ಅನುಭವಿಸಬೇಕಾಯಿತು. ಸುಮಾರು ಒಂದು ತಿಂಗಳ ತರುವಾಯ ಚೀನಾದೇಶವು ಕದನ ವಿರಾಮವನ್ನು ಘೋಷಿಸಿತು. ಆದರೆ ಆ ವೇಳೆಗಾಗಲೇ ಭಾರತವು ಹಲವಾರು ವೀರಯೋಧರನ್ನು, ಭೂಸಂಪತ್ತನ್ನು ಕಳೆದುಕೊಂಡಿತ್ತು. ಮುಖ್ಯವಾಗಿ ಅಲ್ಲಿನ ಸ್ಥಳೀಯರು ಭಾರತದ ಬಗೆಗೆ ವಿಶ್ವಾಸವನ್ನೇ ಕಳೆದುಕೊಂಡಿದ್ದರು. ಅಂದು ಈಶಾನ್ಯ ಭಾರತವು ಅತಿ ಹಿಂದುಳಿದ ಪ್ರದೇಶವಾಗಿತ್ತು. ಯಾವುದೇ ಮೂಲಭೂತ ಸೌಕರ್ಯಗಳಿಲ್ಲದೆ ಜನರು ನರಳುತ್ತಿದ್ದರು. ಜನರಿಗೆ ಸೂಕ್ತ ರಕ್ಷಣೆ-ನೆರವುಗಳನ್ನು ನೀಡುವುದರ ಮೂಲಕ, ಸರ್ಕಾರ ಪುನಃ ಜನರ ವಿಶ್ವಾಸವನ್ನು ಪಡೆಯಬೇಕೆಂದು ಭಾರತದ ಅಂದಿನ ಪ್ರಧಾನಮಂತ್ರಿಗಳಾಗಿದ್ದ ಶ್ರೀಮತಿ ಇಂದಿರಾ ಗಾಂಧಿಯವರು ಆಲೋಚಿಸಿದರು. ಅದಕ್ಕಾಗಿ ಹಲವಾರು ಯೋಜನೆಗಳನ್ನೂ ರೂಪಿಸಿದರು. ಆದರೆ ಅದನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರದ ಜೊತೆಗೆ ಸಮರ್ಥ ಸಂಘ-ಸಂಸ್ಥೆಗಳ ನೆರವೂ ಅತ್ಯಗತ್ಯ ಎಂದು ಅವರು ತಿಳಿದಿದ್ದರು. ಆಗ ಅವರ ಮನಸ್ಸಿಗೆ ಬಂದದ್ದು 'ರಾಮಕೃಷ್ಣ ಮಹಾಸಂಘ'ದ ಹೆಸರು. ಕಾಕತಾಳೀಯ ಎಂಬಂತೆ ಅರುಣಾಚಲ ರಾಜ್ಯದ ಅಂದಿನ ರಾಜ್ಯಪಾಲರು, ಪ್ರಧಾನಮಂತ್ರಿಗಳ ಬಳಿ ಅಲ್ಲಿನ ಸಮಸ್ಯೆಗಳನ್ನು ತಿಳಿಸಿ, ಅವುಗಳನ್ನು ನಿವಾರಿಸಲು ರಾಮಕೃಷ್ಣ ಮಹಾಸಂಘವು ಸಮರ್ಥವೆಂದು ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದರು. ಇದನ್ನು ಕೇಳಿದ ಪ್ರಧಾನಮಂತ್ರಿಗಳು, ತಮ್ಮ ಮನಸ್ಸಿನ ಇಂಗಿತವನ್ನೇ ರಾಜ್ಯಪಾಲರು ವ್ಯಕ್ತಪಡಿಸಿದ್ದನ್ನು ಕಂಡು ಸಂತೋಷಿಸಿದರು; ರಾಮಕೃಷ್ಣ ಸಂಘದ ಪ್ರಧಾನಕೇಂದ್ರಕ್ಕೆ ಈಶಾನ್ಯ ಭಾರತದಲ್ಲಿ ತಮ್ಮ ಸೇವೆಯು ಅವಶ್ಯವೆಂದು ತಿಳಿಸಿ ಆಮಂತ್ರಿಸಿದರು. ಜೊತೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಯಥಾಸಾಧ್ಯ ನೆರವನ್ನು ನೀಡುವುದಾಗಿ ಮಾತನ್ನಿತ್ತರು. ೧೯೬೬ರ ಜುಲೈ ೨೧ರಂದು ಪ್ರಧಾನಮಂತ್ರಿಗಳು ಈ ರೀತಿಯಾಗಿ ಪತ್ರ ಬರೆಯುತ್ತಾರೆ: "ನಾಗಾಲ್ಯಾಂಡ್ ಮತ್ತು ನೇಫಾ ಪ್ರದೇಶಗಳಿಗೆ ನಾನು ಕೈಗೊಂಡ ಮೊದಲ ಭೇಟಿಯಲ್ಲೇ, ಅಲ್ಲಿ ನಿಸ್ವಾರ್ಥದಿಂದ, ಮಹಾನ್ ಉದ್ದೇಶವನ್ನು ಹೊಂದಿ ಕಾರ್ಯಗಳನ್ನು ಮಾಡುವ ಸೇವಾಸಂಸ್ಥೆಯೊಂದರ ಅತ್ಯಗತ್ಯವಿದೆ ಎಂದು ನನಗೆ ವೇದ್ಯವಾಯಿತು. ಆಗ ಸಹಜವಾಗಿಯೇ ನನ್ನ ಮನಸ್ಸಿಗೆ ಬಂದ ಹೆಸರು 'ರಾಮಕೃಷ್ಣ ಸಂಘ'. ಕೆಲವು ದಿನಗಳ ಹಿಂದೆ ಅಲ್ಲಿನ ರಾಜ್ಯಪಾಲರು ನನಗೆ ಒಂದು ಪತ್ರವನ್ನು ಬರೆದಿದ್ದರು. ಅದರಲ್ಲಿ ರಾಮಕೃಷ್ಣ ಮಿಷನ್ನಿನ ಸಂನ್ಯಾಸಿಗಳು ನೇಫಾಗೆ ಬಂದು, ಮುಖ್ಯವಾಗಿ ಶಿಕ್ಷಣ ಮತ್ತು ವೈದ್ಯಕೀಯ ಸೇವೆಗಳನ್ನು ಆರಂಭಿಸಬಹುದೇ ಎಂಬ ಇಚ್ಛೆಯನ್ನು ವ್ಯಕ್ತಪಡಿಸಿದ್ದಾರೆ.... ರಾಮಕೃಷ್ಣ ಸಂಘವು ಎಲ್ಲಿಯೂ, ಯಾರ ಸಂಸ್ಕೃತಿಯೊಡನೆಯೂ




ಸಂಘರ್ಷಕ್ಕೆ ಇಳಿಯದೆ, ಯಾರ ನಂಬಿಕೆಗಳನ್ನೂ ಮುರಿಯುವ ಪ್ರಯತ್ನದಲ್ಲಿ ತೊಡಗದೆ, ಪ್ರಾಮಾಣಿಕತೆ ಮತ್ತು ನಿರಪೇಕ್ಷ ಭಾವದಿಂದ ಸಮಾಜಕ್ಕೆ ಹಿತವನ್ನು ಉಂಟುಮಾಡುವ ಸೇವಾ ಚಟುವಟಿಕೆಗಳನ್ನು ಮಾಡುವುದರಿಂದ ಹಾಗೂ ಸಂಘದ ಬಗ್ಗೆ ಎಲ್ಲ ಸ್ತರದವರಿಗೂ ಅತೀವ ಭಕ್ತಿ–ಗೌರವವಿರುವುದರಿಂದ ತಮ್ಮನ್ನು ಆಹ್ವಾನಿಸುತ್ತಿದ್ದೇನೆ." 'ಶಿವಜ್ಞಾನೇ ಜೀವಸೇವಾ' ಎಂಬ ಆದರ್ಶವನ್ನು ಪಾಲಿಸುತ್ತಿದ್ದ ರಾಮಕೃಷ್ಣ ಸಂಘದ ಯತಿಗಳು ಇದಕ್ಕೆ ಒಪ್ಪಿಗೆಯನ್ನಿತ್ತು, ಆ ಮಹಾನ್ ಕಾರ್ಯಕ್ಕೆ ಅರ್ಹರಾದ ಸಂನ್ಯಾಸಿಗಳನ್ನು ನೇಮಿಸಿದರು.

**ಆಸ್ಪತ್ರೆಯ ಆರಂಭ :** ೧೯೬೫–೬೬ರಲ್ಲಿ ಅಲಾಂಗ್ ಎಂಬ ಜಾಗದಲ್ಲಿ ವಸತಿಶಾಲೆಯು ಆರಂಭವಾಯಿತು. ಅದರ ಯಶಸ್ಸನ್ನು ಕಂಡ ಸ್ಥಳೀಯರು ಒಂದು ಆರೋಗ್ಯ ಕೇಂದ್ರವನ್ನು ಪ್ರಾರಂಭಿಸಬೇಕೆಂದು, ರಾಜ್ಯಪಾಲರ ಮೂಲಕ ರಾಮಕೃಷ್ಣ ಸಂಘಕ್ಕೆ ಮತ್ತೊಮ್ಮೆ ಮೊರೆಹೋದರು. ರಾಮಕೃಷ್ಣ ಮಿಷನ್ನಿನ ಟ್ರಸ್ಟಿಗಳು ಅಲ್ಲಿನ ಪರಿಸ್ಥಿತಿಯನ್ನು ಅವಲೋಕಿಸಿ ಇನ್ನೊಬ್ಬ ಸಂನ್ಯಾಸಿಯನ್ನು ಕಳುಹಿಸಿದರು. ಅವರೇ ಸ್ವಾಮಿ ಪ್ರಥಮಾನಂದಜಿ. ಅವರು ಸರ್ಕಾರವು ಆಸ್ಪತ್ರೆಗೆಂದು ನೀಡಿದ ಪ್ರದೇಶವನ್ನು ನೋಡಲು ಹೋದಾಗ, ಅದು ಮುಳ್ಳುಪೊದೆಗಳಿಂದ, ತಗ್ಗು–ದಿಣ್ಣೆಗಳಿಂದ, ಹಳ್ಳಕೊಳ್ಳಗಳಿಂದ ಕೂಡಿತ್ತು. ಇದನ್ನು ನೋಡಿದ ಸ್ವಾಮಿಗಳು ಎದೆಗುಂದದೆ ತಮ್ಮ ಗುರುದೇವರನ್ನು ಸ್ಮರಿಸಿ, ದಿಟ್ಟತನದಿಂದ ಆ ಪ್ರದೇಶವನ್ನು ಶುಚಿಮಾಡಲು ಆರಂಭಿಸಿದರು. ಕೆಲವೇ ದಿನಗಳಲ್ಲಿ ಪ್ರಾಥಮಿಕ ಆಸ್ಪತ್ರೆಗೆ ಬೇಕಾಗುವ ಸ್ಥಳವನ್ನು ಸ್ವಚ್ಛಗೊಳಿಸಿದ್ದನ್ನು ಕಂಡು ಸ್ಥಳೀಯರು ಮತ್ತು ಅಧಿಕಾರಿಗಳು ದಿಗ್ಭ್ರಮೆಗೊಂಡು, "ಅಬ್ಬಾ! ಇವರು ಏನನ್ನು ಬೇಕಾದರೂ ಸಾಧಿಸುತ್ತಾರೆ" ಎಂದು ಹುಬ್ಬೇರಿಸಿದರು.

ಪ್ರತಿಫಲವಾಗಿ ೧೯೭೭, ಡಿಸೆಂಬರ್ ೨೮ರಂದು ಅಂದಿನ ರಾಜ್ಯಪಾಲರಾದ ಶ್ರೀ ಕೆ. ಎ. ಎ. ರಾಜಾರವರು ರಾಮಕೃಷ್ಣ ಮಿಷನ್ ಆಸ್ಪತ್ರೆಯ ಶಂಕುಸ್ಥಾಪನೆಯನ್ನು ನೆರವೇರಿಸಿದರು. ೧೯೭೯, ಅಕ್ಟೋಬರ್ ೧ರಂದು ರಾಮಕೃಷ್ಣ ಮಹಾಸಂಘದ ಪರಮಾಧ್ಯಕ್ಷರಾಗಿದ್ದ ಪರಮಪೂಜ್ಯ ಸ್ವಾಮಿ ವೀರೇಶ್ವರಾನಂದಜಿ ಮಹಾರಾಜ್‌ರವರು ರಾಮಕೃಷ್ಣ ಮಿಷನ್ ಆಸ್ಪತ್ರೆಯನ್ನು ಉದ್ಘಾಟಿಸಿದರು. ಸ್ವಾಮಿ ಪ್ರಥಮಾನಂದಜಿ (ಪ್ರೀತಿ ಮಹಾರಾಜ್) ಮೊದಲನೇ ಕಾರ್ಯದರ್ಶಿಗಳಾಗಿ ತಮ್ಮ ಸೇವೆಯನ್ನು ಎರಡು ದಶಕಗಳಿಗಿಂತ ಹೆಚ್ಚು ಕಾಲ ಸಲ್ಲಿಸಿದರು. ಇಂದು ಅರುಣಾಚಲ ರಾಜ್ಯದಲ್ಲೇ ಇದು ಮಾದರಿ ವೈದ್ಯಕೀಯ ಕೇಂದ್ರವಾಗಿ ಅಭಿವೃದ್ಧಿ ಹೊಂದಿದೆ. ಹಳ್ಳಿಯ ಮತ್ತು ಬುಡಕಟ್ಟು ಜನಾಂಗದವರಿಗೆ ಇದು ಅಮೃತದ ಜೀವಬಿಂದುವಾಗಿ ಮಾರ್ಪಟ್ಟಿದೆ.

ರೋಗಗಳ ಕುರಿತು ಸರಿಯಾದ ತಿಳಿವಳಿಕೆಯಿಲ್ಲದೆ, ಹಳೆಯ ಮೂಢ ಪದ್ಧತಿಗಳನ್ನು ಅನುಸರಿಸುತ್ತಾ, ಅಲ್ಲಿಯ ಗ್ರಾಮಸ್ಥರು ಮತ್ತು ಗಿರಿಜನರು ಸಾಂಕ್ರಾಮಿಕ ರೋಗಗಳಿಂದ, ಹಲವಾರು ಬಾರಿ ಮೃತ್ಯುದೇವತೆಗೆ ಆಹುತಿಯಾಗುತ್ತಿದ್ದರು. ಇಂತಹ ವಿಷಮ ಪರಿಸ್ಥಿತಿಯಲ್ಲಿ ರಾಮಕೃಷ್ಣ ಮಿಷನ್ ಆಸ್ಪತ್ರೆ ಅವರ ನೆರವಿಗೆ ಬಂದು ಪರಿಸ್ಥಿತಿಯನ್ನು ಬದಲಾಯಿಸಿತು.

**ದೀನ ದಲಿತರ ಆಶಾಕಿರಣ – ಹೊರರೋಗಿಗಳ ತಪಾಸಣಾ ವಿಭಾಗ :** ಇದು ಮೂರು ಅಂತಸ್ತಿನ ಕಟ್ಟಡದಲ್ಲಿ ತನ್ನ ಕಾರ್ಯವನ್ನು ನೆರವೇರಿಸುತ್ತಿದೆ. ಬುಡಕಟ್ಟು ಜನಾಂಗದ, ಹಿಂದುಳಿದ ಮತ್ತು ಎಲ್ಲಾ ವರ್ಗದ ಜನರಿಗೂ ನೂತನ ತಂತ್ರಜ್ಞಾನದ ಸಹಾಯದಿಂದ ರಿಯಾಯಿತಿ ದರದಲ್ಲಿ ಅಥವಾ ಬಹುಪಾಲು ಉಚಿತವಾಗಿ ಹಲವಾರು ರೀತಿಯ ಚಿಕಿತ್ಸೆಗಳನ್ನು ಒದಗಿಸುತ್ತಿದೆ. ಇಲ್ಲಿ ಸಾಮಾನ್ಯ ಮತ್ತು ಸೂಕ್ಷ್ಮ



ತಪಾಸಣೆಯನ್ನು ಮಾಡಲಾಗುತ್ತದೆ. ಅದಲ್ಲದೆ, ಸಂತಾನಹೀನತೆ ಮತ್ತು ಸ್ತ್ರೀಸಂಬಂಧಿ ಖಾಯಿಲೆಗಳಿಗೆ ವಿಶೇಷ ತಜ್ಞರನ್ನು ನೇಮಿಸಿಕೊಳ್ಳಲಾಗಿದೆ. ಮಕ್ಕಳ ತಪಾಸಣೆ ಹಾಗೂ ಕಣ್ಣು, ಕಿವಿ, ಮೂಗು, ಹೃದಯ ಮತ್ತು ದಂತಚಿಕಿತ್ಸೆಗೆ ಇಲ್ಲಿ ಅವಕಾಶವಿದೆ. ಇದಲ್ಲದೆ, ಮಧುಮೇಹ, ಮನಸ್ಸಿನ ಅಸ್ಥಿರತೆಯುಳ್ಳವರಿಗೆ ಸೂಕ್ತ ಚಿಕಿತ್ಸೆಯನ್ನೂ ಇಲ್ಲಿ ನೀಡಲಾಗುವುದು. ವಿವಿಧ ಖಾಯಿಲೆಗಳಿಗೆ ಸಂಬಂಧಪಟ್ಟಂತೆ ಪ್ರತ್ಯೇಕವಾಗಿ ಚಿಕಿತ್ಸಾ ಮತ್ತು ವಿಶೇಷ ತಪಾಸಣೆ ಕೋಣೆಗಳನ್ನು ಇದು ಹೊಂದಿದೆ. ಇದಲ್ಲದೆ, ಈ ಹೊರರೋಗಿಗಳ ಘಟಕವು ಕ್ಷಯ ಮತ್ತು ಏಡ್ಸ್ ರೋಗಗಳನ್ನು ರಾಜ್ಯಾದ್ಯಂತ ನಿರ್ಮೂಲನೆ ಮಾಡಲು ಅವಿರತವಾಗಿ ಶ್ರಮಿಸುತ್ತಿದೆ.

**ಹಿಂದಿನ ನಾಲ್ಕು ವರ್ಷಗಳಲ್ಲಿ ನಡೆಸಿದ ಹೊರರೋಗಿಗಳ ತಪಾಸಣಾ ವಿವರ ಈ ಕೆಳಗಿನಂತಿದೆ :**

| ವರ್ಷ | ರೋಗಿಗಳ ಸಂಖ್ಯೆ |
|---|---|
| ೨೦೦೮-೦೯ | ೨,೦೫,೫೭೭ |
| ೨೦೦೯-೧೦ | ೨,೩೬,೬೧೯ |
| ೨೦೧೦-೧೧ | ೨,೩೫,೧೦೬ |
| ೨೦೧೧-೧೨ | ೨,೪೪,೭೩೧ |

ಇದಲ್ಲದೆ ಕೆಲವು ವಿಶೇಷ ಔಷಧಿಗಳನ್ನು ಸಂರಕ್ಷಿಸಲು ಪ್ರತಿರಕ್ಷಾ ಕೇಂದ್ರವನ್ನೂ (Immunization Centre) ಆರಂಭಿಸಲಾಗಿದೆ. ಹತ್ತಿರವಿರುವ ಸರ್ಕಾರಿ ಆಸ್ಪತ್ರೆಗಳೂ ಈ ವಿಶೇಷ ಸೇವೆಯನ್ನು ಉಪಯೋಗಿಸಿಕೊಳ್ಳುತ್ತಿವೆ. ವಿಶೇಷವಾಗಿ ಕ್ಷಯ ರೋಗದ ಲಸಿಕೆ ಮತ್ತು ಔಷಧಿಗಳನ್ನು ಇಲ್ಲಿ ಸಂರಕ್ಷಿಸಿ ಬಡ ಜನರಿಗೆ ನೀಡಲಾಗುತ್ತಿದೆ. ಅದಲ್ಲದೆ ಅರುಣಾಚಲ ರಾಜ್ಯ ಮತ್ತು ಕೇಂದ್ರ ಸರ್ಕಾರದ ಸಹಯೋಗದಿಂದ ಏಡ್ಸ್ ರೋಗಿಗಳ ತಪಾಸಣೆಯನ್ನು ಮಾಡಿ, ಪುರುಷರಿಗೆ ಮತ್ತು ಸ್ತ್ರೀಯರಿಗೆ ಪ್ರತ್ಯೇಕವಾಗಿ ಮಾರ್ಗದರ್ಶನವನ್ನೂ ನೀಡಲಾಗುತ್ತಿದೆ.

**ಆಪದ್ಬಾಂಧವನಾಗಿರುವ ತುರ್ತುನಿಗಾ ಘಟಕ :** ದಿನದ ೨೪ ಗಂಟೆ ಈ ತುರ್ತುನಿಗಾ ಘಟಕವು ಕಾರ್ಯವನ್ನು ಎಸಗುತ್ತಿದೆ. ಆಂಬ್ಯುಲೆನ್ಸ್ ಸೇವೆಯೂ ಸಹ ಲಭ್ಯವಿದೆ. ಕಾರ್ಮಿಕರು ಕೆಲಸದ ವೇಳೆಯಲ್ಲಿ ಔಷಧಿಗಳನ್ನು ಮತ್ತು ಲಸಿಕೆಗಳನ್ನು ಹಾಕಿಸಿಕೊಳ್ಳಲು ಸಾಧ್ಯವಾಗದಿರುವುದರಿಂದ, ದಿನವಿಡೀ ಈ ಘಟಕದ ಮೂಲಕ ಔಷಧಿ ವಿತರಣೆ ಕಾರ್ಯಕ್ರಮವನ್ನೂ ಮಾಡುತ್ತಿದ್ದಾರೆ. ಸುಮಾರು ೮೦೦ ರೋಗಿಗಳು ಇದರ ಸೇವಾ ಉಪಯೋಗವನ್ನು ಪ್ರತಿದಿನವೂ ಪಡೆಯುತ್ತಿದ್ದಾರೆ.

**ಆತ್ಮಬಂಧುವಾಗಿರುವ ಒಳರೋಗಿ ವಿಭಾಗ (Indoor Patients Department) :** ೨೨೨ ಹಾಸಿಗೆಗಳ ಸೇವಾ ಅನುಕೂಲ ಇರುವ ಈ ಆಸ್ಪತ್ರೆಯಲ್ಲಿ ಬೇಸಿಗೆ, ಮಳೆಗಾಲ – ಈ ಅವಧಿಗಳಲ್ಲಿ ಅವುಗಳು ಸಾಕಾಗದೆ, ತಾತ್ಕಾಲಿಕವಾಗಿ ಇನ್ನೂ ಹೆಚ್ಚಿನ ಹಾಸಿಗೆಗಳನ್ನು ಒದಗಿಸಬೇಕಾಗುತ್ತದೆ.

| ವರ್ಷ | ರೋಗಿಗಳ ಸಂಖ್ಯೆ |
|---|---|
| ೨೦೦೮ – ೦೯ | ೯,೨೧೬ |
| ೨೦೦೯ – ೧೦ | ೯,೯೩೫ |
| ೨೦೧೦ – ೧೧ | ೧೦,೫೩೩ |
| ೨೦೧೧ – ೧೨ | ೧೦,೨೮೪ |

ಇಲ್ಲಿ ಒಂಬತ್ತು ವಿಭಾಗಗಳಿದ್ದು ಪುರುಷರಿಗೆ ಮತ್ತು ಸ್ತ್ರೀಯರಿಗೆ ಪ್ರತ್ಯೇಕವಾಗಿ ಕೊಠಡಿಗಳ ವ್ಯವಸ್ಥೆಯನ್ನು ಮಾಡಲಾಗಿದೆ. ಸಾಮಾನ್ಯವಾಗಿ ಎಲ್ಲಾ ಖಾಯಿಲೆಗಳಿಗೆ, ಔಷಧಿ ಮತ್ತು ಶಸ್ತ್ರಚಿಕಿತ್ಸೆಯ ಸೌಲಭ್ಯವಿರುತ್ತದೆ. ಶಿಶುಜನನ, ನೇತ್ರ ಪರೀಕ್ಷೆ, ಮೂತ್ರಪಿಂಡದ ಶುದ್ಧೀಕರಣ, ಕೀಲು–ಮೂಳೆ ಚಿಕಿತ್ಸಾ ವಿಭಾಗ, ದಂತ ಪರೀಕ್ಷೆ, ಶ್ರವಣ ಪರೀಕ್ಷೆ – ಇನ್ನೂ ಮುಂತಾದ ಪರೀಕ್ಷಾ ಕೇಂದ್ರಗಳನ್ನು ಈ ವಿಭಾಗ ಹೊಂದಿದೆ. ೫೦ ಜನ ನುರಿತ ವೈದ್ಯರು, ೧೨೦ ದಾದಿಯರು, ಮತ್ತು ೨೫೦ ಸಿಬ್ಬಂದಿ ವರ್ಗದವರು ಅಹರ್ನಿಶಿ ಶ್ರಮಿಸುತ್ತಿದ್ದಾರೆ. ಆಸ್ಪತ್ರೆಯು ಆಧುನಿಕ ತಂತ್ರಜ್ಞಾನದಿಂದ ಸುಸಜ್ಜಿತವಾಗಿದ್ದು ಎಲ್ಲಾ ಚಿಕಿತ್ಸೆಗಳಿಗೆ ಸಂಬಂಧವಿರುವ ಪರೀಕ್ಷೆಗಳನ್ನು ನಡೆಸಲು ಸಮರ್ಥವಾಗಿದೆ.

ಭಾರತ ಸರ್ಕಾರದ ಗಿರಿಜನ ಇಲಾಖೆಯು ಆಸ್ಪತ್ರೆಯ ಸೇವೆಯನ್ನು ಗುರುತಿಸಿ ಪ್ರತಿವರ್ಷ ಸುಮಾರು ೬೦ ಜನ ಬುಡಕಟ್ಟು ನಿವಾಸಿಗಳ ಆಸ್ಪತ್ರೆಯ ವೆಚ್ಚವನ್ನು ಭರಿಸುತ್ತಿದೆ.

ಜೊತೆಗೆ ಉತ್ತಮ ಪೌಷ್ಟಿಕ ಆಹಾರವನ್ನು ರೋಗಿಗಳಿಗೆ ಉಚಿತವಾಗಿ ನೀಡಲಾಗುತ್ತಿದೆ. ಆಸ್ಪತ್ರೆಯ ಆವರಣವನ್ನು ವಿಶೇಷ ಕಾಳಜಿಯಿಂದ ಸ್ವಚ್ಛವಾಗಿ ಮತ್ತು ಸಮರ್ಪಕವಾಗಿ ನಿರ್ವಹಣೆಯನ್ನು ಮಾಡಲಾಗುತ್ತಿದೆ. ನಿರುಪಯುಕ್ತ ಜೈವಿಕ ತ್ಯಾಜ್ಯ ವಸ್ತುಗಳನ್ನು ಸಮರ್ಪಕವಾಗಿ ವಿಲೇವಾರಿ ಮಾಡುವ ಸೌಲಭ್ಯವನ್ನು ಇದು ಹೊಂದಿದೆ. ಇಲ್ಲಿ ಶವಾಗಾರದ ವ್ಯವಸ್ಥೆಯನ್ನೂ ಸಹ ಕಲ್ಪಿಸಲಾಗಿದೆ.

**ಜೀವಬಿಂದುವಾದ ರಕ್ತದಾನಕೇಂದ್ರ :** ಈ ವಿಭಾಗವು ವಿವಿಧ ಶಸ್ತ್ರಚಿಕಿತ್ಸೆಗಳಿಗೆ ಮತ್ತು ತುರ್ತು ಸಮಯದಲ್ಲಿ ರೋಗಿಗಳಿಗೆ ಅತ್ಯವಶ್ಯಕವಾಗಿ ಬೇಕಾಗುವ ವಿವಿಧ ಗುಂಪುಗಳ ರಕ್ತವನ್ನು ನೀಡಲು ಸಮರ್ಥವಾಗಿದೆ. ಇಟಾನಗರ್ ಮತ್ತು ಸುತ್ತಲಿನ ಪ್ರದೇಶಗಳಲ್ಲಿ ರಕ್ತದಾನ ಶಿಬಿರಗಳನ್ನು ಆಗಾಗ ಹಮ್ಮಿಕೊಳ್ಳಲಾಗುತ್ತದೆ.



**ಚೈತನ್ಯದ ಚಿಲುಮೆಯಾಗಿರುವ ಶಸ್ತ್ರಚಿಕಿತ್ಸಾ ವಿಭಾಗ:** ರಾಮಕೃಷ್ಣ ಮಿಷನ್ ಆಸ್ಪತ್ರೆಯು ನಾಲ್ಕು ಶಸ್ತ್ರಚಿಕಿತ್ಸಾ ಕೊಠಡಿಗಳನ್ನು ಹೊಂದಿದೆ. ಅದರಲ್ಲಿ ಒಂದನ್ನು ಕಣ್ಣಿನ ಚಿಕಿತ್ಸೆಗೆಂದು ಕಾಯ್ದಿರಿಸಲಾಗಿದೆ. ಇಲ್ಲಿ ನಡೆಸಿದಂತಹ ಶಸ್ತ್ರಚಿಕಿತ್ಸೆಗಳು ಅತ್ಯಂತ ಯಶಸ್ಸನ್ನು ಕಂಡಿವೆ. ಪೂರ್ಣ ದೇಹದ ಪರೀಕ್ಷೆ, ಅಂತರ್ದರ್ಶಕ, ಭೌತಚಿಕಿತ್ಸಾ ವಿಭಾಗಗಳನ್ನು ಈ ವಿಭಾಗವು ಹೊಂದಿದೆ. ಅರುಣಾಚಲ ರಾಜ್ಯದಲ್ಲಿ ಪ್ರಥಮವಾಗಿ ಎಂ.ಆರ್.ಐ. ಸ್ಕ್ಯಾನಿಂಗ್ ಅನ್ನು ಅಳವಡಿಸಿದ ಕೀರ್ತಿಯು ಇದರ ಪಾಲಿಗಿದೆ. ಶ್ರವಣದೋಷದ ನಿವಾರಣೆಗಾಗಿನ ಪ್ರತ್ಯೇಕ ಚಿಕಿತ್ಸಾ ವಿಭಾಗವು ನವೀನ ತಂತ್ರಜ್ಞಾನದಿಂದ ಕೂಡಿದ ಉಪಕರಣಗಳಿಂದ ಸುಸಜ್ಜಿತವಾಗಿದೆ. ಕ್ಷ-ಕಿರಣ, ನೇರಳಾತೀತ ಕಿರಣಗಳ ಮೂಲಕ ವಿವಿಧ ಕಂಪ್ಯೂಟರೀಕೃತ ಪರೀಕ್ಷಾ ವ್ಯವಸ್ಥೆಯನ್ನೂ ಇಲ್ಲಿ ಕಲ್ಪಿಸಲಾಗಿದೆ. ಹೃದ್ರೋಗದ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಅತ್ಯಾಧುನಿಕ ಪರೀಕ್ಷಾ ವ್ಯವಸ್ಥೆ ಮತ್ತು ಚಿಕಿತ್ಸೆಯನ್ನೂ ಈ ವಿಭಾಗವು ಒಳಗೊಂಡಿದೆ.

**ಜೀವನ ಜ್ಯೋತಿಯಾಗಿರುವ ಕೃತಕ ಅಂಗ ದಾನಕೇಂದ್ರ:** ಎಷ್ಟೋ ಬಾರಿ ಗಿರಿಜನರು ಬೆಟ್ಟಗಳಲ್ಲಿ ಕೆಲಸವನ್ನು ಮಾಡುತ್ತಿರುವಾಗ ಆಕಸ್ಮಿಕವಾಗಿ ತಮ್ಮ ಕೈ-ಕಾಲುಗಳನ್ನು ಕಳೆದುಕೊಳ್ಳುತ್ತಾರೆ. ಇದರ ನಿವಾರಣೆಗೆಂದು ಕೃತಕ ಅಂಗಗಳನ್ನು ನುರಿತ ತಜ್ಞರಿಂದ ತಯಾರಿಸಿ ನೀಡುವ ವ್ಯವಸ್ಥೆ ಈ ವಿಭಾಗದಲ್ಲಿದೆ. ಅಲ್ಲದೆ ಅಂಗವಿಕಲರಿಗೆ ಸೂಕ್ತ ರೀತಿಯಲ್ಲಿ ಚಿಕಿತ್ಸೆಯನ್ನೂ ಇಲ್ಲಿ ನೀಡಲಾಗುತ್ತದೆ. ಇದು ಸುಪ್ರಸಿದ್ಧವಾಗಿರುವುದರಿಂದ ಅರುಣಾಚಲ ರಾಜ್ಯವಲ್ಲದೆ, ನೆರೆ ರಾಜ್ಯಗಳ ಜನರೂ ಸಹ ಇದರ ಉಪಯೋಗವನ್ನು ಪಡೆಯುತ್ತಿದ್ದಾರೆ.

**ದೃಷ್ಟಿ ದಾನ ಕೇಂದ್ರವಾಗಿರುವ ನೇತ್ರಚಿಕಿತ್ಸಾ ವಿಭಾಗ :** ೧೯೮೨ರಲ್ಲಿ ಕಣ್ಣಿನ ಚಿಕಿತ್ಸಾ ಕೇಂದ್ರವನ್ನು ಆರಂಭಿಸಲಾಯಿತು. ಟೋನೋಮೀಟರ್, ಆಟೋ-ರಿಫ್ರೆಕ್ಟೋಮೀಟರ್, ಕೆರಟೋಮೀಟರ್, ಲೇಸರ್ ಮುಂತಾದ ನವೀನ ತಂತ್ರಜ್ಞಾನ ಉಪಕರಣಗಳನ್ನು ಇದು ಹೊಂದಿದೆ. ಇಳಿವಯಸ್ಸಿನಲ್ಲಿ ಸಂಭವಿಸುವ ಕಣ್ಣಿನ ಪೊರೆಯ ಚಿಕಿತ್ಸೆಯನ್ನು ಮಾಡುವುದಲ್ಲದೆ, ಗ್ಲುಕೋಮಾ, ಆಕ್ಲೋ ಪ್ಲಾಸ್ಟಿಕ್ ರೋಗಗಳಿಗೆ ಶಸ್ತ್ರಚಿಕಿತ್ಸೆಗಳನ್ನೂ ಇಲ್ಲಿ ಕೈಗೊಳ್ಳಲಾಗುತ್ತದೆ.

ವಿಶ್ವಮಾನ್ಯತೆಯನ್ನು ಪಡೆದಿರುವ ನವದೆಹಲಿಯ ORBIS ಸಂಸ್ಥೆಯ ಸಹಯೋಗದಿಂದ ಮಕ್ಕಳ ಕಣ್ಣಿನ ರೋಗದ ನಿವಾರಣೆಯನ್ನು ಮಾಡಲು ಈ ಕೇಂದ್ರವು ಪ್ರಯತ್ನಿಸುತ್ತಿದೆ. ಗುಡ್ಡಗಾಡಿನ ಮಕ್ಕಳು ಮತ್ತು ಬಾಲಕಾರ್ಮಿಕರು ಎಷ್ಟೋ ಬಾರಿ ಮರಗಳನ್ನು ಹತ್ತುವಾಗ, ವಿವಿಧ ಕೆಲಸಗಳನ್ನು ಮಾಡುತ್ತಿರುವಾಗ, ಅಜಾಗರೂಕತೆಯಿಂದ ತಮ್ಮ ಕಣ್ಣುಗಳಿಗೆ ಅಪಾಯವನ್ನು ತಂದುಕೊಳ್ಳುತ್ತಾರೆ. ಅಲ್ಲದೆ ಸರಿಯಾದ ಪೌಷ್ಟಿಕ ಆಹಾರದ ಕೊರತೆಯಿಂದಾಗಿ ದೃಷ್ಟಿದೋಷವು ಉಂಟಾಗುತ್ತದೆ. ಈ ಸಮಸ್ಯೆಯನ್ನು ಪರಿಹರಿಸಲು ರಾಜ್ಯಾದ್ಯಂತ ಸಂಚರಿಸಿ ಜಾಗೃತಿ ಮತ್ತು ಸೂಕ್ತ ಚಿಕಿತ್ಸೆಯನ್ನು ORBIS ಸಂಸ್ಥೆಯ ಸಹಕಾರದಿಂದ ನೀಡಲಾಗುತ್ತದೆ. ಹಾಗೆಯೇ ಕಣ್ಣಿನ ದೋಷಗಳ ನಿವಾರಣೆಗೆಂದು ಅನೇಕ ಸ್ಥಳೀಯರಿಗೆ ವಿಶೇಷವಾಗಿ ತರಬೇತಿಯನ್ನು ನೀಡಲಾಗುತ್ತಿದೆ. ಪ್ರತಿಫಲವಾಗಿ ರಾಜ್ಯಾದ್ಯಂತ ಹಲವಾರು ನೇತ್ರಚಿಕಿತ್ಸಾ ಕೇಂದ್ರಗಳನ್ನು ತೆರೆಯಲಾಗಿದೆ.

**ಸೇವಾ ಧ್ರುವತಾರೆಯಾಗಿರುವ ಸಂಚಾರಿ ಆಸ್ಪತ್ರೆ :** ಬಡವರು ಮತ್ತು ವಯೋವೃದ್ಧರು ಆಸ್ಪತ್ರೆಗೆ ಬರಲು ಸಾಧ್ಯವಾಗದ ಕಾರಣ ವೈದ್ಯಕೀಯ ಸೌಲಭ್ಯಗಳನ್ನು ಅವರ ಮನೆಗಳಿಗೇ ತಲುಪಿಸುವ ವ್ಯವಸ್ಥೆಯನ್ನು ಮಾಡಲು ಮೊಬೈಲ್ ಪರೀಕ್ಷಾ ಕೇಂದ್ರದ ಸೌಲಭ್ಯವನ್ನು ಪ್ರಾರಂಭಿಸಲಾಗಿದೆ. ಆಸ್ಟ್ರಿಯಾ ದೇಶದ 'ಲೈಟ್ ಫಾರ್ ದಿ ವರ್ಲ್ಡ್' ಸಂಸ್ಥೆಯ ಸಹಯೋಗದೊಂದಿಗೆ ಈ ಸೇವೆಯನ್ನು ಅತ್ಯಂತ ದಕ್ಷತೆಯಿಂದ ನಿರ್ವಹಿಸಲಾಗುತ್ತಿದೆ. ಅಲ್ಲದೆ ಸ್ಥಳೀಯ ಸಂಸ್ಥೆಗಳ ನೆರವಿನೊಂದಿಗೆ ಗ್ರಾಮ-ಗ್ರಾಮಗಳಲ್ಲಿ ಉಚಿತ ನೇತ್ರ ಪರೀಕ್ಷಾ ಮತ್ತು ಚಿಕಿತ್ಸಾ ಸೌಲಭ್ಯಗಳನ್ನು ನೀಡಲಾಗುತ್ತಿದೆ. ವಿಟಮಿನ್ ಎ ಮಾತ್ರೆಗಳನ್ನು ಉಚಿತವಾಗಿ ನೀಡುತ್ತಿದ್ದು, ನೈರ್ಮಲ್ಯತೆಯ ಆವಶ್ಯಕತೆಯ ಕುರಿತು ಜನರಲ್ಲಿ ಅರಿವನ್ನು ಮೂಡಿಸಲಾಗುತ್ತಿದೆ. ಅರುಣಾಚಲ ರಾಜ್ಯದಲ್ಲಿ ೨೦೧೧-೧೨ನೇ ಸಾಲಿನಲ್ಲಿ ಸುಮಾರು ೩೦೦೦ ಗ್ರಾಮವಾಸಿಗಳನ್ನು ಪರೀಕ್ಷಿಸಿ, ೮೩೮ ರೋಗಿಗಳಿಗೆ ವಿವಿಧ ಚಿಕಿತ್ಸೆ ಮತ್ತು ಕನ್ನಡಕಗಳನ್ನು ನೀಡಲಾಗಿದೆ. ಇದುವರೆಗೆ ೧೧೨೪ ಜನರ ಕಣ್ಣಿನ ಪೊರೆಚಿಕಿತ್ಸೆಯನ್ನು ಯಶಸ್ವಿಯಾಗಿ ಮಾಡಲಾಗಿದೆ.

ನವದೆಹಲಿಯ ORBIS ಸಂಸ್ಥೆಯ ಸಹಯೋಗದಿಂದ ಮಕ್ಕಳ ಅಂಧತ್ವದ ನಿವಾರಣೆಗಾಗಿ ಅನೇಕ ಸ್ಥಳೀಯ ಶಿಕ್ಷಕರಿಗೆ ಮತ್ತು ಅಂಗನವಾಡಿ ಕಾರ್ಯಕರ್ತೆಯರಿಗೆ ಪ್ರಾಥಮಿಕ ತಪಾಸಣಾ ವಿಧಾನಗಳ ತರಬೇತಿಯನ್ನೂ ನೀಡಲಾಗುತ್ತಿದೆ. ತದನಂತರ ನೇತ್ರ ತೊಂದರೆ ಇರುವ ಮಕ್ಕಳನ್ನು ವೈದ್ಯಕೀಯ ಸಿಬ್ಬಂದಿಯು ಪರೀಕ್ಷಿಸಿ, ಸೂಕ್ತ ಚಿಕಿತ್ಸೆ ನಡೆಸಿ ಕನ್ನಡಕಗಳನ್ನು ವಿತರಿಸುತ್ತಾರೆ.

ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ನಡೆಸಲಾಗಿರುವ ನೇತ್ರಪರೀಕ್ಷಾ ಶಿಬಿರಗಳಲ್ಲಿ ಸುಮಾರು ೧೫೩೦೦ ಜನಗಳನ್ನು ಪರೀಕ್ಷಿಸಿ, ೧,೦೨೪ ರೋಗಿಗಳಿಗೆ ಸೂಕ್ತ ಚಿಕಿತ್ಸೆಯನ್ನು ನೀಡಲಾಗಿದೆ.

**ಸೇವಾಸಿಂಧುವಾಗಿರುವ ಹೋಮಿಯೋಪತಿ ಆಸ್ಪತ್ರೆ:** ರಾಮಕೃಷ್ಣ ಮಿಷನ್ ಆಸ್ಪತ್ರೆಯು, ಈಶಾನ್ಯ ಹೋಮಿಯೋಪತಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆಯ ಸಹಯೋಗದಿಂದ, ೨೦೦೪ರಲ್ಲಿ ಹೋಮಿಯೋಪತಿ ವಿಭಾಗವನ್ನು ಆರಂಭಿಸಿದೆ.

ರೋಗಿಗಳಿಗೆ ಸೂಕ್ತ ಮಾರ್ಗದರ್ಶನ ಮತ್ತು ಚಿಕಿತ್ಸೆಯನ್ನು ಇಲ್ಲಿ ನೀಡಲಾಗುತ್ತಿದೆ.

**ಆಶಾವಾಣಿಯಾಗಿರುವ ಟೆಲಿಮೆಡಿಸಿನ್:** ಬೆಂಗಳೂರಿನ ಭಾರತೀಯ ಬಾಹ್ಯಾಕಾಶ ಸಂಸ್ಥೆ, ಬೆಂಗಳೂರಿನ ನಾರಾಯಣ ಹೃದಯಾಲಯ, ಕೊಚಿನ್‌ನ ಅಮೃತ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಕೊಲ್ಕತಾದ ರವೀಂದ್ರನಾಥ ಟಾಗೂರ್ ಇನ್‌ಸ್ಟಿಟ್ಯೂಟ್ ಆಫ್ ಕಾರ್ಡಿಯಾಕ್ ಸೈನ್ಸಸ್ ಮತ್ತು ಮುಂಬೈನ ಟಾಟಾ ಮೆಮೋರಿಯಲ್ ಸಂಸ್ಥೆಗಳ ಸಹಯೋಗದೊಂದಿಗೆ ಉಪಗ್ರಹ ಸಂಪರ್ಕದ ಮೂಲಕ ಗ್ರಾಮವಾಸಿಗಳಿಗೆ ಚಿಕಿತ್ಸೆಯನ್ನು ನೀಡಲಾಗುತ್ತಿದೆ.

**ಜ್ಞಾನದೇಗುಲವಾದ ನರ್ಸಿಂಗ್ ಶಾಲೆ :** ಇಂತಹ ಬೃಹತ್ ಆಸ್ಪತ್ರೆಗೆ ಅನೇಕ ದಾದಿಯರು ಅತ್ಯವಶ್ಯಕ. ಆದರೆ ಅರುಣಾಚಲದಂತಹ ಬಹುದೂರದ ಪ್ರದೇಶಗಳಿಗೆ ತೆರಳಿ, ವೈದ್ಯಕೀಯ ಸೇವೆಯನ್ನು ಸಲ್ಲಿಸಲು ದಾದಿಯರು ಹಿಂಜರಿಯುತ್ತಾರೆ. ಅಲ್ಲದೆ ಸ್ಥಳೀಯ ಸರ್ಕಾರಿ ಆಸ್ಪತ್ರೆಗಳಿಗೂ ಈ ಸಮಸ್ಯೆಯು ಉಂಟಾಗಿದೆ. ಈ ಸಮಸ್ಯೆಯನ್ನು ನಿವಾರಿಸಲು ರಾಮಕೃಷ್ಣ ಮಿಷನ್ ಆಸ್ಪತ್ರೆಯು ೧೯೮೫ರಲ್ಲಿ ದಾದಿಯರ ತರಬೇತಿ ಕೇಂದ್ರವನ್ನು ಸ್ಥಾಪಿಸಿತು. ಸ್ಥಳೀಯ ಹೆಣ್ಣುಮಕ್ಕಳು ಇಲ್ಲಿ ತರಬೇತಿಯನ್ನು ಪಡೆದು, ರಾಜ್ಯದ ವಿವಿಧ ಸರ್ಕಾರಿ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ ಹಾಗೂ ವಿದೇಶಿ ಆಸ್ಪತ್ರೆಗಳಲ್ಲೂ ಉತ್ತಮವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇದರಿಂದಾಗಿ ಗ್ರಾಮೀಣ ಬಡ ಹೆಣ್ಣುಮಕ್ಕಳಿಗೆ ಉದ್ಯೋಗಾವಕಾಶವು ದೊರಕಿದೆ. ಇಲ್ಲಿಯವರೆಗೆ ೩೩೫ ದಾದಿಯರಿಗೆ ಈ ಕೇಂದ್ರವು ತರಬೇತಿಯನ್ನು ನೀಡಿದೆ. ಇಲ್ಲಿನ ತರಬೇತುಗಾರರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಉತ್ತಮವಾದ ವೈದ್ಯಕೀಯ ಗ್ರಂಥಾಲಯದ ಸೌಲಭ್ಯವನ್ನು ಒದಗಿಸಲಾಗಿದೆ. ವೈದ್ಯರಿಗೆ ಮತ್ತು ವೈದ್ಯಕೀಯ ಸಿಬ್ಬಂದಿಗೆ ವಾರಕ್ಕೆ ಎರಡು ಬಾರಿ, ವಿಶೇಷ ವೈದ್ಯತಜ್ಞರಿಂದ ಉಪನ್ಯಾಸಗಳನ್ನೂ ಏರ್ಪಡಿಸಲಾಗುತ್ತಿದೆ. ಈಗಾಗಲೇ ಕಾರ್ಯನಿರತರಾಗಿರುವ ಸರ್ಕಾರಿ ದಾದಿಯರ ಜ್ಞಾನದ ಮತ್ತು ಅನುಭವದ ವೃದ್ಧಿಗೆಂದು ಇಲ್ಲಿ ವಿಶೇಷ ತರಬೇತಿಗಳನ್ನು ನಡೆಸಲಾಗುತ್ತಿದೆ. ಅತ್ಯುತ್ತಮ ವೈದ್ಯಕೀಯ ಗ್ರಂಥಾಲಯದ ಸೌಲಭ್ಯವನ್ನೂ ಇಲ್ಲಿ ಒದಗಿಸಲಾಗಿದೆ.

**ಪೂರ್ಣಚಂದ್ರ ಶಾಲೆಯಾಗಿರುವ ರಾತ್ರಿ ಶಾಲೆ:** ಅನಕ್ಷರತೆಯನ್ನು ನಿವಾರಿಸಲು ರಾಮಕೃಷ್ಣ ಮಿಷನ್ ಆಸ್ಪತ್ರೆಯು ರಾತ್ರಿ ಶಾಲೆಯನ್ನು ಆರಂಭಿಸಿದೆ. ಹಲವಾರು ವೃದ್ಧರು, ಹೆಂಗಸರು ಅಲ್ಲದೆ ಕೂಲಿ ಕಾರ್ಮಿಕರು ಇದರ ಪ್ರಯೋಜನವನ್ನು ಪಡೆದು ಓದು-ಬರಹವನ್ನು ಕಲಿಯುತ್ತಿದ್ದಾರೆ.

**ಪ್ರಶಸ್ತಿಗಳು :** ಅಲ್ಲಿನ ಕೇಂದ್ರ ಮತ್ತು ರಾಜ್ಯ ಸರ್ಕಾರದ ಅಧಿಕಾರಿಗಳೂ, ಸಿಬ್ಬಂದಿ ವರ್ಗದವರೂ ಈ ಆಸ್ಪತ್ರೆಯ ನೆರವನ್ನು ಪಡೆದುಕೊಳ್ಳುತ್ತಿದ್ದಾರೆ. ಅಲ್ಲದೆ ನೆರೆ-ಹೊರೆಯ ರಾಜ್ಯದಿಂದಲೂ ಅನೇಕ ರೋಗಿಗಳು ತಪಾಸಣೆ ಮತ್ತು ಚಿಕಿತ್ಸೆಗೆಂದು ಬರುತ್ತಿದ್ದಾರೆ. ಈಶಾನ್ಯ ಭಾರತದಲ್ಲೇ ಮಾದರಿ ಆಸ್ಪತ್ರೆಯಾಗಿರುವ ಇಟಾನಗರದ ರಾಮಕೃಷ್ಣ ಮಿಷನ್ ಆಸ್ಪತ್ರೆಗೆ ಹಲವಾರು ಪ್ರಶಸ್ತಿ-ಪುರಸ್ಕಾರಗಳು ಸಂದಿವೆ.

ಅರುಣಾಚಲ ರಾಜ್ಯದ ಪಾಪುಂಪೆರ್ ಜಿಲ್ಲಾ ಕೇಂದ್ರವು ಪ್ರತಿಷ್ಠಿತ 'ವೆರಿಯರ್ ಎಲ್ವಿನ್ ಪ್ರಶಸ್ತಿ'ಯನ್ನು ಈ ಆಸ್ಪತ್ರೆಗೆ ನೀಡಿ ಗೌರವಿಸಿದೆ. ಇಂಡಿಯನ್ ಫೆಡರೇಷನ್ ಆಫ್ ವರ್ಕಿಂಗ್ ಜರ್ನಲಿಸ್ಟ್ ಸಂಸ್ಥೆಯು ರಾಮಕೃಷ್ಣ ಮಿಷನ್ನನ್ನು 'ಅತ್ಯುತ್ತಮ ಸೇವಾ ಕೇಂದ್ರ' ಎಂದು ಗೌರವಿಸಿದೆ. ಇಟಾನಗರ್ ಮಾರ್ಕೆಟ್ ಅಸೋಸಿಯೇಷನ್ ಸಂಸ್ಥೆಯು ರಾಮಕೃಷ್ಣ ಮಿಷನ್ನನ್ನು, 'ನಿಸ್ವಾರ್ಥ ಸೇವೆಯ ದ್ಯೋತಕ'ವೆಂದು ಕರೆದು ಗೌರವಿಸಿದೆ.

**ಉಪಸಂಹಾರ :** ಹೀಗೆ ರಾಮಕೃಷ್ಣ ಮಿಷನ್ ಆಸ್ಪತ್ರೆಯು ಈಶಾನ್ಯ ಭಾರತದಲ್ಲಿ ನಿರ್ಗತಿಕರ ಆಶಾಕಿರಣವಾಗಿದ್ದು ಎಲ್ಲಾ ಧರ್ಮೀಯ ಜನರಿಗೂ ತನ್ನ ನಿಸ್ವಾರ್ಥ ಸೇವೆಯನ್ನು ನೀಡುತ್ತಿದೆ. ಈ ಆಸ್ಪತ್ರೆಯು ಜಾತಿ, ಮತ, ಲಿಂಗ ಮತ್ತು ಮೇಲು-ಕೀಳು ಎಂಬ ಯಾವುದೇ ಭೇದಭಾವವಿಲ್ಲದೆ ಸರ್ವೋದಯದ ಪಥದಲ್ಲಿ, ಮಾನವೀಯ ಮೌಲ್ಯಗಳ ಅಡಿಯಲ್ಲಿ, ಭಗವಂತನ ಕೃಪಾಶೀರ್ವಾದದೊಂದಿಗೆ ನಿಸ್ವಾರ್ಥ ಸೇವೆಯನ್ನು ನಡೆಸುತ್ತಿರುವ ಒಂದು ಮಾದರಿ ಕೇಂದ್ರವಾಗಿದೆ. ಸ್ಥಳೀಯ ಜನರು ಮತ್ತು ನುರಿತ ವೈದ್ಯರು ಇಲ್ಲಿ ಕಾರ್ಯ ನಿರ್ವಹಿಸುವುದಕ್ಕೆ ಹೆಮ್ಮೆಪಡುತ್ತಾರೆ. ಅಲ್ಲದೆ ಸರ್ಕಾರಿ ಅಧಿಕಾರಿಗಳು ತಮ್ಮಿಂದಾಗುವ ಯಾವುದೇ ಸಹಾಯವನ್ನು, ರಾಮಕೃಷ್ಣ ಮಿಷನ್ ಆಸ್ಪತ್ರೆಗೆ ಸಲ್ಲಿಸಲು ತವಕಿಸುತ್ತಿರುತ್ತಾರೆ ಮತ್ತು ಅವಕಾಶ ಸಿಕ್ಕಿದಲ್ಲಿ ಮಹದಾನಂದವನ್ನು ಅನುಭವಿಸುತ್ತಾರೆ.









ಪ್ರೊ. ಕೆ.ಬಿ. ಪ್ರಭುಪ್ರಸಾದ್

ರಾಮಕೃಷ್ಣ ಮಹಾಸಂಘವು ದೇಶದ ಹತ್ತಾರುಕಡೆಗಳಲ್ಲಿ ಗಿರಿಜನರ ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಂಡು ಯಶಸ್ವಿಯಾಗಿ ನಡೆಸುತ್ತ ಬಂದಿದೆ. ಇದರ ಹಿಂದಿನ ಧ್ಯೇಯ ಮತ್ತು ಕಾರ್ಯಪ್ರಣಾಳಿಗಳನ್ನು ಸೋದಾಹರಣವಾಗಿ ವಿವರಿಸಿರುವ ಲೇಖಕರು ಮೈಸೂರು ವಿಶ್ವವಿದ್ಯಾನಿಲಯದ ವಿವೇಕಾನಂದ ಪೀಠದ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ಮೈಸೂರು ರಾಮಕೃಷ್ಣ ಆಶ್ರಮದ ಭಕ್ತರಾದ ಇವರ ಹಲವಾರು ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.

# ರಾಮಕೃಷ್ಣ ಮಹಾಸಂಘ ಮತ್ತು ಗಿರಿಜನ ಸೇವೆ

**ವಿವೇಕಾನಂದರ ಅನುಷ್ಠಾನಸೂಚಿ :** ಒಮ್ಮೆ ಒಬ್ಬ ಯುವಕ ಸ್ವಾಮಿ ವಿವೇಕಾನಂದರ ಬಳಿಬಂದು "ಸ್ವಾಮೀಜಿ, ನಾನು ನಿತ್ಯ ಧ್ಯಾನ ಮಾಡಲು ಪ್ರಯತ್ನಿಸುತ್ತೇನೆ. ಆದರೂ ಮನಸ್ಸಿಗೆ ಶಾಂತಿ–ನೆಮ್ಮದಿ ಉಂಟಾಗುತ್ತಿಲ್ಲ" ಎಂದು ತನ್ನ ಆಸೆ ಹಾಗೂ ಕಷ್ಟವನ್ನು ಹೇಳಿಕೊಂಡ. ಆಗ ಸ್ವಾಮೀಜಿ ಹೀಗೆನ್ನುತ್ತಾರೆ:

"ಮಗು, ನೀನು ಧ್ಯಾನವೊಂದರಿಂದಲೇ ಅಧ್ಯಾತ್ಮದಲ್ಲಿ ಮುಂದುವರಿಯಲು ಸಾಧ್ಯ ಎಂಬ ಭಾವನೆಯನ್ನು ಬಿಡು. ಕಣ್ಣು ತೆರೆದು ಸುತ್ತಲೂ ನೋಡು. ಸಾವಿರಾರು ಅಸಹಾಯಕರು, ಬಡವರು, ದೀನದಲಿತರು ಕಾಣುತ್ತಾರೆ. ನಿನ್ನ ಕೈಲಾದಷ್ಟು ಅವರಿಗೆ ನೆರವಾಗು. ಅವರ ಅಗತ್ಯಗಳೇನೆಂದು ತಿಳಿದು ಸೇವೆ ಮಾಡು. ವೃದ್ಧರಾದ, ನಿಸ್ಸಹಾಯಕರಾದ ಅವರು ತಮ್ಮ ಕೆಲಸಗಳನ್ನು ಮಾಡಬೇಕಾದ ಸಂದರ್ಭ ಅವರಿಗೊದಗಿದ್ದರೆ, ಅವರಿಗೆ ಬೇಕಾದ ವಸ್ತು ದಿನಸಿ ತರಕಾರಿ ತಂದುಕೊಡು. ಹುಷಾರಿಲ್ಲದಿದ್ದರೆ ವೈದ್ಯರ ಬಳಿ ಕರೆದುಕೊಂಡು ಹೋಗಿ ಔಷಧಿ ತಂದುಕೊಡು, ಶುಶ್ರೂಷೆ ಮಾಡು. ಯಾರಿಗೆ ಹೊಟ್ಟೆಗಿಲ್ಲವೋ ಅವರಿಗೆ ಅನ್ನಕೊಡು. ಅವಿದ್ಯಾವಂತರಿಗೆ ಅಕ್ಷರ ಕಲಿಸಿ ವಿದ್ಯೆ ನೀಡು. ಕಷ್ಟದಲ್ಲಿರುವವರಿಗೆ ಸಾಂತ್ವನ ಹೇಳು. ಧೈರ್ಯ ಕೊಡು. ಸಹಾಯ ಮಾಡು. ಇದು ಪರಮಸೇವೆ. ಆಗ ಪಡೆಯುವ ಸಂತೋಷ, ತೃಪ್ತಿ, ಮನಶ್ಶಾಂತಿಗಳು ನಿನಗೇ ಅನುಭವವಾಗುತ್ತವೆ."

ದೀನದಲಿತರ ಸೇವೆಯಿಂದ ಮನಸ್ಸು ಶುದ್ಧವಾಗುತ್ತದೆ; ಸಾತ್ವಿಕಗೊಳ್ಳುತ್ತದೆ; ಕದಡದ ಶಾಂತಿ ಉಂಟಾಗುತ್ತದೆ.

" 'ದರಿದ್ರದೇವೋ ಭವ', 'ಮೂರ್ಖದೇವೋ ಭವ' ಎಂದು ಭಾವಿಸುವುದಷ್ಟೇ ಅಲ್ಲ – ಅದು ಸತ್ಯವೇ ಎಂಬ ದೃಢವಿಶ್ವಾಸದಿಂದ ಮೊದಲು ಅವರ ಸೇವಾ ಕೈಂಕರ್ಯವನ್ನು ಕೈಕೊಳ್ಳಿ" ಎಂದೇ ಸ್ವಾಮೀಜಿ ತಿಳಿಹೇಳಿದುದು. ಬಡವರ – ಅಸಹಾಯಕರ ಸ್ಥಿತಿಯನ್ನು ನೋಡಿ ಕರಗಿ ಕಣ್ಣೀರುಗರೆಯುವ, ನಿದ್ದೆಕೆಡುವ ಹೃದಯ ನಮ್ಮದಾಗಬೇಕು. ಸ್ವಾಮೀಜಿ ಹಾಗಿದ್ದರು; ಹಾಗೆ ನಡೆದುಕೊಂಡರು. ತಮ್ಮ ಗುರುಸೋದರರಿಗೂ ಅದೇ ಮಂತ್ರ, ಅದೇ ದೀಕ್ಷೆ ಕೊಟ್ಟರು. ರಾಮಕೃಷ್ಣ ಮಹಾಸಂಘ ಅದನ್ನೇ ತನ್ನ ಜೀವನವ್ರತವಾಗಿ ಇಂದಿನವರೆಗೂ ಆಚರಿಸುತ್ತಾ ಬಂದಿದೆ.

**ಗಿರಿಜನರ ಬಾಳು:** ಊರು ನಗರ ಪ್ರದೇಶಗಳಲ್ಲಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಿಂದುಳಿದವರ ಸೇವೆಯನ್ನಷ್ಟೇ ಅಲ್ಲ, ನಗರ–ನಾಗರಿಕ ಸೌಕರ್ಯಗಳಿಂದ ದೂರವಾಗಿ,



ಗಿರಿ ಕಾನನಾಂತರಗಳಲ್ಲಿಯೇ ಹುಟ್ಟಿ ಬೆಳೆದು, ಭಯ-ಸಂಕೋಚಗಳಲ್ಲಿಯೇ ಜೀವಿಸುತ್ತಿರುವವರ ಕಡೆಗೂ ನಮ್ಮ ಗಮನ ಹೋಗಬೇಕು. ಅವರಿಗೆ ಅಕ್ಷರಜ್ಞಾನವಿಲ್ಲ; ಆಧುನಿಕ ವೈದ್ಯಕೀಯ ಸೌಕರ್ಯಗಳಿಲ್ಲ; ಅತಿವೇಗವಾಗಿ ಮುಂದುವರಿಯುತ್ತಿರುವ ಹೊರ ಜಗತ್ತಿನ ಬಗ್ಗೆ ಗೊತ್ತಿಲ್ಲ. ಅಭಿವೃದ್ಧಿಯ ಪ್ರಯೋಜನಗಳಿಂದ ವಂಚಿತರಾಗಿದ್ದಾರೆ. ಹೊರಪ್ರಪಂಚದ ಅನೀತಿ-ಮೋಸ-ವಂಚನೆ-ದುರಾಸೆಗಳಿಂದ ಮುಕ್ತರಾಗಿರುವುದೇನೋ ಅವರ ಪಾಲಿನ ಭಾಗ್ಯವೇ ನಿಜ. ಆದರೆ ಆಧುನಿಕ ನಾಗರಿಕತೆಯ ವಿಚಾರವಂತಿಕೆಯ ಲಾಭ ಮತ್ತು ಒಳಿತುಗಳನ್ನು ಪಡೆಯುವ ಹಕ್ಕು ಅವರಿಗೂ ಇದೆಯಲ್ಲವೆ?

ನಗರವಾಸಿ ಹಿಂದುಳಿದವರ ಸೇವೆ ಸರಳವಾದುದು. ಆದರೆ ಗಿರಿವನ ಪ್ರದೇಶಗಳಲ್ಲಿರುವವರ ಸೇವೆ ಅಷ್ಟು ಸರಳವಲ್ಲ, ಸಂಕೀರ್ಣವಾದುದು. ನಾಗರಿಕ ಸೌಲಭ್ಯಗಳನ್ನೂ, ಸಾಮಾಜಿಕ ರೀತಿ-ನೀತಿಗಳನ್ನೂ, ವೈಜ್ಞಾನಿಕ ಮನೋಧರ್ಮವನ್ನೂ ಗಿರಿಜನ ಹಾಗೂ ಬುಡಕಟ್ಟು ಜನಾಂಗಗಳಲ್ಲಿ ರೂಢಿಸುವ ಉತ್ಸಾಹ ಒಳ್ಳೆಯದೇ. ಆದರೆ ಆ ಕಾರ್ಯದಲ್ಲಿ ಸರಿಯಾದ ವಿವೇಚನೆ ಇಲ್ಲದೆ ಹೋದಲ್ಲಿ, ಅವರಲ್ಲಿ ಹುಟ್ಟಿನಿಂದ ಸಹಜವಾಗಿ ಮೈಗೂಡಿರುವ ಪುರಾತನ ಸಂಸ್ಕೃತಿಯನ್ನೂ, ಅವು ಬೆಳೆಸಿರುವ ಉದಾರ ಸಾಮಾಜಿಕ ಮೌಲ್ಯಗಳನ್ನೂ ನಾವು ನಾಶ ಮಾಡಿಬಿಡುವ ಅಪಾಯ ಇದ್ದೇ ಇದೆ.

**ರಾಮಕೃಷ್ಣ ಮಿಷನ್ನಿನ ಪರಂಪರೆ:** ಬೇಲೂರು ಮಠದ ಮಂದಿರ ನಿರ್ಮಾಣವಾಗುತ್ತಿದ್ದಾಗ ಕೂಲಿಗಳಾದ ಸಂತಾಲರಿಗೆ (ಗಿರಿಜನ) ಸ್ವಾಮಿ ವಿವೇಕಾನಂದರು ಸ್ವತಃ ತಾವೇ ಊಟವನ್ನು ಬಡಿಸುತ್ತಿದ್ದರು. ಅವರು ಊಟ ಮಾಡುವುದನ್ನು ನೋಡಿ ಸಂತೋಷದ ಕಣ್ಣೀರು ಸುರಿಸುತ್ತಿದ್ದರು. ಧನ್ಯಭಾವದಿಂದ, "ನಾನಿಂದು ಸಾಕ್ಷಾತ್ ನಾರಾಯಣನನ್ನೇ ಸಂತೃಪ್ತಿಪಡಿಸಿದೆ" ಎನ್ನುತ್ತಿದ್ದರು.

ಇದೇ ಪರಂಪರೆಯನ್ನು ರಾಮಕೃಷ್ಣ ಮಿಷನ್ ಕಾಯ್ದುಕೊಂಡು ಬರುತ್ತಿದೆ. ಭಾರತದ ಯಾವ ಕಡೆಯಾಗಲಿ, ಪ್ರಕೃತಿ ವಿಕೋಪದಿಂದ ಪ್ರವಾಹಪೀಡಿತರಾಗಿಯೊ, ಬರಪೀಡಿತರಾಗಿಯೊ, ಅಗ್ನಿ ಅನಾಹುತದಿಂದಲೊ, ಕೋಮುಗಲಭೆಯಾಗಿಯೊ, ಬಡಜನರು ಒದ್ದಾಡಿ ಸಂಕಟಪಡುತ್ತಿದ್ದಾರೆಂದು ತಿಳಿದ ತಕ್ಷಣ, ರಾಮಕೃಷ್ಣ ಮಿಷನ್ನಿನ ಸೇವಾ ತಂಡಗಳು ಅಲ್ಲಿಗೆಲ್ಲಾ ಪರಿಹಾರ ಒದಗಿಸಲು ಧಾವಿಸುತ್ತವೆ. ಇತರ ಸ್ವಯಂಸೇವಾ ಸಂಘದವರು, ರಾಜ್ಯ ಹಾಗೂ ಕೇಂದ್ರಸರ್ಕಾರದ ನಿಯೋಜಿತ ಕಾರ್ಯಕರ್ತರು ಅಲ್ಲಿಗೆ ಹೋದರೆ, ರಾಮಕೃಷ್ಣ ಮಿಷನ್ನಿನ ಸೇವಾಕಾರ್ಯ ಈಗಾಗಲೇ ಅಲ್ಲಿ ಆರಂಭವಾಗಿರುವುದನ್ನು ಕಾಣುತ್ತಾರೆ. ಮಿಷನ್ನಿನ ಹಾಗೂ ಅವರ ಸಹಯೋಗದಲ್ಲಿ ಕಾರ್ಯ ಮುಂದುವರಿಯುತ್ತದೆ. ದೇಶದ ನಾನಾ ಕಡೆಯ ರಾಮಕೃಷ್ಣರ ಭಕ್ತರಂತೂ ಸರಿ, ಬೇರೆ ಕೊಡುಗೈಯ ಸಾರ್ವಜನಿಕರಿಗೆ ಕೂಡ ಆಶ್ರಮದ ಸಾಧು-ಯತಿಗಳಲ್ಲಿ ಅಪಾರವಾದ ನಂಬಿಕೆ. ತಾವು ಕೊಡುವ ಸಹಾಯ, ಧನ-ವಸ್ತು, ಸಾಮಗ್ರಿ ಸಂತ್ರಸ್ತರಿಗೆ ನೇರವಾಗಿ ತಲುಪುತ್ತದೆ ಎಂಬ ಪೂರ್ಣ ಭರವಸೆ !

ಈ ವಿಶಾಲದೇಶದ ದಾನಧರ್ಮಗಳ ಭವ್ಯ ಪರಂಪರೆಯಲ್ಲಿ ತರಬೇತಾದ ಹತ್ತು ಹಲವು ಇತರೆ ಧಾರ್ಮಿಕ ಆಧ್ಯಾತ್ಮಿಕ ಸಂಘಸಂಸ್ಥೆಗಳಿಗೂ, ಇಂತಹ ತುರ್ತುಪರಿಸ್ಥಿತಿಯ ಸೇವಾ ಕಾರ್ಯದ ವಿಷಯದಲ್ಲಿ ರಾಮಕೃಷ್ಣ ಮಿಷನ್ನಿನ ನಿಸ್ವಾರ್ಥ ಸೇವಾಮನೋಭಾವವೇ ಸ್ಫೂರ್ತಿ ಹಾಗೂ ಮಾದರಿ.

**ಗಿರಿಜನರ ವ್ಯಾಪಕತೆ:** ಸಾಮ್ರಾಟ್ ಅಶೋಕನ ಶಾಸನವೊಂದರಲ್ಲಿ, "ಕಾಡುಮೇಡುಗಳಲ್ಲಿನ ಬುಡಕಟ್ಟು ಜನಾಂಗದವರ ಬಗ್ಗೆ ಚಕ್ರವರ್ತಿಗೆ ಅಪಾರ ಅನುಕಂಪವಿದೆ. ಅವರಿಗೆ ಯಾವ ರೀತಿ ನೆರವೀಯಬಹುದು ಎಂಬುದನ್ನೇ ಚಿಂತಿಸುತ್ತಿರುತ್ತಾರೆ" ಮುಂತಾದ ವಿಚಾರಗಳು ವ್ಯಕ್ತವಾಗಿವೆ. ಅಶೋಕ ಆಳುತ್ತಿದ್ದ ಕಾಲ ಕ್ರಿ.ಪೂ. ೩೦೦ರಷ್ಟು ಹಿಂದೆ. ಅಂದರೆ ಭಾರತದಲ್ಲಿ ಎರಡು ಸಾವಿರ ವರ್ಷಗಳಿಂದಲೂ ಕಾಡಿನ ಜನರು ನಾಡಿನ ಜನರ ಜೊತೆಗೆ ಸದ್ಭಾವನೆಯಿಂದ ಇದ್ದರೆಂದು ತಿಳಿದುಬರುತ್ತದೆ. ಮುಸಲ್ಮಾನ್ ಆಳ್ವಿಕೆಯ ಕಾಲದಲ್ಲೂ ಇದು ಮುಂದುವರಿದಿತ್ತು. ಬ್ರಿಟಿಷರ ಕಾಲದಲ್ಲಿ ಅಧಿಕಾರಿಗಳೂ, ಕ್ರೈಸ್ತಪಾದ್ರಿಗಳೂ ಗಿರಿಜನರ ಬದುಕಿನಲ್ಲಿ ಹಸ್ತಕ್ಷೇಪ ಮಾಡತೊಡಗಿದರು. ಇದರಿಂದಾಗಿ, ೧೮ನೇ ಶತಕದ ಉತ್ತರಾರ್ಧದಿಂದ ಗಿರಿಜನರಲ್ಲಿ ಅನೇಕ ಸಮಸ್ಯೆಗಳು ಹುಟ್ಟಿಕೊಂಡವು. ೧೯ನೇ ಶತಕದ ಜನಗಣತಿಯು, ಇಡೀ ದೇಶದಾದ್ಯಂತ ಸುಮಾರು ೫ ಕೋಟಿ ಗಿರಿಜನರು ಇದ್ದಾರೆ ಎಂದು ವರದಿ ಮಾಡಿದೆ. ಅರುಣಾಚಲ ಪ್ರದೇಶ, ಮಿಜೋರಾಮ್, ನಾಗಾಲ್ಯಾಂಡ್ ಮುಂತಾದ ಹಿಮಾಲಯ ಪರ್ವತೀಯ ಪ್ರದೇಶಗಳು ಹಾಗೂ ಒರಿಸ್ಸಾ, ಬಿಹಾರ, ಮಧ್ಯಪ್ರದೇಶ, ಮಹಾರಾಷ್ಟ್ರ, ತೆಲಂಗಾಣ, ಸಹ್ಯಾದ್ರಿ, ನೀಲಗಿರಿ, ಕೊಡಗು, ಉತ್ತರ ಕೇರಳ, ತಮಿಳುನಾಡು, ಕರ್ನಾಟಕಗಳ ಕಾಡುಗಳಲ್ಲಿ ಗಿರಿಜನರ ವಾಸ್ತವ್ಯವನ್ನು ಕಾಣುತ್ತೇವೆ. ವಿಂಧ್ಯ ಪ್ರದೇಶದ ಕಾಡಿನಲ್ಲಿಯೂ ಅವರು ಸಾಕಷ್ಟು ಸಂಖ್ಯೆಯಲ್ಲಿ ನೆಲೆಸಿದ್ದಾರೆ ಇವರಲ್ಲಿ ಶೇ. ೯೫ರಷ್ಟು ದೇಶೀಯ ಮತಧರ್ಮದವರಾದರೆ, ಶೇ. ೫ ರಷ್ಟು ಮತಾಂತರಗೊಳಿಸಿದ ಕ್ರೈಸ್ತರು.

**ರಾಮಕೃಷ್ಣ ಮಿಷನ್ನಿನ ಸೇವಾವಿಧಾನ:** ಸ್ವಾಮಿ ವಿವೇಕಾನಂದರು ಇಂಥ ಗಿರಿಜನರ ಸೇವೆಯ ಅಗತ್ಯವನ್ನು ಒತ್ತಿ ಹೇಳಿದರು. ಇವರ ಮೂಲ ಸಾಂಸ್ಕೃತಿಕ ಆಧ್ಯಾತ್ಮಿಕ ಮೌಲ್ಯಗಳನ್ನು, ವೈಶಿಷ್ಟ್ಯವನ್ನು ನಾಶಗೊಳಿಸದೆ, ಶೈಕ್ಷಣಿಕ ಹಾಗೂ ವೈದ್ಯಕೀಯ ನೆರವನ್ನು ನೀಡಬಲ್ಲಿರಾ ಎಂದು ಕರೆ ನೀಡಿದರು. ಇದು ಬಹು ಕಷ್ಟವಾದ

ಸೂಕ್ಷ್ಮದ ಕೆಲಸ; ಸರಳವಾದುದಲ್ಲ, ಸಂಕೀರ್ಣವಾದುದು. ಅಷ್ಟುಹೊತ್ತಿಗಾಗಲೇ ಗಿರಿಜನರ ಆಂತರಿಕ ಮೌಲ್ಯಗಳು, ಧಾರ್ಮಿಕ ಭಾವನೆಗಳು ಕ್ರೈಸ್ತೀಕರಣದ ಹುಮ್ಮಿಸ್ಸಿನಲ್ಲಿ ಸಾಕಷ್ಟು ಹಾಳಾಗಿದ್ದವು. ಇಂತಹ ಕಠಿಣ ಪರಿಸ್ಥಿತಿಯಲ್ಲಿ ಸ್ವಯಂ ಸೇವಾವ್ರತಿಗಳಾದ ರಾಮಕೃಷ್ಣ ಮಹಾಸಂಘದ ಯತಿಗಳು, ಸ್ವಾಮಿ ವಿವೇಕಾನಂದರ ಉದಾರ ಚಿಂತನೆಯ ಬೆಳಕಿನಲ್ಲಿ ಸೇವಾಕಾರ್ಯಕ್ರಮಗಳನ್ನು ಆರಂಭಿಸಿದರು. ಇದಲ್ಲದೆ ಮತಾಂಧತೆಯಿಂದ ಉಂಟಾಗುವ ಅನಾಹುತಗಳನ್ನು ಸರಿಪಡಿಸುವ ಅಗತ್ಯವೂ ಇತ್ತು. ಗಿರಿಜನರ ಕಲ್ಯಾಣದಲ್ಲಿ ರಾಮಕೃಷ್ಣ ಮಹಾಸಂಘದ ಧ್ಯೇಯ ಎರಡು ಮುಖಗಳನ್ನು ಹೊಂದಿದೆ. ಒಂದು ಶಿಕ್ಷಣ, ಮತ್ತೊಂದು ವೈದ್ಯಕೀಯ ಸೇವೆ. ಎಂಥ ಶಿಕ್ಷಣ? ತಮ್ಮ ಧರ್ಮವನ್ನು ಬಿಡದೆ, ಇತರ ಎಲ್ಲ ಧರ್ಮಗಳನ್ನೂ, ಗೌರವದಿಂದ, ಸಹನೆಯಿಂದ ನೋಡುವ ವಿಶಾಲ ದೃಷ್ಟಿಯನ್ನು ಬೆಳೆಸುವ, ವ್ಯಕ್ತಿಯ ದೈಹಿಕ, ಬೌದ್ಧಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಮುಖಗಳು ಬೆಳಗಿ ಸರ್ವಾಂಗೀಣ ವಿಕಾಸವಾಗುವಂತಹ ಶಿಕ್ಷಣ. ಎಂಥ ವೈದ್ಯಕೀಯ ಸೇವೆ? ದೇಶೀ ಗಿಡಮೂಲಿಕೆ ಔಷಧಿಗಳ ಬಳಕೆಯ ವೈಜ್ಞಾನೀಕರಣದ ಜೊತೆಗೆ, ಆಧುನಿಕ ಶಸ್ತ್ರವಿಜ್ಞಾನದ ಅಳವಡಿಕೆಯ ಸಮನ್ವಯ ಇರುವ ವೈದ್ಯಸೇವೆ. ಇವೆರಡನ್ನೂ ಸಾಧಿಸುವುದೇ ರಾಮಕೃಷ್ಣ ಮಹಾಸಂಘದ ಉದ್ದೇಶ.

**ರಾಮಕೃಷ್ಣ ಮಿಷನ್ನಿನ ಸೇವಾಕಾರ್ಯ:** ಯಾವುದೇ ಸಮಸ್ಯೆಗೂ ಪರಿಹಾರ ಒದಗಿಸಬಲ್ಲ ಸಂಜೀವಿನಿ ಎಂದರೆ ಅದು ಶಿಕ್ಷಣ ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು. ರಾಮಕೃಷ್ಣ ಮಹಾಸಂಘದ ಮೊಟ್ಟಮೊದಲ ಗಿರಿಜನ ಕಲ್ಯಾಣ ಕಾರ್ಯಕ್ರಮ ಆರಂಭವಾದುದು ೧೯೨೦ರ ದಶಕದಲ್ಲಿ. ಕೇವಲ ಹತ್ತು ವರ್ಷಗಳಲ್ಲಿ ಮೇಘಾಲಯದ ಚಿರಾಪುಂಜಿ ಕೇಂದ್ರ ದೊಡ್ಡದಾಗಿ ಬೆಳೆಯಿತು. ಸ್ವಾಮಿ ಪ್ರಭಾನಂದರು (ಕೇತಕಿ ಮಹಾರಾಜ್) ಷೆಲ್ಲಾ, ಷಿಲಾಂಗ್ ಮತ್ತು ಚಿರಾಪುಂಜಿಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದರು. ಮನುಷ್ಯನಿರ್ಮಾಣದ ಗುರಿಯನ್ನಿರಿಸಿಕೊಂಡ ಸ್ವಾಮೀಜಿಯ ಶಿಕ್ಷಣಸೂತ್ರಗಳ ಪ್ರಯೋಗವನ್ನು ಅಲ್ಲಿ ಆರಂಭಿಸಿದರು. ಸ್ವಾಮೀಜಿ ಮತ್ತೊಂದು ಎಚ್ಚರಿಕೆಯ ಮಾತನ್ನು ಹೇಳಿದ್ದಾರೆ. ಗಿರಿಜನರಿಗೆ ಆಧುನಿಕ ಶಿಕ್ಷಣವನ್ನು ಕೊಡುವಾಗ ಅವರ ತಮ್ಮತನವನ್ನಾಗಲಿ, ಮೂಲ ಸಾಂಸ್ಕೃತಿಕ ಮೌಲ್ಯಗಳನ್ನಾಗಲಿ ಅಳಿಸಿಹಾಕದಂತೆ ಎಚ್ಚರಿಕೆ ವಹಿಸಬೇಕು. ಈ ಪ್ರದೇಶದ 'ಖಾಸಿ' ಸಂಸ್ಕೃತಿಯ ವಿಶೇಷ ಗುಣಗಳನ್ನು ಕೇತಕಿ ಮಹಾರಾಜರು ಗಮನಿಸಿದ್ದರು. ಕಾಡಿನ ಉತ್ಪನ್ನಗಳನ್ನೇ ಹೆಚ್ಚಾಗಿ ಬಳಸುತ್ತಿದ್ದರೂ ಈ ಜನರು, ತಮ್ಮ ಮುಖ್ಯ ಆಹಾರವಾದ ಆಲೂಗೆಡ್ಡೆಯ ಕೃಷಿಯನ್ನೇ ಇಟ್ಟುಕೊಂಡಿದ್ದರು; ಕಾಯಿಲೆ ಕಸಾಲೆಗಳಿಗೆ ನಾರುಬೇರು ಬಳಸುತ್ತಿದ್ದರು. ಕೇತಕಿ ಮಹಾರಾಜರು ಹೋಮಿಯೋಪತಿ ಮತ್ತು ಸರಳ ಜೈವ ರಾಸಾಯನಿಕ ಔಷಧಿಗಳನ್ನು ಇಲ್ಲಿನ ವೈದ್ಯರಿಗೆ ಹೇಳಿಕೊಟ್ಟರು. ಸ್ವಾಮಿ ಚಂಡಿಕಾನಂದಜಿ ಎಂಬ ಇನ್ನೊಬ್ಬ ಸ್ವಾಮಿಗಳು ಒಳ್ಳೇ ಗಾಯಕರು; ಅವರು ಹಾಡುಗಳನ್ನು ರಚಿಸುತ್ತಿದ್ದರು. ಅವರು ಈ ಖಾಸಿ ಗಿರಿಜನರಲ್ಲಿ ಸಂಗೀತ ಸ್ವಾಭಾವಿಕವಾಗಿರುವುದನ್ನು ನೋಡಿ ಪ್ರೋತ್ಸಾಹಿಸಿದರು. ದಿವ್ಯತ್ರಯರ ಜೀವನ ಸಂದೇಶಗಳನ್ನು ಕುರಿತ ಹಾಡುಗಳನ್ನು ಖಾಸಿ ಭಾಷೆಯಲ್ಲೇ ರಚಿಸಿ, ಗಾಯಕರಿಗೆ ಕಲಿಸಿ, ಜನಪ್ರಿಯರಾದರು. ರಾಮಕೃಷ್ಣ ಮಿಷನ್ನಿನ ಶಾಲೆಗಳಲ್ಲಿ ಕಲಿತ ಗಿರಿಜನ ಮಕ್ಕಳು ತಮ್ಮ ಮೂಲ ಸಂಸ್ಕೃತಿಯ ಬಗ್ಗೆ, ವೇಷಭೂಷಣ, ಸಂಗೀತ–ನೃತ್ಯ, ಹಬ್ಬ ಹರಿದಿನಗಳ ಬಗ್ಗೆ ಇನ್ನೂ ಹೆಚ್ಚಿನ ಅಭಿಮಾನ ತಳೆದರು; ಹೆಮ್ಮೆಪಟ್ಟುಕೊಂಡರು. ಜಾನಪದ ಗಿರಿಜನ ನೃತ್ಯವೇ ಶಾಲೆಯ ವಾರ್ಷಿಕೋತ್ಸವದಲ್ಲಿ ಪ್ರಧಾನ ಸಾಂಸ್ಕೃತಿಕ ಕಾರ್ಯಕ್ರಮವಾಯಿತು. ಪಾಶ್ಚಾತ್ಯ ನಾಗರಿಕತೆಯ ಅನುಕರಣೆಯಿಂದ ಗೊಂದಲಗೊಂಡು ಚಿಂತಿತರಾದ ಈ ಜನಾಂಗದ ಜನರು ರಾಮಕೃಷ್ಣ ಮಿಷನ್ನಿನ ಶಿಕ್ಷಣದ ಪ್ರಭಾವದಿಂದ ಮತ್ತೆ ತಮ್ಮ ಸಂಸ್ಕೃತಿಯ ಪುನಶ್ಚೇತನದ ಕಾರ್ಯದಲ್ಲಿ ತೊಡಗಿದರು. ಸುಶಿಕ್ಷಿತ ಯುವಕರು 'ಶುದ್ಧ ಖಾಸಿ' ಚಳುವಳಿಯನ್ನೇ ಆರಂಭಿಸಿದರು. ತಮ್ಮ ಪರಂಪರೆಯಲ್ಲೇ ಇದ್ದ ಶ್ರೇಷ್ಠ ಮೌಲ್ಯಗಳನ್ನು ಉಳಿಸಿಕೊಂಡರು. ಸರ್ವಧರ್ಮ ಸಹಿಷ್ಣುತೆ, ಸಮನ್ವಯ, ತತ್ತ್ವಗಳನ್ನೊಳಗೊಂಡ ರಾಮಕೃಷ್ಣ ವಿವೇಕಾನಂದ ಶಾಲೆಗಳು ಕ್ರೈಸ್ತ ಯುವಜನರನ್ನೂ ಆಕರ್ಷಿಸಿದುವು. ಹಿಂದೂ ಮತ್ತು ಕ್ರೈಸ್ತರ ಭಾವೈಕ್ಯ ಜೀವನಕ್ಕೆ ಇದು ಸಹಾಯಕವಾಯಿತು. ಶ್ರೀರಾಮಕೃಷ್ಣರ ಜಯಂತ್ಯುತ್ಸವದ ದಿನ ಚಿರಾಪುಂಜಿಯ ಬೀದಿಬೀದಿಗಳಲ್ಲಿ ದೊಡ್ಡ ಮೆರವಣಿಗೆ ಜರುಗಿತು; ರಾಮಕೃಷ್ಣರ ಮಹಿಮೆಯನ್ನು ಕೊಂಡಾಡುವ ಭಕ್ತಿಗೀತೆಗಳನ್ನು ಹಾಡುತ್ತ ಯುವಜನರ ದಂಡೇ ಹೊರಟಿತ್ತು. ಅವರಲ್ಲಿ ಬೇರೆ ಧರ್ಮದವರೇ ಹೆಚ್ಚು. ಚಿರಾಪುಂಜಿಯ ರಾಮಕೃಷ್ಣ ಮಿಷನ್ನಿನ ಹಾಸ್ಟೆಲಿನ ಪ್ರಾರ್ಥನಾ ಮಂದಿರದಲ್ಲಿ ದಿವ್ಯತ್ರಯರ ಚಿತ್ರಪಟಗಳ ಜೊತೆಗೆ, ಏಸುಕ್ರಿಸ್ತ ಹಾಗೂ ಬುದ್ಧರ ಚಿತ್ರಪಟಗಳೂ ವಿರಾಜಮಾನವಾಗಿವೆ. ಸಂಜೆಯ ಆರತಿ, ಭಜನೆಗಳಿಗೆ ಸ್ಥಳೀಯರೆಲ್ಲ ನೆರೆದಿರುತ್ತಾರೆ.

ಖಾಸಿ ಸಂಸ್ಕೃತಿಯಲ್ಲಿ ಮುಖ್ಯವಾದ ನೈತಿಕ ಮೌಲ್ಯವೆಂದರೆ, ಕಳ್ಳತನ ಮಾಡದಿರುವುದು. ಅಂದರೆ ಯಾರೂ ತಮ್ಮದಲ್ಲದ ಕರವಸ್ತ್ರ, ಪರ್ಸ್, ಕೊಡೆ ಇತ್ಯಾದಿ ವಸ್ತುಗಳನ್ನಾಗಲಿ, ಹಣವನ್ನಾಗಲಿ ಮುಟ್ಟುವುದಿಲ್ಲ. ಅವು ಎಲ್ಲಿಯೇ ಬಿದ್ದಿರಲಿ, ಅಲ್ಲಿಯೇ ಇರಲು ಬಿಟ್ಟುಬಿಡುತ್ತಾರೆ. ಕಳೆದುಕೊಂಡವರು ನೆನಪಿಸಿಕೊಂಡು ಅಲ್ಲಿಗೆ ಬಂದರೆ ಅವು ಅಲ್ಲೇ ಇರುವುದನ್ನು ನೋಡಿ, ಎತ್ತಿ ತೆಗೆದುಕೊಂಡು ಹೋಗುತ್ತಾರೆ. ಹಾಗೆಯೆ ಶಾಲಾಕೊಠಡಿಗಳಲ್ಲಿ ಮಕ್ಕಳು ಮರೆತುಬಿಟ್ಟು ಹೋದ ಪೆನ್ಸಿಲ್, ಜಾಮಿಟ್ರಿ ಬಾಕ್ಸ್, ರಬ್ಬರ್, ನೀರಿನ ಬಾಟಲ್ – ಎಲ್ಲ ಅಲ್ಲೇ ಇರುತ್ತವೆ. ಮಾರನೆ ದಿನ ಮಕ್ಕಳು ಬಂದು ತಮ್ಮ ವಸ್ತುಗಳನ್ನು ತೆಗೆದುಕೊಳ್ಳುತ್ತಾರೆ.

೧೯೩೦ರವರೆಗೆ ೮ನೇ ತರಗತಿಯವರೆಗಿನ ಪ್ರಾಥಮಿಕ ಶಾಲೆಗಳು ಮಾತ್ರ ಇದ್ದುವು. ವಿದ್ಯಾರ್ಥಿಗಳಿಂದ ತುಂಬ ಬೇಡಿಕೆ ಇದ್ದುದರಿಂದ ಹೈಸ್ಕೂಲ್ ತೆರೆಯುವ ಅಗತ್ಯ ತೀವ್ರವಾಯಿತು. ಸುಮಾರು ೧೦೦ ವರ್ಷಗಳಿಂದ ಶಾಲೆಗಳನ್ನು ನಡೆಸುತ್ತಿದ್ದ ಕ್ರೈಸ್ತ ಮಿಷನರಿಯವರು ಹೈಸ್ಕೂಲ್ ತೆರೆಯುವ ಯೋಚನೆಯನ್ನೇ ಮಾಡಿರಲಿಲ್ಲ. ರಾಮಕೃಷ್ಣ ಮಿಷನ್ ೧೯೩೦ರಲ್ಲಿ ಮೊದಲ ಬಾರಿಗೆ ಹೈಸ್ಕೂಲನ್ನು ತೆರೆಯಿತು. ಶಿಕ್ಷಣ ಇಲಾಖೆ ಅದಕ್ಕೆ

ಅನುಮತಿ ನೀಡಿತು. ಇದನ್ನು ನೋಡಿ ಕ್ರೈಸ್ತ ಮಿಷನರಿಯವರು ತಾವೂ ಹೈಸ್ಕೂಲ್‌ನ್ನು ತೆರೆಯಲು ಅನುಮತಿ ಬೇಡಿದಾಗ, ನಿಯಮಾನುಸಾರ ಇಲಾಖೆ ಅನುಮತಿ ಕೊಡಲಿಲ್ಲ. ರಾಮಕೃಷ್ಣ ಹೈಸ್ಕೂಲ್‌ನಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಪೂರ್ತಿ ತುಂಬದ ಹೊರತು ಆ ಪ್ರದೇಶದಲ್ಲಿ ಮತ್ತೊಂದು ಹೈಸ್ಕೂಲ್‌ನ್ನು ತೆರೆಯು ವಂತಿರಲಿಲ್ಲ. ಹೀಗಾಗಿ ೪೫ ಪ್ರಾಥಮಿಕ ಮಾಧ್ಯಮಿಕ ಶಾಲೆಗಳಲ್ಲಿದ್ದ ದಕ್ಷಿಣ ಮೇಘಾಲಯದಲ್ಲಿ, ಮೊಟ್ಟಮೊದಲ ಹೈಸ್ಕೂಲನ್ನು ತೆರೆದ ಶ್ರೇಯಸ್ಸು ರಾಮಕೃಷ್ಣ ಮಿಷನ್ನಿಗೆ ಸಲ್ಲುತ್ತದೆ. ೧೯೬೦ರ ವೇಳೆಗೆ ಹೈಸ್ಕೂಲ್ ವಿದ್ಯಾರ್ಥಿಗಳ ಸಂಖ್ಯೆ ೫೦೦ ದಾಟಿತು. ಈ ಶಾಲೆಯಲ್ಲಿ ಹುಡುಗರು ಹುಡುಗಿಯರು ಸಮ ಸಮ ಸಂಖ್ಯೆಯಲ್ಲಿದ್ದರು.

ಖಾಸಿ ಸಮಾಜ ಮಾತೃಪ್ರಧಾನವಾದುದು. ತಾಯಿಯೇ ಕುಟುಂಬದ ಮುಖ್ಯಸ್ಥೆ. ಎಲ್ಲ ಆಸ್ತಿ ಪಾಸ್ತಿ ಆಕೆಯ ಹೆಸರಲ್ಲಿಯೇ ಇರುತ್ತದೆ. ಪುತ್ರಿಯರೇ ಇಲ್ಲಿ ಆಸ್ತಿಯ ವಾರಸುದಾರರು. ಎಲ್ಲ ಮುಖ್ಯ ನಿರ್ಧಾರಗಳನ್ನು ತೆಗೆದುಕೊಳ್ಳುವವರೂ ಸ್ತ್ರೀಯರೇ. ಹೀಗಿದ್ದರೂ ಧೈರ್ಯ, ಇಚ್ಛಾಶಕ್ತಿ, ದೃಢನಿರ್ಧಾರ ತೆಗೆದುಕೊಳ್ಳುವ ದಿಟ್ಟತನ ಇರುವ ಪುರುಷರನ್ನು ಇಲ್ಲಿನ ಮಹಿಳೆಯರು ಗೌರವಿಸುತ್ತಾರೆ. ಹಾಗೆಯೇ ಶಿಸ್ತು ಮತ್ತು ಬಿಗಿಯಾದ ಆಡಳಿತ ಸಾಮರ್ಥ್ಯ ಇರುವ ಪ್ರಮುಖ ಅಧಿಕಾರಿಗಳನ್ನು ಮೆಚ್ಚುತ್ತಾರೆ.

ಇನ್ನೊಂದು ಸ್ವಾರಸ್ಯದ ಸಂಗತಿ. ಖಾಸಿ ಜನರು ತಾವು ಬರ್ಮಾದ ಮಹಾರಾಣಿಯ ವಂಶಸ್ಥರೆಂದು ಹೇಳಿಕೊಳ್ಳುತ್ತಾರೆ. ಮಧುರ ಕಂಠ, ನೃತ್ಯ-ಲಯ, ಸಂಗೀತ ಪ್ರತಿಭೆ ಇವರಲ್ಲಿ ವಂಶವಾಹಿಯಾಗಿ ಬಂದಿವೆ. ಹಾಗೆಯೇ ಇವರ ಕುಲದೈವ ನಾಗದೇವತೆ. ಇವರು ಆರಾಧಿಸುವ ನಾಗರಾಜನನ್ನು ಅವರ ಭಾಷೆಯಲ್ಲಿ ಉಥ್ಲೆನ್ ಎನ್ನುತ್ತಾರೆ. ನಾಗಭಕ್ತರನ್ನು ನೋಂಗ್ಲುನೊ ಎಂದು ಕರೆಯುತ್ತಾರೆ. ನಾಗರಾಜ ಸುಪ್ರೀತನಾದರೆ ಮಳೆ ಬೆಳೆ ಚೆನ್ನಾಗಿ ಆಗಿ, ನಾಡು ಸುಭಿಕ್ಷವಾಗಿರುವುದೆಂದು ನಂಬಿಕೆ. ಆರಾಧನೆಯಲ್ಲಿ ನರಬಲಿಯೂ ಹಿಂದೆ ಇತ್ತಂತೆ. ಈಗ ಅದು ರೂಢಿಯಲ್ಲಿಲ್ಲ. ಈಗಿನ ವಿದ್ಯಾವಂತರೂ ಈ ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. ಕ್ರೈಸ್ತಧರ್ಮಕ್ಕೆ ಮತಾಂತರಗೊಂಡಿರುವವರು ಕೂಡ ಈ ನಾಗಪೂಜೆಯನ್ನು ಮುಂದುವರಿಸಿದ್ದಾರೆ.

**ಗಿರಿಜನ ಸೇವೆಯ ವ್ಯಾಪಕತೆ :** ೧೯೨೨ರಿಂದ ದೇಶದ ವಿವಿಧ ರಾಜ್ಯಗಳಲ್ಲಿ, ಅಂದರೆ ಮೇಘಾಲಯದ ಖಾಸಿ, ಗಾರೊ, ಜೆಯಂಟಿಯಾ ಬೆಟ್ಟಗಳಲ್ಲಿನ ಬುಡಕಟ್ಟಿನ ಗಿರಿಜನರ ಮಧ್ಯೆ, ಕೇರಳದ ತ್ರಿಸೂರ್ ಕಾಲಡಿ ಪ್ರದೇಶಗಳಲ್ಲಿ, ಪಶ್ಚಿಮ ಬಂಗಾಳದ ಮಾನಸದ್ವೀಪ ಹಾಗೂ ಒರಿಸ್ಸಾದ ಪುರಿ ಭುವನೇಶ್ವರಗಳಲ್ಲಿ, ಕರ್ನಾಟಕದ ಆನೇಕಲ್ ತಾಲ್ಲೂಕಿನ ಶಿವನಹಳ್ಳಿಯಲ್ಲಿ ಮತ್ತು ಚಾಮರಾಜನಗರ ಜಿಲ್ಲೆಯ ಬಿಳಿಗಿರಿರಂಗನಬೆಟ್ಟದ ಕಾಡು ಕುರುಬ ಸೋಲಿಗರ ಹಾಡಿಗಳಲ್ಲಿ - ರಾಮಕೃಷ್ಣ ಮಹಾಸಂಘದ ಹರಿಜನ ಗಿರಿಜನ ಕಲ್ಯಾಣ ಕಾರ್ಯಕ್ರಮಗಳು ಸದ್ದುಗದ್ದಲವಿಲ್ಲದೆ ಸತತವಾಗಿ ನಡೆಯುತ್ತಿವೆ.

೧೯೬೬ರಲ್ಲಿ ರಾಮಕೃಷ್ಣ ಮಹಾಸಂಘದ ಗಿರಿಜನಕಲ್ಯಾಣ ಕಾರ್ಯಕ್ರಮವನ್ನು ಗುರುತಿಸಿದ ಭಾರತ ಸರ್ಕಾರವು, ಚೀನಾ ಮತ್ತು ಬರ್ಮಾ ದೇಶಗಳನ್ನು ಗಡಿಪ್ರದೇಶವಾಗಿ ಹೊಂದಿರುವ ಅರುಣಾಚಲ ಪ್ರದೇಶದಲ್ಲಿ ಸೇವಾಕೇಂದ್ರವೊಂದನ್ನು ತೆರೆಯ ಬೇಕೆಂದು ಆಹ್ವಾನಿಸಿತು. ಎಲ್ಲ ಜಾತಿ ಮತ ಧರ್ಮಗಳನ್ನು ಸಮಭಾವದಿಂದ ಕಾಣುವ, ವೈಜ್ಞಾನಿಕ, ತಾಂತ್ರಿಕ ಮತ್ತು ಮಾನವೀಯ ಮೌಲ್ಯಾಧಾರಿತ ಶಿಕ್ಷಣವನ್ನು ನೀಡುವ ರಾಮಕೃಷ್ಣ ಮಿಷನ್, ಭಾರತ ಸರ್ಕಾರದ ಆದರಕ್ಕೆ ಪಾತ್ರವಾಗಿದ್ದುದೇ ಇದಕ್ಕೆ ಮುಖ್ಯ ಕಾರಣ. ಹೀಗೆ ಅರುಣಾಚಲ ಪ್ರದೇಶದ ಅಲಾಂಗ್, ನರೋತ್ತಮನಗರಗಳಲ್ಲಿ ಶಾಲೆಗಳು ಹಾಗೂ ಇಟಾನಗರದಲ್ಲಿ ಒಂದು ಆಸ್ಪತ್ರೆ ಆರಂಭವಾದವು. ಅರುಣಾಚಲ ಪ್ರದೇಶದ ಗಿರಿಜನರು ಬಹಳ ಮುಗ್ಧರು; ಸರಳ ಸ್ವಭಾವದವರು. ಹೊರ ಪ್ರಪಂಚದ ಕಿಂಚಿತ್ ಜ್ಞಾನವೂ ಇರದಿದ್ದ ಇವರು ಶಿಕ್ಷಣದ ಈ ಹೊಸಬೆಳಕಿಗೆ ಹೊಂದಿಕೊಂಡರು.

ಅರುಣಾಚಲ ಪ್ರದೇಶದಲ್ಲಿ ಸುಮಾರು ೫೦ ಬುಡಕಟ್ಟುಗಳಿವೆ. ಈ ಜನ ಕಷ್ಟಜೀವಿಗಳು, ನಿರ್ಭೀತರು, ಸಾಹಸಿಗರು. ಆನೆ, ಹುಲಿ, ಚಿರತೆ, ಹಾವು, ಕಾಡುಕೋಣಗಳೊಡನೆ ಶಾಂತಿಯುತವಾದ ಸಹಬಾಳ್ವೆ ಇವರದು. ಮತಾಂತರದ ಭಯವಿಲ್ಲದೆ. ರಾಮಕೃಷ್ಣ ಮಿಷನ್ನಿನ ಇಂಗ್ಲಿಷ್ ಮಾಧ್ಯಮ ಶಾಲೆಯಲ್ಲಿ ಹಿಂದಿ, ಸಂಸ್ಕೃತ ಮತ್ತು ವಿಜ್ಞಾನಗಳಲ್ಲಿ ಶಿಕ್ಷಣ ಪಡೆಯುತ್ತಿರುವುದು ಅವರ ಪಾಲಿಗೆ ಇದೇ ಮೊದಲು. ಅಲ್ಲದೆ ತಮ್ಮ ಮೂಲ ಸಂಸ್ಕೃತಿ, ಸಾಂಪ್ರದಾಯಿಕ ಧಾರ್ಮಿಕಾಚರಣೆಗಳಿಗೆ, ಅವರ ಪ್ರಾದೇಶಿಕ ಭಾಷೆಯ ಹಾಡುಗಳಿಗೆ ದೊರೆತ ಪ್ರೋತ್ಸಾಹದಿಂದ ಅವರಿಗೆ ಇನ್ನೂ ಹೆಚ್ಚಿನ ಸಂತೋಷ. ಅವರ ಭಾಷೆಯಲ್ಲೇ ಭಾರತೀಯ ಸಂಸ್ಕೃತಿ ಕುರಿತ ಪುಸ್ತಕಗಳನ್ನು ಮಿಷನ್ ಪ್ರಕಟಿಸತೊಡಗಿತು. ವಿದ್ಯೆ ಮತ್ತು ಪುಸ್ತಕ ಜ್ಞಾನ ಗಿರಿಜನರಲ್ಲಿ ಬಲವಾಗಿ ಬೇರೂರಿದ್ದ ಕೀಳರಿಮೆಯನ್ನು ಈಗ ಹೋಗಲಾಡಿಸಿದೆ; ವಿದ್ಯಾರ್ಥಿಗಳಿಗೆ ತಮ್ಮ ಸಂಸ್ಕೃತಿಯ ಬಗ್ಗೆ ಹೆಮ್ಮೆಯನ್ನು ಮೂಡಿಸಿದೆ.

**ಸಂಸ್ಕೃತಿ ರಕ್ಷಣೆ :** ಈ ಕಾರಣದಿಂದಲೇ ಅರುಣಾಚಲ ಪ್ರದೇಶದ ಗಿರಿಜನರು ಈಶಾನ್ಯ ಪ್ರದೇಶದ ಇತರ ಗಿರಿಜನರಿಗಿಂತ ವೇಗ ವಾಗಿ ಪ್ರಗತಿ ಹೊಂದಿರುವುದು ಮಿಷನ್ನಿನ ರಚನಾತ್ಮಕ ಕಾರ್ಯಕ್ಕೆ ಜಲ್ವಂತ ನಿದರ್ಶನ. ಮಿಷನ್ನಿನ ಶಾಲೆಯ ಒಬ್ಬ ವಿದ್ಯಾರ್ಥಿನಿ ಹೆಚ್ಚಿನ ಶಿಕ್ಷಣಕ್ಕಾಗಿ ಷಿಲ್ಲಾಂಗಿನ ಕಾಲೇಜನ್ನು ಸೇರಿದಳು. ಆಕೆಯು ಕ್ರೈಸ್ತಧರ್ಮಕ್ಕೆ ಮತಾಂತರ ಹೊಂದಿದ ಕುಟುಂಬದವಳು. ಆಕೆಯ ಕಾಲೇಜಿನ ಕ್ರೈಸ್ತ ಸಹಪಾಠಿಗಳು, "ಮೊದಲು ನಿನ್ನ ಹೆಸರನ್ನು ಬದಲಿಸಿ, ಚೆನ್ನಾಗಿರುವ ಪಾಶ್ಚಾತ್ಯ ಕ್ರೈಸ್ತ ಹೆಸರನ್ನು ಇಟ್ಟುಕೊ. ನಿನ್ನದು ಬಹಳ ಹಳೆಯ ದೇಶೀಸಂಪ್ರದಾಯದ ಹೆಸರು" ಎಂದು ಆಕೆಯನ್ನು ಒತ್ತಾಯಿಸತೊಡಗಿದರು. ಆಕೆ ಒಪ್ಪಲಿಲ್ಲ. ಅಷ್ಟೂ ಜನ ಗೆಳತಿಯರು ಒಂದು ಕಡೆ, ಅವಳೊಬ್ಬಳೇ ಇನ್ನೊಂದು ಕಡೆ. ಕಾಲೇಜಿನಲ್ಲಿದ್ದ ಎರಡು ವರ್ಷಗಳೂ ಆಕೆ ತನ್ನ ಸ್ನೇಹಿತರ ಮಾತಿಗೆ ಮಣಿಯಲಿಲ್ಲ. ತನ್ನ ಸಂಪ್ರದಾಯದ ಬಗ್ಗೆ ಇದ್ದ ಅಭಿಮಾನವನ್ನು ಕಳೆದುಕೊಳ್ಳಲಿಲ್ಲ. ಪದವಿ ಪಡೆದು, ತನ್ನ ಕುಲದವನೇ ಆದ ಒಬ್ಬ ಡಾಕ್ಟರ್ ಅನ್ನು ಮದುವೆ ಆಗಿ ಸುಖವಾಗಿದ್ದಳು. ಹೀಗೆ ತನ್ನತನವನ್ನು ಉಳಿಸಿ ಕೊಂಡಳು.

ಅರುಣಾಚಲಿಯರೆಲ್ಲ ಹೀಗೆ ಅಚಲವಾದ ಆತ್ಮವಿಶ್ವಾಸ ಮತ್ತು ಆತ್ಮಾಭಿಮಾನವುಳ್ಳವರು. ಹಿಂದುಳಿಯುವವರೂ ಅಲ್ಲ. ಹಾಗೆಯೇ ಅದೇ ಸಮಯದಲ್ಲಿ, ತಮ್ಮ ಹಾಗೂ ಪಾಶ್ಚಾತ್ಯ ಸಂಸ್ಕೃತಿಗಳ ಒಳ್ಳೆಯ ಅಂಶಗಳನ್ನು ಮಾತ್ರ ಗ್ರಹಿಸಿ ಅಳವಡಿಸಿಕೊಳ್ಳುವುದಕ್ಕೆ ಹಿಂದೆಗೆಯುವವರೂ ಅಲ್ಲ. ಆದರೆ ಅಂಧಾನುಕರಣೆ ಮಾಡುವವರಲ್ಲ. ಅದೇ ನಾಗಾಲ್ಯಾಂಡ್, ಮಿಜೋರಾಮ್‌ಗಳಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆ ಎದ್ದುಕಾಣುತ್ತದೆ. ಇದಕ್ಕೆ ಪ್ರತಿಯಾಗಿ, ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳನ್ನು ಕಲಿತ ಅರುಣಾಚಲಿಯವರು ನಗರವಾಸಿಗಳಾಗಿ ಆಧುನಿಕ ರೀತಿಯಲ್ಲಿ ಜೀವನ ನಡೆಸಿದರೂ, ತಮ್ಮ ಮೂಲ ಸಾಂಸ್ಕೃತಿಕ ಸಂಪ್ರದಾಯವನ್ನು ಬಿಟ್ಟಿಲ್ಲ. ರಾಮಕೃಷ್ಣ ಮಿಷನ್ನಿನ ವಿದ್ಯಾಶಾಲೆಗಳಲ್ಲಿ ಓದಿದ ಈ ಗಿರಿಜನರಿಗೆ ಭಾರತದ ಬಗ್ಗೆ ರಾಷ್ಟ್ರಪ್ರಜ್ಞೆ ಮತ್ತು ಅಭಿಮಾನಗಳಿವೆ. ಶಾಸ್ತ್ರೀಯ ಸಂಗೀತ ದಲ್ಲಿನ ಆಸಕ್ತಿಯಿಂದ ಗಾಯನ ವಾದನಗಳೆರಡರಲ್ಲೂ ಪಾಠ ಹೇಳಿಸಿಕೊಳ್ಳುತ್ತಾರೆ – ಹಿಂದೂಸ್ತಾನಿಯಾದರೂ ಸರಿ, ಕರ್ನಾಟಕ ಸಂಗೀತವಾದರೂ ಸರಿ.

**ಶಾಲೆಗಳಲ್ಲಿ ದೇಶಪ್ರೇಮ ಮತ್ತು ಸಂಸ್ಕೃತಿ ಪರಿಚಯ:** ರಾಮ ಕೃಷ್ಣ ವಿದ್ಯಾಶಾಲೆಗಳ ಗಿರಿಜನ ವಿದ್ಯಾರ್ಥಿಗಳೆಲ್ಲರೂ ನಿತ್ಯ ಪ್ರಾರ್ಥನೆಯ ಹೊತ್ತಿನಲ್ಲಿ ಸ್ವಾಮಿ ವಿವೇಕಾನಂದರು ನುಡಿದ ರಾಷ್ಟ್ರೀಯ ಭಾವೈಕ್ಯತೆಯ ಪ್ರಮಾಣವಚನಗಳನ್ನು ಹೇಳುತ್ತಾರೆ: "ನಾನು ಭಾರತೀಯನು, ಪ್ರತಿಯೊಬ್ಬ ಭಾರತೀಯನೂ ನನ್ನ ಸೋದರನು, ಭಾರತವೇ ನನ್ನ ಪ್ರಾಣ, ಭಾರತವೇ ನನ್ನ ಸ್ವರ್ಗ, ಭಾರತದ ಹಿತದಲ್ಲಿ, ಉದ್ಧಾರದಲ್ಲಿಯೇ ನನ್ನ ಹಿತ" ಎಂಬ ಉಕ್ತಿಗಳು ಆ ವಚನಗಳಲ್ಲಿ ಇರುತ್ತವೆ.

ಒಂದು ಸಲ ಈ ಶಾಲೆಯ ೯ನೇ ತರಗತಿಯ ವಿದ್ಯಾರ್ಥಿನಿ ಯರು ಶೈಕ್ಷಣಿಕ ಪ್ರವಾಸ ಹೊರಟು ಕೊಲ್ಕತ್ತಾ ನಗರದದಲ್ಲಿ ಬಸ್ಸಿಗೆ ಕಾಯುತ್ತಿರುವಾಗ ಬಂಗಾಳಿ ಹಾದಿಹೋಕರು ಅವರನ್ನು ನೋಡಿ, "ಚೀನಿ ಪ್ರವಾಸಿಗರೆಂದು ಕಾಣುತ್ತದೆ" ಎಂದು ದೊಡ್ಡದನಿಯಲ್ಲಿ ಮಾತನಾಡಿಕೊಂಡರು. ಇದನ್ನು ಕೇಳಿಸಿಕೊಂಡ ಆ ಗುಂಪಿನ ಕೆಲವು ಹುಡುಗಿಯರು ತಕ್ಷಣ ಪ್ರತಿಭಟಿಸುವ ದನಿಯಲ್ಲಿ, "ನಾವು ಚೀನೀಯರಲ್ಲ; ಭಾರತೀಯರು – ಅರುಣಾಚಲಿ ಯರು" ಎಂದರು. ದಾರಿಹೋಕರು ತಮ್ಮ ಅಜ್ಞಾನಕ್ಕೆ ನಾಚಿ ಸುಮ್ಮನಾದರು.

ಸ್ವಾಮೀಜಿ, "ಶಿಕ್ಷಣದಿಂದ ಮಾತ್ರ ವ್ಯಕ್ತಿಯ ಅಥವಾ ಸಮಾಜದ ಸುಧಾರಣೆ ಆಗುತ್ತದೆ" ಎಂದು ಮತ್ತೆ ಮತ್ತೆ ಹೇಳು ತ್ತಿದ್ದರು. ದೇಶದ ಉದ್ದಗಲಗಳಲ್ಲಿ, ವಿವಿಧ ಕಡೆ ಇರುವ ರಾಮ ಕೃಷ್ಣ ವಿದ್ಯಾಶಾಲೆಗಳ ಮಕ್ಕಳು ಪರಸ್ಪರ ಭೇಟಿಯಾದಾಗ, ತಾವೆಲ್ಲ ಒಂದೇ ಕುಟುಂಬದವರೆಂಬ ಭಾವನೆಯನ್ನು ತಳೆಯುತ್ತಾರೆ. ಸುಶಿಕ್ಷಿತರಾಗಿರುವುದು ಅವರ ನಡೆ–ನುಡಿ–ವಿಚಾರಗಳಲ್ಲಿ ವ್ಯಕ್ತ ವಾಗುತ್ತದೆ. ರಾಮಕೃಷ್ಣ ಶಾಲೆಯಲ್ಲಿದ್ದ ೯ನೇ ತರಗತಿಯ ಒಬ್ಬ ಹುಡುಗಿಗೆ ಚಿಕ್ಕವಯಸ್ಸಿನಲ್ಲಿಯೇ ಮದುವೆಯಾಗಿತ್ತು. ಹುಡುಗನೂ ಬಾಲಕ. "ಹುಡುಗಿ ಪ್ರಾಯಕ್ಕೆ ಬಂದಿದ್ದಾಳೆ. ಓದು ವುದು ಸಾಕು. ಗಂಡನ ಮನೆಗೆ ಬೇಕು" ಎಂದು ಹುಡುಗನ ಮನೆಯವರು ಹುಡುಗಿಯ ತಂದೆಗೆ ನೋಟೀಸ್ ಕಳಿಸಿದರು. ವಿಷಯ ಗ್ರಾಮ ಪಂಚಾಯಿತಿಯ ಮುಂದೆ ಬಂದಿತು. ಅವರು, "ಹುಡುಗಿ ಕುಲದ ಬಾಲ್ಯವಿವಾಹ ಪದ್ಧತಿಗೆ ಬದ್ಧಳಲ್ಲ. ಭಾರತದ ಸಂವಿಧಾನದ ಪ್ರಕಾರ ಬಾಲ್ಯವಿವಾಹ ನಡೆಯತಕ್ಕದ್ದಲ್ಲ" ಎಂಬ ತಮ್ಮ ತೀರ್ಮಾನವನ್ನು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದರು. ಆ ಹುಡುಗಿ ಗಂಡನ ಮನೆಗೆ ಹೋದುದು, ಮೆಡಿಕಲ್ ಪದವೀಧರೆ ಯಾಗಿ ಹಾಗೂ ಮುಂದೆ ಡಾಕ್ಟರಾಗಿ ಸರ್ಕಾರಿ ಆಸ್ಪತ್ರೆಯಲ್ಲಿ ನೇಮಕಗೊಂಡ ಮೇಲೆಯೇ. ಹೀಗೆ ರಾಮಕೃಷ್ಣ ಶಿಕ್ಷಣಶಾಲೆಯ ಪ್ರಭಾವದಿಂದ ಇಡೀ ಸಮಾಜ ಬದಲಾಗಿತ್ತು. ಯುವಕರು ಮದ್ಯಪಾನ ಮತ್ತು ಧೂಮಪಾನಗಳು ಆರೋಗ್ಯಕ್ಕೆ ಹಾನಿಕರ ಎಂದು ಆ ಚಟಗಳಿಗೆ ಒಳಗಾಗಲಿಲ್ಲ. ಇಡೀ ಸಮಾಜದಲ್ಲಿ ಅಂತಹ ಅರಿವಿನ ವಾತಾವರಣ ಸೃಷ್ಟಿಯಾಗಿತ್ತು.

**ಮಿಷನ್ನಿನ ಕಾರ್ಯಕ್ಕೆ ಹೆಚ್ಚುತ್ತಿರುವ ಗೌರವ :** ಅರುಣಾಚಲ ಪ್ರದೇಶದ ಈ ಗಿರಿಜನ ಸೇವೆ ವರ್ಷ ವರ್ಷಕ್ಕೆ ಸದೃಢವಾಗುತ್ತ, ರಾಮಕೃಷ್ಣ ಮಿಷನ್‌ನ ಬಗ್ಗೆ ವಿಶ್ವಾಸ ಗೌರವ ಬೆಳೆಯುತ್ತಿದೆ. ಮಿಷನ್‌ನ ಕಾರ್ಯವೈಖರಿಯಲ್ಲಿ ಅಡಕವಾಗಿರುವ ನಿಸ್ವಾರ್ಥ ಹಾಗೂ ಫಲಾಪೇಕ್ಷೆಯಿಲ್ಲದ ಸೇವೆ, ಸತ್ಯನಿಷ್ಠೆ, ಭಾವಶುದ್ಧಿ, ಶ್ರದ್ಧೆ ಮುಂತಾದ ಶ್ರೇಷ್ಠ ಮೌಲ್ಯಗಳು ಮನ್ನಣೆಯನ್ನು ಪಡೆಯುತ್ತಿವೆ. ಮಿಷನ್ ಶಾಲೆಯ ವಿದ್ಯಾರ್ಥಿಗಳೆಂದರೆ ಸಾರ್ವಜನಿಕರಲ್ಲಿ ಗೌರವ, ಪ್ರತಿಷ್ಠೆಯ ಭಾವ ಮೂಡುತ್ತಿದೆ. ಇಲ್ಲಿ ಓದಿದ ವಿದ್ಯಾರ್ಥಿಗಳು ಎಂ.ಪಿ., ಎಂ.ಎಲ್.ಎ. ಹಾಗೂ ಸಚಿವರುಗಳೂ ಆಗಿ ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ಇನ್ನೂ ಹಲವರು ಶಿಕ್ಷಕ ರಾಗಿದ್ದಾರೆ ಮತ್ತು ಸೇವಾವ್ರತಿಗಳಾಗಿದ್ದಾರೆ. ಒಂದು ಕಾಲದಲ್ಲಿ ಅಲಕ್ಷಿತರಾಗಿದ್ದ ಇಲ್ಲಿನ ಪರಿಶಿಷ್ಟ ವರ್ಗದವರು ಈಗ ರಾಷ್ಟ್ರೀಯ ಮುಖ್ಯವಾಹಿನಿಯಲ್ಲಿ ಸೇರಿದ್ದಾರೆ.

**ಬಸ್ತರ್‌ಜಿಲ್ಲೆಯ ಭಾಗ್ಯಶ್ರೀ:** ಈ ಯಶಸ್ಸಿನಿಂದ ಪ್ರೋತ್ಸಾಹಿತ ರಾದ ರಾಮಕೃಷ್ಣ ಮಿಷನ್‌ನ ಸಾಧುಗಳು, ಛತ್ತೀಸ್‌ಗಢದ ವಿಶಾಲವಾದ ಬಸ್ತರ್ ಜಿಲ್ಲೆಯಲ್ಲಿ ಸೇವಾಯೋಜನೆ ಹಾಕಿ ಕೊಂಡರು. ಕಳೆದ ೮೦೦ ವರ್ಷಗಳಿಂದ ಹೊರಜಗತ್ತಿನ ಸಂಪರ್ಕವೇ ಇಲ್ಲದಿದ್ದ 'ಮಧಿಯಾ' ಬುಡಕಟ್ಟಿನ ಜನ ಅಬುಝುಮರ್ಡ್ (ಗುಡ್ಡಗಾಡಿನ ಅಜ್ಞಾತರು) ಅಲೆಮಾರಿಗಳು. ೧೯೮೫ರಲ್ಲಿ ಸರ್ಕಾರ ಇವರ ಕಲ್ಯಾಣಕಾರ್ಯವನ್ನು ರಾಮಕೃಷ್ಣ ಮಿಷನ್‌ಗೆ ವಹಿಸಿತು. ಈ ಒಂದು ದೊಡ್ಡ ಸವಾಲನ್ನು ಮಿಷನ್ ಸ್ವೀಕರಿಸಿ ಈಗ ಕಾರ್ಯನಿರತವಾಗಿದೆ. ಕಾಡಿನ ಅಂತರಾಳದಲ್ಲಿರುವ ಈ ಜನರ ಹಟ್ಟಿಗಳಿಗೆ ಹೋಗುವುದೇ ದೊಡ್ಡ ಸಾಹಸ. ೫೦–೬೦ ಕಿ.ಮೀ. ಕಾಡುದಾರಿಯಲ್ಲಿ ಸಾಗಬೇಕು. ದಾರಿಯಲ್ಲಿ ಕೆಲವು ಕಡೆ ತೆವಳುತ್ತ ಅಥವಾ ಅಂಬೆಗಾಲಿಟ್ಟುಕೊಂಡು ಹೋಗು ವುದಕ್ಕೂ ಸಿದ್ಧರಿರಬೇಕು. ಮೊದಮೊದಲು ಈ ಜನರು ಸೇವಾ ಕೇಂದ್ರಗಳನ್ನು ತೆರೆಯಲು ಅಡ್ಡಿಪಡಿಸಿದರು. "ನಮ್ಮನ್ನು ನಮ್ಮ ಪಾಡಿಗೆ ಬಿಟ್ಟು ಹೊರಡಿ" ಎಂದು ನಿಷ್ಠುರವಾಗಿ ಹೇಳಿದ್ದೂ ಉಂಟು. ಆಗ, ಅವರ ಮಕ್ಕಳಿಗೆ ಹಾಲು ಆಹಾರ ಕೊಡುತ್ತ ಒಲಿಸಿಕೊಳ್ಳಬೇಕಾಯಿತು. ಅನಂತರವಷ್ಟೇ ಅಕ್ಷರ ಕಲಿಸುವ ಶಾಲೆ ತೆರೆಯುವ ಪ್ರಯತ್ನ ಸಫಲವಾಯಿತು.

ಮಿಷನ್ನಿನವರು ಮೊದಲು ಪ್ರಾಥಮಿಕ ವಸತಿ ಶಾಲೆ ತೆರೆದು, ಬಾಲಕ ಬಾಲಕಿಯರಿಗೆ ಊಟ-ಉಡುಗೆ ಒದಗಿಸಲಾರಂಭಿಸಿದರು. ಶಾಲೆಯ ಆವರಣದಲ್ಲಿ ಅಲ್ಲಿನ ನಿವಾಸಿಗಳೆಲ್ಲರಿಗೂ ಅಗತ್ಯವಾದ ವಸ್ತುಗಳ ನ್ಯಾಯಬೆಲೆ ಅಂಗಡಿಯನ್ನು ಆರಂಭಿಸಿದರು. ಮಾರಾಟವನ್ನಷ್ಟೇ ಅಲ್ಲ, ಗಿರಿಜನರಿಂದ ಜೇನುತುಪ್ಪ, ಪೊರಕೆ ಮುಂತಾದ ಅವರ ಗೃಹಕೈಗಾರಿಕೆಯ ಉತ್ಪಾದನೆಗಳನ್ನು ಕೊಂಡುಕೊಳ್ಳುವ ವ್ಯವಸ್ಥೆಯೂ ಆಯಿತು. ಆ ಮೊದಲು ಗಿರಿವಾಸಿಗಳು ಈ ಪದಾರ್ಥಗಳನ್ನು ತೀರ ಅಗ್ಗವಾಗಿ ಮಾರಬೇಕಾಗಿತ್ತು. ಜೇನುತುಪ್ಪಕ್ಕೆ ಹೊರಗಡೆಯವರು ೧೦ ರೂಪಾಯಿಗಳನ್ನು ಕೊಟ್ಟರೆ, ಮಿಷನ್ನಿನವರು ೨೮ ರೂಪಾಯಿ ಕೊಡಲು ಆರಂಭಿಸಿದರು. ಪೊರಕೆಗೆ ಹೊರಗಡೆಯವರು ೧ ರೂಪಾಯಿ ಕೊಟ್ಟರೆ, ಮಿಷನ್ನಿನವರು ೬ ರೂಪಾಯಿ ಕೊಡಲು ಆರಂಭಿಸಿದರು. ಇದರಿಂದ ಗಿರಿಜನರಿಗೆ ಹೆಚ್ಚಿನ ಬೆಲೆ ಸಿಕ್ಕಿತು; ಅವರ ಕೈಯಲ್ಲಿ ಹಣ ಆಡತೊಡಗಿತು. ಕೆಲವರು ಸೈಕಲ್ ಕೊಳ್ಳತೊಡಗಿದರು. ಮೈಮುಚ್ಚಿಕೊಳ್ಳಲು ಬಟ್ಟೆ ಧರಿಸ ತೊಡಗಿದರು. 'ಇವರಿಗೆ ಬೆತ್ತಲೆ ಇರುವುದೇ ಇಷ್ಟ ಮತ್ತು ರೂಢಿ' ಎಂಬ ತಪ್ಪು ಭಾವನೆ ಹೋಯಿತು. ಬಡತನ ಹಾಗೂ ಬಟ್ಟೆ ಸಿಕ್ಕದಿದ್ದುದೇ ಇದಕ್ಕೆ ಕಾರಣವಾಗಿತ್ತು.

ಗಿರಿಜನರ ಅನಕ್ಷರತೆ, ಅಜ್ಞಾನಗಳಿಂದಾಗಿ ಅರಣ್ಯ ಇಲಾಖೆಯ ಅಧಿಕಾರಿಗಳು, ಪೊಲೀಸರು ಅವರನ್ನು ಹೆದರಿಸಿ ಬೆದರಿಸಿ ಶೋಷಣೆ ಮಾಡುವುದೇ ಅಭ್ಯಾಸವಾಗಿಬಿಟ್ಟಿತ್ತು. ರಾಮಕೃಷ್ಣ ಮಠದ ಸಂನ್ಯಾಸಿಗಳನ್ನು ಈ ಜನರು ಮೊದಮೊದಲು ಇಂಥ ಪೀಡಿಸುವ ಅಧಿಕಾರಿಗಳೆಂದೇ ಭಾವಿಸಿ ದೂರ ನಿಲ್ಲುತ್ತಿದ್ದರು. 'ಇವರು ನಿಜವಾಗಿಯೂ ನಿಸ್ವಾರ್ಥ ಸೇವಾವ್ರತಿಗಳು, ಸುಲಿಗೆ ಮಾಡುವವರಲ್ಲ' ಎಂದು ತಿಳಿದಮೇಲೆ ಇವರ ಬಗ್ಗೆ ಪ್ರೀತಿ ಗೌರವಗಳಿಂದ ನಡೆದುಕೊಳ್ಳಲಾರಂಭಿಸಿದರು. ಅಷ್ಟೇ ಅಲ್ಲ, ಎಲ್ಲ ಬಗೆಯ ಸಹಕಾರವನ್ನೂ ನೀಡತೊಡಗಿದರು. ಈ ಸ್ಥಳೀಯ ಜನರು, ಮಿಷನ್ನಿನ ಸೇವಾಕಾರ್ಯವನ್ನು ಅಡ್ಡಿಪಡಿಸುತ್ತಿದ್ದ ನಕ್ಸಲೀಯರನ್ನೂ ತಡೆದರು.

ಹೀಗೆ ಕಾನನಾಂತರಗಳಲ್ಲಿ ಅಜ್ಞಾತರಾಗಿ, ದಾರಿದ್ರ್ಯ ಅನಾರೋಗ್ಯಗಳಿಂದ ಪಾಡುಪಡುತ್ತಿದ್ದ ಗಿರಿಜನರ ಉದ್ಧಾರದ ಕಾರ್ಯಕ್ರಮಗಳ ಮೂಲಕ, ಸ್ವಾಮಿ ವಿವೇಕಾನಂದರ ಕನಸನ್ನು ನನಸು ಮಾಡುವಲ್ಲಿ ರಾಮಕೃಷ್ಣ ಮಿಷನ್ ಮೇಲ್ಪಂಕ್ತಿ ಹಾಕಿಕೊಟ್ಟಿದೆ.



**ಇತರ ಯುಗಗಳಲ್ಲಿ ಅನುಷ್ಠಾನದಲ್ಲಿದ್ದ ತಪಸ್ಸು ಮುಂತಾದ ಇತರೆ ಶ್ರಮದಾಯಕ ಯೋಗಗಳು ಈಗ ಕಾರ್ಯವೆಸಗವು. ಈ ಯುಗಕ್ಕೆ ಬೇಕಾದದ್ದು, ಕೊಡುವುದು, ಬೇರೆಯವರಿಗೆ ಸಹಾಯ ಮಾಡುವುದು. 'ದಾನ'ವೆಂದರೆ ಏನು? ಎಲ್ಲಕ್ಕಿಂತಲೂ ಶ್ರೇಷ್ಠವಾದ ಕೊಡುಗೆಯೆಂದರೆ ಅಧ್ಯಾತ್ಮ ಜ್ಞಾನವನ್ನು ಕೊಡುವುದು. ಇದಕ್ಕೆ ಕೆಳಗಿನದು ಲೌಕಿಕ ಜ್ಞಾನವನ್ನು ನೀಡುವುದು, ಆಮೇಲಿನದು ಪ್ರಾಣರಕ್ಷಣೆ, ಕಡೆಯದು ಅನ್ನ ಮತ್ತು ನೀರುಗಳನ್ನು ಕೊಡುವುದು. ಯಾವನು ಅಧ್ಯಾತ್ಮ ಜ್ಞಾನವನ್ನು ನೀಡುತ್ತಾನೆಯೋ, ಅವನು ಜೀವಿಯನ್ನು ನೂರಾರು ಜನ್ಮಗಳನ್ನು ಎತ್ತುವುದರಿಂದ ಪಾರುಮಾಡುತ್ತಾನೆ.**

– ಸ್ವಾಮಿ ವಿವೇಕಾನಂದ



### ದಕ್ಷಿಣ ಭಾರತದಲ್ಲಿ ರಾಮಕೃಷ್ಣ ಮಹಾಸಂಘದ ಮಾತೃಸಂಸ್ಥೆ

# ಚೆನ್ನೈ ಶ್ರೀರಾಮಕೃಷ್ಣ ಮಠ

### ( ಬೆಳೆದುಬಂದ ಪುಣ್ಯಕತೆ )

ಮಂಗಳಮ್ಮ

ದಕ್ಷಿಣ ಭಾರತದ ರಾಮಕೃಷ್ಣ ಆಂದೋಲನದ ಮಾತೃಸಂಸ್ಥೆ ಚೆನ್ನೈನ ಶ್ರೀರಾಮಕೃಷ್ಣ ಮಠ. ಆಧ್ಯಾತ್ಮಿಕ ಚಟುವಟಿಕೆಗಳೊಂದಿಗೆ ಇದು ನಡೆಸುತ್ತಿರುವ ಸೇವಾಕಾರ್ಯಗಳೂ ಹಲವಾರು. ಇದರ ಪಕ್ಷಿನೋಟವನ್ನು ನೀಡಿರುವ ಲೇಖಕಿ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು. ಈ ಪತ್ರಿಕೆಗೆ ಹಲವಾರು ಲೇಖನಗಳನ್ನು ಬರೆದಿರುವ ಇವರು, ಕೆಲವು ಪುಸ್ತಕಗಳನ್ನೂ ರಚಿಸಿದ್ದಾರೆ.

ದಕ್ಷಿಣೇಶ್ವರದಲ್ಲಿನ ಶ್ರೀರಾಮಕೃಷ್ಣರ ಕೊಠಡಿ. ಶ್ರೀರಾಮಕೃಷ್ಣರ ಸುತ್ತ–ಮುತ್ತ ಭಕ್ತರು ನೆರೆದಿದ್ದಾರೆ. ಯುವಕ ನರೇಂದ್ರನೂ ತನ್ನ ಜೊತೆಯವರೊಂದಿಗೆ ಕುಳಿತಿದ್ದಾನೆ. ಒಬ್ಬ ಭಕ್ತ, "ಮಹಾಶಯರೇ, ಜನಗಳ ಉಪಕಾರಕ್ಕಾಗಿ ಆಸ್ಪತ್ರೆ, ಬಾವಿ, ಛತ್ರ ಇತ್ಯಾದಿಗಳನ್ನು ಕಟ್ಟಿಸುವ ಉದ್ದೇಶವಿದೆ ನನಗೆ" ಎಂದನು. ಶ್ರೀರಾಮಕೃಷ್ಣರು, "ಏನಂದೆ? ಜನಗಳ ಉಪಕಾರಕ್ಕಾಗಿ ಎಂದು ಹೇಳಲು ನೀನೆಷ್ಟರವನು? ಜಗತ್ತೇನು ಅಂಗೈ ಅಗಲವೇ? ಭಗವಂತನಲ್ಲದೆ ಬೇರೆ ಯಾರು ಉಪಕಾರ ಮಾಡಬಲ್ಲರು? ಸೇವೆ ಎನ್ನು, ಭಗವಂತನ ಸೇವೆಗೆ ಒದಗಿರುವ ಸದವಕಾಶವೆನ್ನು" ಎಂದು ಏರು ಧ್ವನಿಯಲ್ಲಿ ಹೇಳುತ್ತಾರೆ. ನಂತರ ನರೇಂದ್ರ ತನ್ನ ಜೊತೆಯವರೊಡನೆ ಹೊರಗೆ ಬರುತ್ತಾ, "ಇಂದು ನಾನು ಹೊಸ ಶಿಕ್ಷಣವೊಂದನ್ನು ಕಲಿತೆ. ಬದುಕಿದ್ದರೆ ಇಡೀ ವಿಶ್ವಕ್ಕೆ ಈ ಸಂದೇಶವನ್ನು ಸಾರಿ ಕಾರ್ಯರೂಪಕ್ಕೆ ತರುತ್ತೇನೆ" ಎಂದನು. ಅಂದು ಆಡಿದ ಮಾತನ್ನು, ಗುರುವಿನ ಆದೇಶವನ್ನು ಜಗತ್ತಿನಾದ್ಯಂತ ಹರಡಿದವರು ವಿಶ್ವವಿಖ್ಯಾತ ವೀರಸಂನ್ಯಾಸಿ ಸ್ವಾಮಿ ವಿವೇಕಾನಂದರು! ಪೂರ್ವಾಶ್ರಮದ ನರೇಂದ್ರನಾಥ ದತ್ತ!

ಶ್ರೀರಾಮಕೃಷ್ಣರ ಮಹಾಸಮಾಧಿಯ ನಂತರ ಅವರ ಆಪ್ತಶಿಷ್ಯರು ಸಂನ್ಯಾಸ ದೀಕ್ಷೆಯನ್ನು ಸ್ವೀಕರಿಸಿದರು; ಕೊಲ್ಕತ್ತದ ಬಾರಾನಗರದಲ್ಲಿ ಪಾಳು ಮನೆಯೊಂದನ್ನು ಬಾಡಿಗೆಗೆ ಪಡೆದು, ಅಲ್ಲಿ ಶ್ರೀರಾಮಕೃಷ್ಣರ ಅಸ್ಥಿಯನ್ನು ಪ್ರತಿಷ್ಠಾಪಿಸಿ ಮಠದ ಸ್ಥಾಪನೆ ಮಾಡಿದರು. ಆಗ ಅವರಿಗೆಲ್ಲ ಕೇವಲ ದೈವಸಾಕ್ಷಾತ್ಕಾರವೊಂದೇ ಗುರಿಯಾಗಿತ್ತು. ಜಪ–ತಪ ಸಾಧನೆಗಳೇ ಎಲ್ಲವೂ ಆಗಿತ್ತು. ಸ್ವಾಮಿ ರಾಮಕೃಷ್ಣಾನಂದರು ಗುರುದೇವರ ಆರಾಧನೆಯನ್ನೇ ತಪಸ್ಸನ್ನಾಗಿಸಿಕೊಂಡಿದ್ದರು. ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತದ ಪರ್ಯಟನ ಕೈಗೊಂಡು ದಕ್ಷಿಣಭಾರತದ ತುತ್ತತುದಿಗೆ, ಕನ್ಯಾಕುಮಾರಿಗೆ ಬಂದರು. ಕಡಲತಡಿಯಲ್ಲಿ ನಿಂತು, ಸಮುದ್ರ ಮಧ್ಯದಲ್ಲಿದ್ದ ಹೆಬ್ಬಂಡೆಯೊಂದನ್ನು ನೋಡಿದರು. ಮನ ಸೆಳೆಯಿತು. ಈಜಿಕೊಂಡು ಆ ಬಂಡೆಯನ್ನು ತಲುಪಿದರು, ಏರಿದರು. ಕುಳಿತು ಧ್ಯಾನಸ್ಥರಾದರು. ಕಾಲದ ಪರಿವೆ ಇಲ್ಲ. ಧ್ಯಾನಸ್ಥಿತಿಯಲ್ಲಿ ಭಾರತದ ಸ್ಪಷ್ಟ ಚಿತ್ರ ಕಣ್ಣ ಮುಂದೆ ಕಾಣಿಸುತ್ತಿತ್ತು. ಕಿವಿಯಲ್ಲಿ ಗುರುವಿನ ಆದೇಶವಾಣಿ ಮೊಳಗುತ್ತಿತ್ತು. ಎಚ್ಚೆತ್ತ ನಂತರ ಸ್ವಾಮೀಜಿಯವರು ತಮ್ಮ ಮುಂದಿನ ನಿಲುವನ್ನು ನಿಶ್ಚಯಿಸಿದರು. 'ಶಿವಜ್ಞಾನೇ ಜೀವಸೇವಾ' ಹಾಗೂ ರಾಷ್ಟ್ರ ದೇವತೆಯ ಆರಾಧನೆಗೆ ಸಂಕಲ್ಪ ಮಾಡಿದರು; ಸ್ವ–ಮುಕ್ತಿಯತ್ತ ನಿರ್ಲಕ್ಷ್ಯರಾದರು.

ಅಲ್ಲಿಂದ ಹೊರಟು ಸಂಚರಿಸುತ್ತ ಚೆನ್ನೈ ನಗರದ ನೆಲದಲ್ಲಿ ೧೮೯೩ನೇ ಜನವರಿಯಲ್ಲಿ ಹೆಜ್ಜೆಯನ್ನಿಟ್ಟರು. ಸ್ವಾಮೀಜಿಯವರ ತೇಜಃಪುಂಜ ವ್ಯಕ್ತಿತ್ವ, ಗಂಭೀರವಾಣಿ ಹಲವಾರು ತರುಣರನ್ನು ಆಕರ್ಷಿಸಿತು. ಸ್ವಾಮೀಜಿಯವರ ಉದ್ದೇಶಿತ ಸಂಕಲ್ಪಕ್ಕೆ ಅವರೆಲ್ಲ ಬೆನ್ನೆಲುಬಾಗಿ ನಿಂತರು. ಅಮೆರಿಕಾದ ಚಿಕಾಗೋದಲ್ಲಿ ನಡೆಯಲಿರುವ 'ಸರ್ವಧರ್ಮಸಮ್ಮೇಳನ'ಕ್ಕೆ ಭಾರತೀಯ ಪ್ರತಿನಿಧಿಯಾಗಿ ಹೋಗಲೇಬೇಕೆಂದು ಒತ್ತಾಯಿಸಿ, ಅದಕ್ಕೆ ತಗಲುವ ವೆಚ್ಚವೆಲ್ಲವನ್ನು ತಾವೇ ವಹಿಸಿಕೊಳ್ಳುವುದಾಗಿ ಭರವಸೆ ನೀಡಿದರು. ಅದಕ್ಕೂ ಮುನ್ನ ಭಾರತ ಪರ್ಯಟನೆಯ ಸಮಯದಲ್ಲಿ ಕೆಲವು ಗಣ್ಯಾತಿಗಣ್ಯರೂ ಈ ಕೆಲಸಕ್ಕೆ ತಮ್ಮ ಪ್ರೋತ್ಸಾಹ, ಬೆಂಬಲವನ್ನು ಸೂಚಿಸಿದ್ದರು. ಭಗವಾನ್ ಬುದ್ಧ ಧರ್ಮ ಪ್ರವರ್ತಕನಾದಂತೆ ಸ್ವಾಮೀಜಿ ಸೇವಾಪ್ರವರ್ತಕರಾದರು. ಇದಕ್ಕೆ ಪೂರ್ಣ ಸಹಕಾರ ದೊರೆತದ್ದು ಚೆನ್ನೈನಲ್ಲಿಯೇ ಎಂಬುದು ಗಮನಾರ್ಹ. ೧೮೯೩ರಿಂದ ೧೮೯೭ರವರೆಗೆ ಪಾಶ್ಚಾತ್ಯದೇಶದಲ್ಲಿ ಭಾರತದ ಸನಾತನ ಧರ್ಮ ಮತ್ತು ಸಂಸ್ಕೃತಿಯ ಪ್ರಚಾರಕರಾಗಿ ಸಂಚರಿಸುತ್ತಿದ್ದರೂ, ಪತ್ರಮುಖೇನ ಚೆನ್ನೈನ ಭಕ್ತರ ಸಂಪರ್ಕ ನಿರಂತರವಾಗಿತ್ತು. ತಮ್ಮ ವಿಚಾರಧಾರೆಯನ್ನು ತಿಳಿಸುತ್ತಾ ಭಕ್ತರನ್ನು ಜಾಗೃತಗೊಳಿಸುತ್ತಿದ್ದರು. ಸ್ವಾಮೀಜಿಯವರ ಕಟ್ಟಾ ಅನುಯಾಯಿಯಾದ ಶ್ರೀ ಅಳಸಿಂಗ ಪೆರುಮಾಳ್ ಅವರು 'ಬ್ರಹ್ಮವಾದಿನ್' ಎಂಬ ಆಂಗ್ಲ ಪತ್ರಿಕೆಯನ್ನು ಆರಂಭಿಸಿದರು. ಸ್ವಾಮೀಜಿಯವರ ಸ್ಫೂರ್ತಿಯುತ ಲೇಖನಗಳು ಇದರ ಮುಖಾಂತರ ಜನರನ್ನು ಬಡಿದೆಬ್ಬಿಸುತ್ತಿದ್ದವು. ಇದೇ ಪತ್ರಿಕೆ ಮುಂದೆ ೧೯೧೪ರಲ್ಲಿ 'ವೇದಾಂತ ಕೇಸರಿ' ಎಂಬ ಹೆಸರಿನಲ್ಲಿ ಪ್ರಕಟವಾಗತೊಡಗಿತು. ಇಂದಿಗೂ ಅದು ತನ್ನ ಶ್ರೇಷ್ಠತೆಯನ್ನು ಉಳಿಸಿಕೊಂಡು ಜನಮನಕ್ಕೆ ತಲುಪುತ್ತಿದೆ.

೧೮೯೭ನೇ ಫೆಬ್ರವರಿಯಲ್ಲಿ ಸ್ವಾಮೀಜಿಯವರು ಭಾರತಕ್ಕೆ ಹಿಂದಿರುಗಿದಾಗ, ಅಲ್ಲಿಯ ಜನರು ವಿಶ್ವವಿಖ್ಯಾತ ವೀರ ಸಂನ್ಯಾಸಿಗೆ ಅದ್ಭುತ ಸ್ವಾಗತವಿತ್ತು ಬರಮಾಡಿಕೊಂಡರು. ಚೆನ್ನೈಗೆ ದಯಮಾಡಿದಾಗ ಆತ್ಮೀಯವಾಗಿ ವೈಭವಯುತವಾದ ಮೆರವಣಿಗೆಯೊಂದಿಗೆ ಸಾವಿರಾರು ಅಭಿಮಾನಿಗಳು ಕರೆತಂದು ಶ್ರೀ ಬಿಳಿಗಿರಿ ಅಯ್ಯಂಗಾರ್ ಅವರ ಬಂಗಲೆ 'ಕ್ಯಾಸೆಲ್ ಕರ್ನನ್'ನಲ್ಲಿ ಬಿಡಾರ ಮಾಡಿಸಿದರು. ಇಲ್ಲಿ ಒಂಬತ್ತು ದಿನಗಳು ತಂಗಿದ್ದು, ಆ ಅವಧಿಯಲ್ಲಿ ಚೆನ್ನೈ ನಗರದ ಹಲವು ಭಾಗಗಳಲ್ಲಿ ಸ್ವಾಮೀಜಿಯವರು ನೀಡಿದ ಭಾಷಣಗಳು ಅತ್ಯಂತ ಶ್ರೇಷ್ಠಮಟ್ಟದ್ದಾಗಿದ್ದವು. ಈ ಸಂದರ್ಭದಲ್ಲಿ ಚೆನ್ನೈನ ಭಕ್ತರು ಮತ್ತು ಅಭಿಮಾನಿಗಳು, ರಾಮಕೃಷ್ಣ ಮಠದ ಶಾಖಾ ಕೇಂದ್ರವೊಂದನ್ನು ಶಾಶ್ವತವಾಗಿ ಚೆನ್ನೈನಲ್ಲಿ ತೆರೆಯಬೇಕೆಂದು ಸ್ವಾಮೀಜಿಯವರಲ್ಲಿ ಮನವಿ ಸಲ್ಲಿಸಿದರು. ಸ್ವಾಮೀಜಿಯವರು ಅತ್ಯಂತ ಸಂತೋಷದಿಂದ ಒಪ್ಪಿಗೆ ನೀಡಿ, "ಕಟ್ಟಾ ಸಂಪ್ರದಾಯಸ್ಥರೂ, ಶ್ರೀರಾಮಕೃಷ್ಣರ ಆಪ್ತಶಿಷ್ಯರೂ ಆದ ಸಾಧುಗಳೊಬ್ಬರನ್ನು ಕಳುಹಿಸುತ್ತೇನೆ" ಎಂದು ಹೇಳಿದರು.

ಚೆನ್ನೈನಿಂದ ಕೊಲ್ಕತಾ ತಲುಪಿದ ನಂತರ, ಮಾತು ಕೊಟ್ಟಿದ್ದಂತೆ ತಮ್ಮ ಸಂನ್ಯಾಸಿ ಸೋದರರೊಬ್ಬರನ್ನು ಚೆನ್ನೈಗೆ ಕಳುಹಿಸಿದರು. ಯಾರವರು? ಶ್ರೀರಾಮಕೃಷ್ಣರ ಭಾವಚಿತ್ರದೊಂದಿಗೆ ಆನಂದವನ್ನೂ ಹೊತ್ತು ತಂದ ಅವರೇ ಪರಮ ಪೂಜ್ಯ ಸ್ವಾಮಿ ರಾಮಕೃಷ್ಣಾನಂದರು! ದಕ್ಷಿಣ ಭಾರತದ ಮೊಟ್ಟ ಮೊದಲನೆಯ ಹಾಗೂ ರಾಮಕೃಷ್ಣ ಮಹಾಸಂಘದ ಎರಡನೆಯ ಮಠವೆಂಬ ಹೆಗ್ಗಳಿಕೆಗೆ ಪಾತ್ರವಾದ ಚೆನ್ನೈ ಶ್ರೀರಾಮಕೃಷ್ಣ ಮಠದ ಸ್ಥಾಪಕರು ಎಂದು ಅವರು ಪೂಜನೀಯರಾದರು. ಕಾಕತಾಳೀಯವೆಂಬಂತೆ ಕೊಲ್ಕತಾದಲ್ಲಿ ಶ್ರೀರಾಮಕೃಷ್ಣರು; ಚೆನ್ನೈನಲ್ಲಿ ಅವರ ಪರಂಪರೆಯ ಸ್ವಾಮಿ ರಾಮಕೃಷ್ಣಾನಂದರು!

ಸ್ವಾಮಿ ರಾಮಕೃಷ್ಣಾನಂದರು ತಮ್ಮ ಗುರುದೇವರನ್ನು ಪ್ರತ್ಯಕ್ಷವಾಗಿ ಭಾವಚಿತ್ರದಲ್ಲಿ ಕಾಣುತ್ತಿದ್ದರು. ತಾವು ಮಾಡುವ ಪ್ರತಿ ಕೆಲಸವೂ ಗುರುಸೇವೆಯೇ ಎಂಬ ವಿಶ್ವಾಸ ಉಳ್ಳವರು ಅವರು. ಅವರಿಗೆ ಇದೇ ಜಪ–ತಪ–ಸಾಧನೆ ಎಲ್ಲವೂ!

೧೮೯೭ರಲ್ಲಿ ಚೆನ್ನೈಗೆ ಬಂದ ಸ್ವಾಮಿ ರಾಮಕೃಷ್ಣಾನಂದರು ಮೊದಲು ಕೆಲವು ದಿನಗಳು ಒಂದು ಬಾಡಿಗೆಯ ಮನೆಯಲ್ಲಿ ಶ್ರೀರಾಮಕೃಷ್ಣರನ್ನು ನೆಲೆಗೊಳಿಸಿದ್ದರು. ನಂತರ ಹಿಂದೆ ಸ್ವಾಮಿ ವಿವೇಕಾನಂದರು ತಂಗಿದ್ದ 'ಕ್ಯಾಸೆಲ್ ಕರ್ನನ್'ಗೆ ಬಂದು, ಅಲ್ಲಿ ಶ್ರೀರಾಮಕೃಷ್ಣರನ್ನು ಪ್ರತಿಷ್ಠಾಪಿಸಿ, ಶ್ರೀರಾಮಕೃಷ್ಣ ಮಠವನ್ನು ಸ್ಥಾಪಿಸಿದರು. ೧೮೯೭ನೇ ಇಸವಿ ಮಾರ್ಚ್ ತಿಂಗಳ ಕೊನೆಯ ವಾರದಲ್ಲಿ ಸ್ಥಾಪನೆಯಾದ ಈ ಮಠವು ಸ್ವಾಮಿ ರಾಮಕೃಷ್ಣಾನಂದರ ತ್ಯಾಗ, ಸೇವೆ, ಪರಿಶ್ರಮಗಳ ಫಲವಾಗಿ, ಇಂದು ಬೃಹದಾಕಾರವಾಗಿ ಬೆಳೆದಿದೆ. ರಾಮಕೃಷ್ಣ ಮಹಾಸಂಘದ

ಧ್ಯೇಯಕ್ಕೆ ಅನುಗುಣವಾಗಿ ಬೆಳೆದಿರುವ, ಬೆಳೆಯುತ್ತಿರುವ ದಕ್ಷಿಣ ಭಾರತದ ಶಾಖಾ ಕೇಂದ್ರಗಳ ಮಾತೃಸಂಸ್ಥೆಯೆಂಬ ವಿಶೇಷತೆಗೆ ಪಾತ್ರವಾಗಿದೆ.

ಎಡರುತೊಡರುಗಳಿಲ್ಲದೆ ಸುಸೂತ್ರವಾಗಿ ಯಾವ ಕೆಲಸವೂ ಸಾಗುವುದಿಲ್ಲ. ೧೯೦೬ರಲ್ಲಿ ಈ ಕಟ್ಟಡವನ್ನು ಬಿಡಬೇಕಾದ ಪರಿಸ್ಥಿತಿಯೊದಗಿ, ಒಂದು ಸಣ್ಣ ಮನೆಯೊಂದಕ್ಕೆ ಮಠ ವನ್ನು ವರ್ಗಾಯಿಸಲಾಯಿತು. ಸ್ವಾಮಿಗಳು ಸ್ಥಿತಪ್ರಜ್ಞರಂತೆ, ಸಾವಧಾನಚಿತ್ತರಾಗಿ ಗುರುದೇವರಲ್ಲಿ ನಂಬಿಕೆಯಿಟ್ಟು ತಮ್ಮ ಸೇವಾ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಪ್ರಚಾರ ಕಾರ್ಯಕ್ಕಾಗಿ ನಗರದ ನಾನಾ ಭಾಗಗಳಿಗೆ ತೆರಳಿ ಉಪನ್ಯಾಸಗಳನ್ನು ನೀಡು ತ್ತಿದ್ದರು. ದೈಹಿಕಶ್ರಮಕ್ಕೆ ಗಮನವಿತ್ತವರೇ ಅಲ್ಲ. ಭಕ್ತರ ಪ್ರಾರ್ಥನೆಗೆ ಮರುಗದ ಭಗವಂತನುಂಟೆ! ಕೊಂಡಯ್ಯ ಚೆಟ್ಟಿ ಎನ್ನುವ ಭಕ್ತರೊಬ್ಬರು ಮೈಲಾಪುರದಲ್ಲಿ ಶ್ರೀರಾಮಕೃಷ್ಣ ಮಠಕ್ಕೆಂದು ಜಾಗವೊಂದನ್ನು ದಾನ ಮಾಡಿದರು. ಮನೆಮನೆಗೂ ಹೋಗಿ ಚಂದಾ ಎತ್ತಿ, ಒಂದು ಮಹಡಿಯ ಸಣ್ಣ ಕಟ್ಟಡವೊಂದನ್ನು ಸ್ವಾಮಿ ರಾಮಕೃಷ್ಣಾನಂದರು ಕಟ್ಟಿಸಿ, ಅಲ್ಲಿ ಗುರುದೇವರನ್ನು ಪ್ರತಿಷ್ಠಾಪಿಸಿದರು. ಮಠದ ಕಾರ್ಯಕಲಾಪಗಳು ಸುಗಮ ವಾಗತೊಡಗಿತು ಎನ್ನುವಷ್ಟರಲ್ಲಿ, ಇನ್ನೊಂದು ತರಹ ತೊಂದರೆ ಆರಂಭವಾಯಿತು. ಅಲ್ಪಕಾಲದಲ್ಲಿಯೇ ಆ ಕಟ್ಟಡ ಶಿಥಿಲ ವಾಗತೊಡಗಿತು. ಅಂತೆಯೇ ಸ್ವಾಮಿ ರಾಮಕೃಷ್ಣಾನಂದರ ಶರೀರವೂ ಪ್ರಕೃತಿಸಹಜವಾಗಿ ರೋಗಕ್ಕೆ ತುತ್ತಾಯಿತು. ೧೯೧೧ರಲ್ಲಿ ಕೊಲ್ಕತಾದಲ್ಲಿ ಅವರು ಮಹಾಸಮಾಧಿಯನ್ನು ಹೊಂದಿದರು. ಅವರು ತಮ್ಮ ಸೇವಾವಧಿಯ ಕಾಲದಲ್ಲಿ ದಕ್ಷಿಣ ಭಾರತದಲ್ಲೆಲ್ಲ ಸಂಚರಿಸಿ, ಅಲ್ಲಲ್ಲಿ ಪ್ರಚಾರ, ಪ್ರವಚನಗಳಿಂದ ಜನಜಾಗೃತಿಯುಂಟುಮಾಡಿ, ರಾಮಕೃಷ್ಣ ಆಂದೋಲನವನ್ನು ಕೈಗೊಂಡಿದ್ದರು. ಇವರ ಪರಿಶ್ರಮದಿಂದಾಗಿ ಹಲವು ಕಡೆ ರಾಮಕೃಷ್ಣ ಮಠಗಳ ಸ್ಥಾಪನೆ ಆಯಿತು. ಕರ್ನಾಟಕದಲ್ಲಿ ಬೆಂಗಳೂರಿನ ಮಠಸ್ಥಾಪನೆಗೂ ಇವರೇ ಕಾರಣಕರ್ತರು.

ಅವರು ನೆಟ್ಟ ಬೀಜ ಮೊಳಕೆಯೊಡೆದು ಚಿಗುರಿ ಬೆಳೆಯ ಲಾರಂಭಿಸಿತು. ಸ್ವಾಮಿ ರಾಮಕೃಷ್ಣಾನಂದರಿಂದ ತರಬೇತಿ ಪಡೆದ, ಪೂಜ್ಯ ಸ್ವಾಮಿ ಬ್ರಹ್ಮಾನಂದರ ಶಿಷ್ಯರಾದ ಸ್ವಾಮಿ ಶರ್ವಾನಂದರು ಮಠದ ಅಧ್ಯಕ್ಷರಾಗಿ ಸೇವಾಪ್ರವೃತ್ತರಾದರು. ಶಿಥಿಲವಾದ ಕಟ್ಟಡದ ಬಳಿಯೇ ಇನ್ನೊಂದು ಹೊಸ ಕಟ್ಟಡ ವನ್ನು ಕಟ್ಟಿ, ೧೯೧೭ನೇ ಏಪ್ರಿಲ್ ೨೭ರಂದು, ರಾಮಕೃಷ್ಣ ಮಹಾ ಸಂಘದ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಬ್ರಹ್ಮಾನಂದರಿಂದ ಉದ್ಘಾಟನೆ ಮಾಡಿಸಿದರು. ಪ್ರಾರ್ಥನಾ ಮಂದಿರದ ಜೊತೆಗೆ ಸಾಧು ನಿವಾಸವೂ ಅನಾವರಣಗೊಂಡಿತು. ಈಗ ಇದನ್ನು 'ಹಳೆಯ ದೇವಾಲಯ' ಎಂದು ಕರೆಯುತ್ತಾರೆ. ಇದಲ್ಲದೆ, ಶ್ರೀಮಾತೆ ಶಾರದಾದೇವಿ, ಬ್ರಹ್ಮಾನಂದಜಿ, ಪ್ರೇಮಾನಂದಜಿ, ಶಿವಾನಂದಜಿ, ಅಭೇದಾನಂದಜಿ ಹಾಗೂ ವಿಜ್ಞಾನಾನಂದಜಿ ಮುಂತಾದ ಶ್ರೀರಾಮಕೃಷ್ಣರ ನೇರಶಿಷ್ಯರ ಪಾದಧೂಳಿಯಿಂದ ಪುನೀತವಾದ ಚೆನ್ನೈ ಮಠವು ತೀರ್ಥಕ್ಷೇತ್ರವಾಗಿದೆ.

ಸ್ವಾಮಿ ಶರ್ವಾನಂದರ ತರುವಾಯ ಕ್ರಮವಾಗಿ ಸ್ವಾಮಿ ಯತೀಶ್ವರಾನಂದಜಿ, ಸ್ವಾಮಿ ಅಮೃತೇಶ್ವರಾನಂದಜಿ, ಸ್ವಾಮಿ ಶಾಶ್ವತಾನಂದಜಿ, ಸ್ವಾಮಿ ಕೈಲಾಸಾನಂದಜಿ, ಸ್ವಾಮಿ ತಪಸ್ಯಾ ನಂದಜಿ ಮತ್ತು ಸ್ವಾಮಿ ಸ್ಮರಣಾನಂದಜಿಯವರು ಮಠದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ, ಚೆನ್ನೈ ಮಠವನ್ನು ಪ್ರಗತಿಪಥದತ್ತ ಕೊಂಡೊಯ್ದಿದ್ದಾರೆ. ಈಗ ಸ್ವಾಮಿ ಗೌತಮಾನಂದಜಿಯವರು ಅಧ್ಯಕ್ಷರಾಗಿ ಮಠದ ಸರ್ವತೋಮುಖ ಉನ್ನತಿಗೆ ಶ್ರಮಿಸು ತ್ತಿದ್ದಾರೆ. ಸ್ವಾಮಿ ರಾಮಕೃಷ್ಣಾನಂದರಿಂದ ಕಾರ್ಯ ಚಟುವಟಿಕೆ ಗಳೆಲ್ಲ ಪ್ರಾರಂಭವಾಗಿದ್ದು, ಅವು ವಿಸ್ತರಿಸುತ್ತಲೇ ಮುನ್ನಡೆದಿವೆ. ಎಲ್ಲ ಯತಿವರ್ಯರ ತ್ಯಾಗ, ಸೇವೆಗಳಿಂದ ಮಠದ ಹಿರಿಮೆ ವೃದ್ಧಿಯಾಗುತ್ತಲೇ ಇದೆ ಎಂಬುದರಲ್ಲಿ ಸಂದೇಹವೇ ಇಲ್ಲ.

ಸ್ವಾಮಿ ವಿವೇಕಾನಂದರು ಚೆನ್ನೈನಲ್ಲಿ 'ವಿಶ್ವಭಾವೈಕ್ಯ ಮಂದಿರ'ವೊಂದನ್ನು ಸ್ಥಾಪಿಸಬೇಕೆಂಬ ಆಸೆಯನ್ನು ಹೊಂದಿ ದ್ದರು. ಅವರ ಅಭಿಲಾಷೆ ಕ್ರಿ.ಶ. ೨೦೦೦ದ ಫೆಬ್ರವರಿ ೭ನೇ ದಿನಾಂಕದಂದು ಈಡೇರಿತು. ರಾಮಕೃಷ್ಣ ಮಹಾಸಂಘದ ಪರಮಾಧ್ಯಕ್ಷರಾಗಿದ್ದ ಪರಮಪೂಜ್ಯ ಸ್ವಾಮಿ ರಂಗನಾಥನಂದಜಿ ಮಹಾರಾಜ್ ಅವರಿಂದ ಲೋಕಾರ್ಪಣೆ ಆಯಿತು. ಈ ಭವ್ಯ ಮಂದಿರವು ದಿವ್ಯತ್ರಯರ ಸಾನ್ನಿಧ್ಯದಿಂದ ಪುನೀತವಾಗಿದೆ; ಪವಿತ್ರ ವಾತಾವರಣದಿಂದ ಕೂಡಿದೆ. ಪ್ರಾರ್ಥನಾ ಮಂದಿರದಲ್ಲಿ ಸ್ವಲ್ಪ ಕಾಲ ಕುಳಿತರೂ ಸಾಕು, ಮನಸ್ಸಿಗೆ ನೆಮ್ಮದಿ, ಶಾಂತಿ ಸಿಗುವುದು. ಈ ದಿವ್ಯ, ಭವ್ಯ ಮಂದಿರವು ರಾಮಕೃಷ್ಣ ಮಹಾಸಂಘದ ಧ್ಯೇಯ, ಆದರ್ಶಗಳಿಗೆ ಅನುಗುಣವಾಗಿ ಸಾಂಪ್ರದಾಯಿಕ ರೀತಿಯಲ್ಲಿ ಕಲಾತ್ಮಕವಾಗಿ ನಿರ್ಮಾಣವಾಗಿದೆ. ದಿವ್ಯತ್ರಯರ ಕೃಪೆಯಿಂದ ಆಶ್ರಮದ ಕಾರ್ಯಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿವೆ. ಈಗ ಚೆನ್ನೈನ ಶ್ರೀರಾಮಕೃಷ್ಣ ಮಠದಿಂದ ನಡೆಯುತ್ತಿರುವ ಸೇವಾಕಾರ್ಯಗಳ ಸ್ಥೂಲ ಪರಿಚಯ ಮಾಡಿಕೊಳ್ಳೋಣ.

**ಪೂಜೆ:** ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಸ್ವಾಮಿ ರಾಮಕೃಷ್ಣಾನಂದರು ಗುರುದೇವರ ಪೂಜೆಯನ್ನು ಸಾಂಪ್ರದಾಯಿಕವಾಗಿ ನಿಯಮಬದ್ಧ ರೀತಿಯಲ್ಲಿ ಪ್ರಾರಂಭಿಸಿದರು. ಆ ಪದ್ಧತಿಯು ಎಲ್ಲಾ ರಾಮಕೃಷ್ಣ ಮಠಗಳಲ್ಲೂ ವಿಧ್ಯುಕ್ತವಾಗಿ ನಡೆಯುತ್ತಿದೆ. ಗುರುದೇವರ ಸನ್ನಿಧಿಯೇ ಮಠದ ಎಲ್ಲ ಕಾರ್ಯಚಟುವಟಿಕೆಗಳಿಗೂ ಕೇಂದ್ರ ಬಿಂದು. ಚೆನ್ನೈ ಮಠದಲ್ಲಿಯೂ ಸಹ ಇದು ನಿಯಮಿತವಾಗಿ ನಡೆಯುತ್ತಿದೆ. ಸಂಧ್ಯಾರತಿ, ಉತ್ಸವಗಳ ಆಚರಣೆ (ದಿವ್ಯತ್ರಯರ ಜನ್ಮೋತ್ಸವ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಬುದ್ಧ, ಏಸುಕ್ರಿಸ್ತರ ಜನ್ಮದಿನಗಳು, ಶ್ರೀರಾಮಕೃಷ್ಣರ ನೇರ ಶಿಷ್ಯರುಗಳ ಜನ್ಮದಿನಗಳು, ಶಿವರಾತ್ರಿ, ರಾಮನವಮಿ, ಕೃಷ್ಣಾಷ್ಟಮಿ, ದುರ್ಗಾ ಪೂಜೆ, ಕಾಳಿಪೂಜೆ ಇತ್ಯಾದಿ) ನಿಯಮಿತವಾಗಿ ನಡೆಯುತ್ತಿವೆ. ಪ್ರತಿ ಏಕಾದಶಿಯಂದು ರಾಮನಾಮ ಸಂಕೀರ್ತನೆ, ಭಜನೆಗಳು ನಡೆಯುತ್ತವೆ. ಆಗಾಗ ಜಪಯಜ್ಞ, ಅಧ್ಯಾತ್ಮ ಶಿಬಿರಗಳೂ ಜರುಗುತ್ತವೆ. ಪ್ರತಿ ಶನಿವಾರ, ಭಾನುವಾರಗಳಂದು ಇಂಗ್ಲಿಷ್ ಹಾಗೂ ತಮಿಳು ಭಾಷೆಗಳಲ್ಲಿ ಪ್ರವಚನ ಕಾರ್ಯಕ್ರಮಗಳು ನಡೆಯುತ್ತವೆ.

**ತರಬೇತಿ ಕೇಂದ್ರ :** ಚೆನ್ನೈ ರಾಮಕೃಷ್ಣ ಮಠವು, ರಾಮಕೃಷ್ಣ ಮಹಾಸಂಘಕ್ಕೆ ಸೇರಿ, ಸಂನ್ಯಾಸ ದೀಕ್ಷೆ ಪಡೆದು ಸೇವೆ ಸಲ್ಲಿಸುವ ಅಭಿಲಾಷೆಯುಳ್ಳ ಯುವಕರಿಗೆ, ಸಂಘದ ನಿಯಮದಂತೆ ತರಬೇತಿ ನೀಡುವ ಮೂಲಕ ನಿಷ್ಠಾವಂತ ಸಾಧುಗಳನ್ನು ಉತ್ತಮ ಮಾರ್ಗದರ್ಶನದಲ್ಲಿ ಮುನ್ನಡೆಸುವ ಕೇಂದ್ರವೂ ಆಗಿದೆ (ಎಲ್ಲಾ ಮಠಗಳಲ್ಲೂ ಈ ಸೌಲಭ್ಯವಿದೆ). ಮಠದ ಸಾಧುಗಳು ಪ್ರವಚನಗಳನ್ನು ಆವಶ್ಯಕತೆ ಇದ್ದಲ್ಲೆಲ್ಲ ಸಂಚರಿಸಿ ನಡೆಸುತ್ತಾರೆ. ೨೦೦೪ರಿಂದ **'ವಿವೇಕ ಮುರುಸು'** (ವಿವೇಕಾನಂದ ಕಹಳೆ) ಎಂಬ ಸಂಚಾರಿ ಪ್ರಚಾರಾಂದೋಲನದ ಮೂಲಕ, ಹಳ್ಳಿಹಳ್ಳಿಗಳಲ್ಲೂ ಪ್ರಚಾರ, ದರಿದ್ರನಾರಾಯಣ ಸೇವೆ, ವಿದ್ಯಾಪ್ರಚಾರ ಕಾರ್ಯ ನಡೆಯುತ್ತಿದೆ.

**ಶೈಕ್ಷಣಿಕ ಕಾರ್ಯ :** ೧೯೦೬ ರಲ್ಲಿ ಸ್ವಾಮಿ ರಾಮಕೃಷ್ಣಾನಂದರಿಂದ ಸ್ಥಾಪಿಸಲ್ಪಟ್ಟ ನ್ಯಾಷನಲ್ ಶಾಲೆ (೩ರಿಂದ ೫ನೇ ತರಗತಿ) ವಿದ್ಯಾರ್ಥಿ / ನಿಯರಿಗೆ ತಮಿಳು ಹಾಗೂ ತೆಲುಗು ಭಾಷಾ ಮಾಧ್ಯಮಗಳಲ್ಲಿ ಶಿಕ್ಷಣ ನೀಡುತ್ತಿದೆ. ವಿವೇಕಾನಂದ ಶತಮಾನೋತ್ಸವ ಬಾಲಕಿಯರ ಪ್ರೌಢಶಾಲೆ ೧೯೬೨ರಲ್ಲಿ ಸ್ಥಾಪನೆಯಾಗಿದೆ. ಇವೆರಡೂ ಶಾಲೆಗಳು ಆರ್ಥಿಕವಾಗಿ ಹಿಂದುಳಿದವರಿಗೆ ಮೀಸಲಾಗಿವೆ. ಸ್ವಾಮಿ ರಾಮಕೃಷ್ಣಾನಂದರ ಇಬ್ಬರು ಭಕ್ತರ ಪರಿಶ್ರಮದ ಫಲವಾಗಿ, ೧೯೦೫ರಲ್ಲಿ ಸ್ವಾಮಿಗಳಿಂದ ಅನಾಥ ಬಾಲಕರಿಗಾಗಿ ಸ್ಥಾಪಿತವಾದ ವಿದ್ಯಾರ್ಥಿ ನಿಲಯ ಇಂದು 'ರಾಮಕೃಷ್ಣ ಮಿಷನ್ ಸ್ಟೂಡೆಂಟ್ಸ್ ಹೋಂ' ಎಂಬ ಹೆಸರಿನಿಂದ ಸುಮಾರು ನಾನೂರಕ್ಕೂ ಹೆಚ್ಚು, ನಿರ್ಗತಿಕ ಬಡ ವಿದ್ಯಾರ್ಥಿಗಳಿಗೆ ಆಸರೆಯನ್ನು ನೀಡುತ್ತಿದೆ. ಚೆನ್ನೈ ನಗರದ 'ರಾಮಕೃಷ್ಣ ಮಿಷನ್ ವಿವೇಕಾನಂದ ಕಾಲೇಜು' ದೇಶಾದ್ಯಂತ ಹೆಸರುಗಳಿಸಿರುವ ವಿದ್ಯಾಸಂಸ್ಥೆ. ಹೆಣ್ಣು ಮಕ್ಕಳಿಗಾಗಿಯೇ 'ಶ್ರೀಶಾರದಾ ವಿದ್ಯಾಲಯ' ಎಂಬ ಶಿಕ್ಷಣಸಂಸ್ಥೆ ನಡೆಯುತ್ತಿದೆ. ಇದಲ್ಲದೆ ಹಲವಾರು ಶಾಲೆಗಳ ಮೂಲಕವೂ ಉತ್ತಮ ವಿದ್ಯಾಭ್ಯಾಸ ನೀಡುವ ಕಾರ್ಯ ನಡೆಯುತ್ತಿದೆ.

ಚೆನ್ನೈ ಶ್ರೀರಾಮಕೃಷ್ಣ ಮಠದಲ್ಲಿ ಇರುವ ಶ್ರೀರಾಮಕೃಷ್ಣ ಶತಮಾನೋತ್ಸವ ಗ್ರಂಥಾಲಯದಲ್ಲಿ, ತಮಿಳು, ತೆಲುಗು, ಕನ್ನಡ, ಮಲಯಾಳಂ, ಹಿಂದಿ, ಬಂಗಾಳಿ ಹಾಗೂ ಇಂಗ್ಲೀಷ್ ಭಾಷೆಗಳ ಬೃಹತ್ ಪುಸ್ತಕ ಸಂಗ್ರಹವಿದೆ. ಕಾಲೇಜು ವಿದ್ಯಾರ್ಥಿಗಳಿಗೆ 'ಬುಕ್ ಬ್ಯಾಂಕ್' ಸೌಕರ್ಯವೂ ಇದೆ.

**ಪ್ರಕಾಶನ ಕೇಂದ್ರ :** ಸ್ವಾಮಿ ರಾಮಕೃಷ್ಣಾನಂದರಿಂದ ಪ್ರಾರಂಭವಾದ ಪ್ರಕಟನ ಕಾರ್ಯ ಇಂದು ಬೃಹತ್ತಾಗಿ ಬೆಳೆದಿದೆ. ವಿಶ್ವಪ್ರಸಿದ್ಧವಾದ 'Gospel of Ramakrishna' ಹಾಗೂ 'Sri Ramakrishna, The Great Master' ಗ್ರಂಥಗಳನ್ನು ಲೋಕಾರ್ಪಣೆ ಮಾಡಿದ ಹೆಗ್ಗಳಿಕೆ ಈ ಮಠದ್ದು. ರಾಮಕೃಷ್ಣ – ವಿವೇಕಾನಂದ ಸಾಹಿತ್ಯದ ಜೊತೆಗೆ, ಭಗವದ್ಗೀತೆ, ಉಪನಿಷತ್ತು ಮೊದಲಾದ ಆಧ್ಯಾತ್ಮಿಕ ಗ್ರಂಥಗಳೂ ಪ್ರಕಟಣೆಗೊಳ್ಳುತ್ತಿವೆ. ಇಂಗ್ಲಿಷ್, ತಮಿಳು ಭಾಷೆಗಳ ಪುಸ್ತಕಗಳು ಮುದ್ರಣವಾಗುವುದಕ್ಕೆ ತಕ್ಕ ಆಧುನಿಕ ಮುದ್ರಣ ಯಂತ್ರಗಳನ್ನು ಮಠವು ಹೊಂದಿದೆ.

೧೯೧೪ರಲ್ಲಿ ಪ್ರಾರಂಭವಾದ 'ವೇದಾಂತ ಕೇಸರಿ' (ಇಂಗ್ಲಿಷ್) ಮಾಸಪತ್ರಿಕೆ ಜೊತೆಗೆ, ೧೯೨೧ರಲ್ಲಿ ತಮಿಳು ಮಾಸಪತ್ರಿಕೆ 'ರಾಮಕೃಷ್ಣ ವಿಜಯಂ' ಆರಂಭವಾಗಿದೆ. ತೆಲುಗಿನಲ್ಲಿ 'ಶ್ರೀರಾಮಕೃಷ್ಣ ಪ್ರಭ' ೧೯೪೪ರಲ್ಲಿ ಪ್ರಾರಂಭವಾಯಿತು (ಈಗ ಹೈದರಾಬಾದ್‌ನಿಂದ ಮುದ್ರಿತವಾಗುತ್ತಿದೆ). ಈ ಪತ್ರಿಕೆಗಳ ಲಕ್ಷಾಂತರ ಪ್ರತಿಗಳು ಪ್ರತಿ ತಿಂಗಳೂ ಪ್ರಸಾರವಾಗುತ್ತ, ಜನಮನವನ್ನು ತಲುಪುತ್ತಿವೆ.



**ಉಚಿತ ಔಷಧಾಲಯ :** ವೈದ್ಯಕೀಯ ಕ್ಷೇತ್ರದಲ್ಲಿ ಸಹ ಚೆನ್ನೈ ಮಠ ಉತ್ತಮ ಸೇವೆ ಸಲ್ಲಿಸುತ್ತಿದೆ. ೧೯೨೫ರಲ್ಲಿ ಪ್ರಾರಂಭವಾದ ಮಠದ ಆಸ್ಪತ್ರೆ ಈಗ ಅತ್ಯಾಧುನಿಕ ಸಲಕರಣೆಗಳಿಂದ ಸುಸಜ್ಜಿತವಾದ ಆಸ್ಪತ್ರೆಯಾಗಿ ಮಾರ್ಪಟ್ಟು, ಎಲ್ಲ ವಿಧದ ರೋಗಿಗಳಿಗೂ ಅಲ್ಪಶುಲ್ಕಕ್ಕೆ ಅಥವಾ ಉಚಿತವಾಗಿ ಔಷಧೋಪಚಾರಗಳನ್ನು ಒದಗಿಸುತ್ತಿದೆ. ಅಂದಾಜು ಪ್ರತಿನಿತ್ಯ ೭೦೦ ರೋಗಿಗಳು ಇದರ ಲಾಭ ಪಡೆಯುತ್ತಿದ್ದಾರೆ. ಸಂಚಾರಿ ಆಸ್ಪತ್ರೆ ಮೂಲಕ ಸುಮಾರು ೪೦ ಹಳ್ಳಿಗಳಿಗೆ ವೈದ್ಯಕೀಯ ಸೌಲಭ್ಯವನ್ನು ಒದಗಿಸಲಾಗುತ್ತಿದೆ. ಇದಲ್ಲದೆ, ಕುಷ್ಠ ರೋಗಿಗಳಿಗಾಗಿ ಪುನರ್ವಸತಿ ಕೇಂದ್ರವಿದೆ. ೧,೨೦೦ ಜನ ರೋಗಿಗಳಿಗೆ ಉಚಿತ ಆಹಾರ, ವಸತಿ ಸೌಲಭ್ಯ ದೊರೆಯುತ್ತಿದೆ. ಚೆನ್ನೈನ ಶಂಕರ ನೇತ್ರಾಲಯ ಹಾಗೂ ಸರಕಾರಿ ಆಸ್ಪತ್ರೆಗಳ ಸಹಕಾರದಿಂದ ಕಣ್ಣಿನ ಬೇನೆ ಮತ್ತಿತರ ರೋಗಗಳಿಗೆ ಮಠವು ಸೇವಾ ಸೌಲಭ್ಯವನ್ನು ಒದಗಿಸುತ್ತಿದೆ.

ವಿವೇಕಾನಂದ ಇಲ್ಲಂ

೧೯೭೮ರಲ್ಲಿ ಮಠಕ್ಕೆ ಸಮೀಪವಿರುವ ಒಂದು ಕೊಳಚೆ ಪ್ರದೇಶ ಬೆಂಕಿಗೆ ಆಹುತಿಯಾಯಿತು. ಮಠದ ವತಿಯಿಂದ ಅಲ್ಲಿನ ಒಂದು ಕಾಲೋನಿಯನ್ನು ಪುನರ್ನಿರ್ಮಿಸಿ 'ರಾಮಕೃಷ್ಣಪುರಂ ಕಾಲೋನಿ' ಎಂದು ನಾಮಕರಣ ಮಾಡಲಾಗಿದೆ. ಅಲ್ಲೊಂದು ಶಾಲೆ ಹಾಗೂ ಪ್ರಾರ್ಥನಾ ಮಂದಿರ ಸಹ ನಿರ್ಮಾಣ ಮಾಡಿ ಶಿಕ್ಷಣ ನೀಡಲಾಗುತ್ತಿದೆ.

**ಬಾಲಮಂದಿರ :** ೮ರಿಂದ ೧೩ ವಯಸ್ಸಿನ ಬಾಲಕ / ಬಾಲಕಿಯರಿಗಾಗಿ ನಿಗದಿತ ದಿನಗಳಲ್ಲಿ ಚಾರಿತ್ರ್ಯನಿರ್ಮಾಣ ಮತ್ತು ಭಗವದ್ಗೀತಾ ತರಗತಿಗಳು ನಡೆಯುತ್ತಿವೆ. ಇದರಲ್ಲಿ ವ್ಯಕ್ತಿತ್ವ ವಿಕಸನಕ್ಕೆ ವಿಶೇಷ ಗಮನ ನೀಡಲಾಗಿದೆ.

**ವಿವೇಕಾನಂದ ಯೂತ್ ಫೋರಂ :** ೧೫ರಿಂದ ೩೫ ವಯಸ್ಸಿನವರಿಗಾಗಿ ನಡೆಯುವ ಈ ತರಗತಿಗಳ ಉದ್ದೇಶ ಯುವಜನರ ಚಾರಿತ್ರ್ಯ ನಿರ್ಮಾಣ ಹಾಗೂ ಸೇವಾಭಾವನೆಗಳ ಉನ್ನತಿ. ಈ ಸಂಘಕ್ಕೆ ಸೇರಿರುವ ಯುವಕರು ಚೆನ್ನೈನ ರಾಯ ಪೇಟೆಯಲ್ಲಿರುವ ಸರ್ಕಾರಿ ಆಸ್ಪತ್ರೆಯಲ್ಲಿ ನಿರ್ಗತಿಕ ರೋಗಿಗಳಿಗೆ ಉತ್ತಮ ಸೇವೆ ಸಲ್ಲಿಸುತ್ತಿದ್ದಾರೆ.

**ವೃತ್ತಿ ತರಬೇತಿಗಳು :** ಮಠದ ವತಿಯಿಂದ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಿಗಾಗಿ (೧೫ ವರ್ಷ ಮೇಲ್ಪಟ್ಟು) ನರ್ಸಿಂಗ್, ಕಂಪ್ಯೂಟರ್ ತರಬೇತಿಗಳನ್ನು ನಡೆಸಿ, ಸ್ವಾವಲಂಬಿಗಳಾಗಿ ಬದುಕಲು, ವಿಶೇಷ ತರಬೇತಿ ನೀಡಲಾಗುತ್ತಿದೆ.

**ಪರಿಹಾರ ಕಾರ್ಯ :** ಚೆನ್ನೈ ಮಠದ ವತಿಯಿಂದ ಕ್ಷಾಮ, ಬರಪರಿಹಾರ, ಬೆಂಕಿ ಆಕಸ್ಮಿಕ, ಸೋಂಕು ರೋಗಗಳಿಂದ ಆಗುವ ಹಾನಿಗಳಿಗೆ ವಿಶೇಷ ಪರಿಹಾರವನ್ನು ಸೂಕ್ತ ಸಮಯ ದಲ್ಲಿ ಒದಗಿಸಲಾಗುತ್ತಿದೆ.

**ವಿವೇಕಾನಂದ ಇಲ್ಲಂ :** ೧೮೯೭ರಲ್ಲಿ ಸ್ವಾಮಿ ವಿವೇಕಾನಂದರು ತಂಗಿದ್ದ ಬಂಗಲೆ ಈಗ 'ಸ್ವಾಮಿ ವಿವೇಕಾನಂದ ಮ್ಯೂಸಿಯಂ' ಆಗಿದೆ. ಸ್ವಾಮೀಜಿಯವರ ಜೀವನಕ್ಕೆ ಸಂಬಂಧಪಟ್ಟ ವಿಶಿಷ್ಟ ಚಿತ್ರಫಲಕಗಳನ್ನೂ, ದೃಶ್ಯ-ಶ್ರಾವ್ಯ ಪ್ರದರ್ಶನಗಳನ್ನೂ ಇಲ್ಲಿ ಕಾಣಬಹುದು. ಇಲ್ಲಿ ಯುವಕರಿಗೆ ಯೋಗ ಮತ್ತು ವ್ಯಕ್ತಿತ್ವ ವಿಕಸನ ತರಗತಿಗಳನ್ನೂ ನಡೆಸಲಾಗುತ್ತಿದೆ.

ಈ ಮಾತೃಸಂಸ್ಥೆಯ ಸ್ಥಾಪನೆಯ ನಂತರ ದಕ್ಷಿಣ ಭಾರತದಲ್ಲಿ ಅನೇಕ ರಾಮಕೃಷ್ಣ ಮಠಗಳ ಸ್ಥಾಪನೆ ಆಗಿ, ಅವೆಲ್ಲವೂ ದಿವ್ಯತ್ರಯರ ಸಂದೇಶವನ್ನು ಸಮರ್ಥವಾಗಿ ಸಾರುತ್ತಿವೆ. ಹಾಗೆಯೇ, ಜೀವನಲ್ಲಿ ಶಿವನನ್ನು ಕಾಣುವ ಸ್ವಾಮಿ ವಿವೇಕಾನಂದರ ಕನಸನ್ನು ಸಾರ್ಥಕಗೊಳಿಸುತ್ತಿವೆ. ಹೀಗೆ ಚೆನ್ನೈ ಶ್ರೀರಾಮಕೃಷ್ಣ ಮಠವು ದಕ್ಷಿಣ ಭಾರತದಲ್ಲಿ ಇಂದು ಹೆಮ್ಮರವಾಗಿ ಬೆಳೆದುನಿಂತಿರುವ ರಾಮಕೃಷ್ಣ ವಿವೇಕಾನಂದ ಆಂದೋಲನದ ತವರೂರಾಗಿದೆ.







## ಕೃಷ್ಣನ ನಾಡಿನಲ್ಲಿ ಸೇವಾಯೋಗ

# ಬೃಂದಾವನ ಸೇವಾಶ್ರಮ

ಎನ್. ಪ್ರಭಾಕರ್

**ರಾಮಕೃಷ್ಣ ಮಹಾಸಂಘದ ವೈದ್ಯಕೀಯ ಸೇವಾಕೇಂದ್ರಗಳಲ್ಲಿ ಬೃಂದಾವನ ಸೇವಾಶ್ರಮವು ತನ್ನದೇ ಆದ ಮಹತ್ವವನ್ನು ಪಡೆದಿದೆ. ಶ್ರೀಕೃಷ್ಣನ ಜನ್ಮಭೂಮಿಯಲ್ಲಿ, ಆತನೇ ಬೋಧಿಸಿದ ನಿಸ್ವಾರ್ಥ ಕರ್ಮಯೋಗದ ಉತ್ತಮ ಕಾರ್ಯಾಗಾರ ಇದಾಗಿದೆ.**

**ಈ ಪುಣ್ಯಸಂಸ್ಥೆ ಬೆಳೆದುಬಂದ ಪಾವನ ಹಾಗೂ ರೋಚಕ ಕಥೆಯನ್ನು ವಿವರಿಸಿರುವ ಶ್ರೀಯುತರು ಭಾರತೀಯ ಜೀವವಿಮಾ ನಿಗಮ ಸಂಸ್ಥೆಯ ನಿವೃತ್ತ ಅಧಿಕಾರಿಗಳಾಗಿದ್ದರು. ಹಲವಾರು ಅನುವಾದ ಕಾರ್ಯಗಳಲ್ಲಿ ನಿರತರಾಗಿದ್ದ ಇವರು ಇತ್ತೀಚಿಗೆ ಹಠಾತ್ತನೆ ನಿಧನ ಹೊಂದಿದರು. ಇದು ವಿವೇಕಪ್ರಭಕ್ಕೆ ಅವರ ಚೊಚ್ಚಲ ಹಾಗೂ ಕಡೆಯ ಮೂಲ ಲೇಖನ. ಇದರ ಪ್ರಕಟಣೆಯ ಮೂಲಕ ವಿವೇಕಪ್ರಭವು ಮೃತರ ಆತ್ಮಕ್ಕೆ ಶಾಂತಿ ಕೋರುತ್ತಿದೆ.**

ಬೃಂದಾವನ ಎಂಬ ಹೆಸರು ಕೇಳಿದರೆ ಸಾಕು, ಸಾವಿರಾರು ಹಿಂದುಗಳಿಗೆ ಮೈನವಿರೇಳುತ್ತದೆ. ಅದರಲ್ಲೂ ವೈಷ್ಣವ ಸಂಪ್ರದಾಯದವರಿಗೆ ಭಾವತುಂಬಿ ಆನಂದಾಶ್ರುಗಳು ಹೊರಸೂಸುತ್ತವೆ. ಎಷ್ಟಾದರೂ ಆ ಪುಣ್ಯಸ್ಥಳ ಬಾಲಕೃಷ್ಣನು ತನ್ನ ಲೀಲೆಯಾಡಿದ ಸ್ಥಳ! ಕಂಸಪ್ರೇರಿತ ಪೂತನಿ, ವೃಷಭಾಸುರ, ಕೇಶಿದಾನವರನ್ನು ಯಮಸದನಕ್ಕೆ ಅಟ್ಟಿ ಲೋಕೋಪಕಾರ ಮಾಡಿದ ಮಹಾ ಮಹಿಮನ ಕೇವಲ ಸ್ಮರಣೆಮಾತ್ರವೇ ಹೃದಯದಲ್ಲಿ ಭಕ್ತಿ, ಗೌರವ ಹಾಗೂ ಧನ್ಯತಾ ಭಾವನೆಗಳನ್ನು ಮೂಡಿಸುವುದು. ಬೃಂದಾವನದ ಮಣ್ಣಿನ ಕಣಕಣವೂ ಪವಿತ್ರವೆಂದು ಭಾವಿಸುವ ಭಕ್ತರು ಈಗಲೂ ಸಹಸ್ರಾರು ಸಂಖ್ಯೆಯಲ್ಲಿ ಬಂದು, ಭಕ್ತಿಭಾವದಲ್ಲಿ ಮಿಂದು, ತಮ್ಮ ಜೀವನ ಧನ್ಯ ಎಂದು ಎಣಿಸುತ್ತಾರೆ. ಮತ್ತೆ ಕೆಲವರು ವೃದ್ಧಾಪ್ಯ ದೆಸೆಯಿಂದ ಅಲ್ಲಿಯೇ ನೆಲೆಸಿ, ಅಲ್ಲಿ ಮರಣ ಹೊಂದಿದರೆ ಪುಣ್ಯಲೋಕಗಳು ಪ್ರಾಪ್ತವಾಗುವುದೆಂದೂ, ಭವಸಾಗರದಿಂದ ಪಾರಾಗುವೆವು ಎಂದೂ ಭಾವಿಸಿ ಅಲ್ಲಿಯೇ ತಮ್ಮ ಉಳಿದ ಜೀವನವನ್ನು ಕಳೆಯುತ್ತಾರೆ.

ಬೃಂದಾವನ (ವೃಂದಾವನ) ಎಂದರೆ ವನಗಳ ಸಮೂಹ. ನಿಧುವನ, ಮಧುವನ ಮುಂತಾದ ಅನೇಕ ವನಗಳ ಸಮೂಹವೇ ಬೃಂದಾವನ. ಇಂತಹ ಮಹಿಮೆಯುಳ್ಳ ಬೃಂದಾವನದ ಇತಿಹಾಸವನ್ನು ಕೊಂಚ ಪರಿಶೀಲಿಸೋಣ. ರಾಮಾಯಣದಲ್ಲಿ ವ್ರಜಮಂಡಲದ ವಿವರಣೆ ಇದೆ. ಹಿಂದೆ ಕೃತಯುಗದಲ್ಲಿ ಮಧುವೆಂಬ ಬಲಾಢ್ಯನಾದ ಮಹಾಸುರನಿದ್ದನು. ಅವನು ಶರಣು ಬಂದವರಿಗೆ ರಕ್ಷಕನೂ, ದೇವತೆಗಳೊಡನೆ ಸ್ನೇಹಪರನೂ ಆಗಿದ್ದನು. ಈ ಮಧುವು ಶಿವನನ್ನು ಕುರಿತು ತಪಸ್ಸು ಮಾಡಿ, ಅವನನ್ನು ಮೆಚ್ಚಿಸಿ, ವರಪಡೆದುಕೊಂಡನು. ಶಿವನು ತನ್ನ ತ್ರಿಶೂಲದಿಂದ ಮತ್ತೊಂದು ಶೂಲವನ್ನು ಸೆಳೆದು, ಅದಕ್ಕೆ ಶಕ್ತಿ ತುಂಬಿ ಅದನ್ನು ಮಧುವಿಗೆ ಕೊಟ್ಟು, "ಮಹಾಶಕ್ತಿಶಾಲಿಯಾದ ಈ ಶೂಲವು, ದೇವತೆಗಳೊಡನೆ ವೈರತ್ವ ಬೆಳೆಸಿದರೆ ಅದೃಶ್ಯವಾಗುವುದು. ಧರ್ಮಾಚರಣೆಯಲ್ಲಿ ಇರುವವರೆಗೂ ನಿನ್ನಲ್ಲಿರುವುದು" ಎಂದು ಹೇಳಿದನು.

ಮಧುವಿಗೆ ಲವಣನೆಂಬ ಪುತ್ರನು ಜನಿಸಿದನು. ಈ ಲವಣನು ಹುಟ್ಟಿನಿಂದಲೇ ಕ್ರೂರ, ದುಷ್ಟನಾಗಿದ್ದನು; ಯಾವಾಗಲೂ ಪಾಪಕರ್ಮವನ್ನೇ ಮಾಡುತ್ತಿದ್ದನು. ತಂದೆಯ ಮಾತಿಗೆ ಗೌರವ ಕೊಡದೇ ಸ್ವೇಚ್ಛೆಯಿಂದ ಪಾಪಾಚರಣೆಯಲ್ಲಿ ತೊಡಗಿರುತ್ತಿದ್ದನು. ಮಧುವು ತಾಪದಿಂದ ಬೆಂದು, ಮಗನ ಕೃತ್ಯಗಳಿಂದ ಬೇಸತ್ತು ವರುಣಲೋಕಕ್ಕೆ ಹೊರಟುಹೋದನು. ಹೋಗುವಾಗ

ಈ ಶೂಲವನ್ನು ಅವನಿಗೆ ಕೊಟ್ಟು ಅದರ ಮಹಿಮೆಯನ್ನು ತಿಳಿಸಿದನು. ಶೂಲದ ಮಹಿಮೆಯಿಂದ ಲವಣಾಸುರನು ದೊಡ್ಡ ಲೋಕಕಂಟಕನಾದನು. ತಾಪಸರು, ಮುನಿಗಳು, ಋಷಿಗಳು ಇವನ ತಂಟೆ ತಾಳಲಾರದೆ ಶ್ರೀರಾಮಚಂದ್ರನಿಗೆ ಅವನನ್ನು ನಿಗ್ರಹಿಸಲು ಅರಿಕೆ ಮಾಡಿಕೊಂಡರು. ಶ್ರೀರಾಮಚಂದ್ರನು, ಶತ್ರುಘ್ನನನ್ನು ಕಳುಹಿಸಿ ಲವಣಾಸುರನನ್ನು ವಧೆ ಮಾಡಿಸಿದನು. ಶತ್ರುಘ್ನನು ಮಧುಪುರಿಯನ್ನು ಪುನರ್ನಿರ್ಮಾಣ ಮಾಡಿ 'ಮಧುರಾಪುರ' ಎಂದು ಹೆಸರಿಟ್ಟನು. ಮುಂದೆ ಇದೇ ಮಥುರಾ ನಗರ ಎನ್ನಿಸಿಕೊಂಡಿತು.

ಭಾಗವತದಲ್ಲಿ ಪಾಂಡವರು ಮಹಾಪ್ರಸ್ಥಾನಕ್ಕೆ ಹೊರಡುವಾಗ, ಈ ವ್ರಜಮಂಡಲಕ್ಕೆ, ವಜ್ರನಾಭನನ್ನು (ಶ್ರೀಕೃಷ್ಣನ ಮರಿಮಗ) ರಾಜನನ್ನಾಗಿ ಮಾಡಿದುದರ ಉಲ್ಲೇಖವಿದೆ. ಈ ವ್ರಜಮಂಡಲವು ಮುಂದೆ ಏನಾಯಿತು ಎಂಬುದಕ್ಕೆ ಪುರಾವೆಗಳು ಇಲ್ಲ. ಕ್ರಿ.ಶ. ೧೧೧೮ರಲ್ಲಿ ಘಜನಿ ಮಹಮ್ಮದನು ಮಥುರಾ ಪ್ರದೇಶಕ್ಕೆ ಧಾಳಿ ಮಾಡಿ ಎಲ್ಲವನ್ನೂ ಹಾಳುಗೆಡವಿದನು. ಅನೇಕ ಶತಮಾನಗಳವರೆಗೆ ಈ ಪ್ರದೇಶವು ಜನರಹಿತವಾಗಿತ್ತು, ಅಲ್ಲಿ ಇದ್ದ ಎಲ್ಲಾ ದೇವಾಲಯಗಳೂ ನಾಶವಾಗಿಹೋಗಿದ್ದವು.

ನಂತರ ೧೫೧೮ರಲ್ಲಿ ಶ್ರೀ ಚೈತನ್ಯ ಪ್ರಭುವು ಬೃಂದಾವನಕ್ಕೆ ಭೇಟಿಕೊಟ್ಟು, ಅದರಲ್ಲಿರುವ ಮಹಿಮಾಸ್ಥಳಗಳನ್ನು ಗುರುತಿಸಿ ಪುನಃ ವ್ರಜಮಂಡಲವನ್ನು ಪೂರ್ವದ ವೈಭವಕ್ಕೆ ತರಲು ಪ್ರಯತ್ನಿಸಿದನು. ಮಥುರಾ ನಗರದ ಸುತ್ತಲೂ ೮೪ ಮೈಲಿ ಸುತ್ತಳತೆ ಇರುವ ಪ್ರದೇಶವೇ 'ವ್ರಜಮಂಡಲ'ವೆನಿಸಿಕೊಳ್ಳುತ್ತದೆ. ವ್ರಜಮಂಡಲದಲ್ಲಿ ೧೨ ಗ್ರಾಮಗಳಿದ್ದು ಅದನ್ನು ವನ ಅಥವಾ ಅರಣ್ಯ ಎಂದು ಕರೆಯುತ್ತಾರೆ. ಈ ಎಲ್ಲ ವನಗಳು ಶ್ರೀಕೃಷ್ಣನ ಲೀಲಾಭೂಮಿಯಾಗಿತ್ತು. ಆದರೆ ಅವುಗಳಲ್ಲಿ ಪ್ರಧಾನವಾದುದು ಬೃಂದಾವನ. ವ್ರಜಧಾಮದಲ್ಲಿ ಶ್ರೀಕೃಷ್ಣನ ದಿವ್ಯಲೀಲೆಯ ಕುರುಹಾಗಿ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ಮುಖ್ಯವಾದವು ಗೋವಿಂದಜಿ, ಮದನಮೋಹನ, ರಾಧಾರಮಣ, ನಿಧುವನ, ಬಂಕಿ ಬಿಹಾರಿ ಮುಂತಾದವು.

ಎಷ್ಟೋ ವರ್ಷಗಳು ಗತಿಸಿದ ಮೇಲೆ ಶ್ರೀರಾಮಕೃಷ್ಣರು ಶ್ರೀಮಾತೆ ಶಾರದಾದೇವಿಯವರು ಹಾಗೂ ಶ್ರೀರಾಮಕೃಷ್ಣರ ಸಾಕ್ಷಾತ್ ಶಿಷ್ಯರಾದ ಸ್ವಾಮಿ ವಿವೇಕಾನಂದರು, ಸ್ವಾಮಿ ಬ್ರಹ್ಮಾನಂದರು, ಸ್ವಾಮಿ ಯೋಗಾನಂದರು, ಸ್ವಾಮಿ ಅಭೇದಾನಂದರು, ಸ್ವಾಮಿ ತುರೀಯಾನಂದರು, ಸ್ವಾಮಿ ಸುಬೋಧಾನಂದರು ಮತ್ತಿತರರು ಇಲ್ಲಿಗೆ ಬಂದು ಸಾಧನೆ ಮಾಡಿದ ದಾಖಲೆಗಳಿವೆ.

**ಬೃಂದಾವನದ ಹೀನಸ್ಥಿತಿ:** ೧೯ನೇ ಶತಮಾನದ ಅಂತ್ಯ ಮತ್ತು ೨೦ನೇ ಶತಮಾನದ ಆದಿಯಲ್ಲಿ ಬೃಂದಾವನದ ಸ್ಥಿತಿ ಹೇಗಿತ್ತು ಎಂದು ನೋಡೋಣ. ಆಗ ಬೃಂದಾವನವು ವೈಷ್ಣವ ಸಾಧುಗಳ, ಭಕ್ತರ ಆಕರ್ಷಣೆಯ ಸ್ಥಳವಾಗಿತ್ತು. ಭಾರತದ ಎಲ್ಲ ಕಡೆಯಿಂದ ಯಾತ್ರಿಗಳು ಬೃಂದಾವನಕ್ಕೆ ಬರುತ್ತಿದ್ದರು. ಅಲ್ಲಿನ ಧರ್ಮಶಾಲೆಗಳಲ್ಲಿ, ದೇವಾಲಯಗಳಲ್ಲಿ ತಂಗಿ ತಮ್ಮ ಆಧ್ಯಾತ್ಮಿಕ ಸಾಧನೆಯನ್ನು ಮುಂದುವರೆಸುತ್ತಿದ್ದರು. ಕೆಲವರು ಅಲ್ಲಿಯೇ ಉಳಿಯುತ್ತಿದ್ದರು. ಜನಜಂಗುಳಿಯ ಕಾರಣದಿಂದ ನೈರ್ಮಲ್ಯ, ಶುಚಿತ್ವಗಳಿಲ್ಲದೆ ನಾನಾವಿಧವಾದ ಸಾಂಕ್ರಾಮಿಕ ರೋಗಗಳು ಬಹುಬೇಗ ಹರಡುತ್ತಿದ್ದವು. ರೋಗಪೀಡಿತರಾದ ಜನರಿಗೆ ಸರಿಯಾದ ಔಷಧ, ಉಪಚಾರಗಳು ಲಭ್ಯವಿರಲಿಲ್ಲ. ಕೆಲವು ಯಾತ್ರಿಗಳು ತಮ್ಮೊಡನೆ ಬಂದಿದ್ದ ಇತರ ಯಾತ್ರಿಗಳು ರೋಗ ಪೀಡಿತರಾದರೆ ಅವರನ್ನು ಅಲ್ಲಿಯೇ ಬಿಟ್ಟು ಹೋಗುತ್ತಿದ್ದರು. ಧರ್ಮಶಾಲೆಗಳಲ್ಲಿ ಯಾರಾದರೂ ರೋಗಪೀಡಿತರಿದ್ದರೆ ನಿರ್ದಾಕ್ಷಿಣ್ಯವಾಗಿ ಅವರನ್ನು ಹೊರಹಾಕುತ್ತಿದ್ದರು. ಇಂತಹವರ ಪಾಡು ಬಹಳ ಶೋಚನೀಯವಾಗಿತ್ತು. ಅವರು ರಸ್ತೆಗಳಲ್ಲಿಯೇ ಪ್ರಾಣತ್ಯಾಗ ಮಾಡುತ್ತಿದ್ದರು. ಇಂಥವರ ಉಪಚಾರಕ್ಕೆ ಸರ್ಕಾರದಿಂದ ಬರುತ್ತಿದ್ದ ನೆರವು ಅತ್ಯಲ್ಪವಾಗಿತ್ತು.

**ಆಶಾಕಿರಣದ ಉದಯ :** ಪರಿಸ್ಥಿತಿ ಹೀಗೆ ಹೀನಾಯವಾಗಿರುವಾಗ, ಬಂಗಾಳದಿಂದ ಒಬ್ಬ ಸಾಧಕರು ಬೃಂದಾವನಕ್ಕೆ ಬಂದರು. ಅವರೇ ಮಾನ್ಯ ಬ್ರಹ್ಮಚಾರಿ ಹರೇಂದ್ರನಾಥ. ಇವರು ಸ್ವಾಮಿ ವಿವೇಕಾನಂದರ ದೂರದ ಬಂಧು. ಸ್ವಾಮೀಜಿಯವರು ೧೯೦೨ರಲ್ಲಿ ದೇಹತ್ಯಾಗ ಮಾಡಿದ ಮೇಲೆ, ಅವರ ಆದರ್ಶವಾದ 'ಜೀವರಲ್ಲಿ ದೇವನನ್ನು ಕಾಣು' ಎಂಬ ನುಡಿಯಿಂದ ಹರೇಂದ್ರನಾಥರು ಸ್ಫೂರ್ತಿಗೊಂಡರು. ಬೃಂದಾವನಕ್ಕೆ ಬಂದು ಕಾಲಾಬಾಬುವಿನ ಕುಂಜದಲ್ಲಿ (ಇಲ್ಲಿಯೇ ಶ್ರೀಮಾತೆಯವರು ಒಂದು ವರ್ಷ ತಂಗಿದ್ದರು) ಉಳಿದುಕೊಂಡು ತಮ್ಮ ಅಧ್ಯಾತ್ಮ ಸಾಧನೆಯನ್ನು ಮುಂದುವರೆಸಲು ಇಚ್ಛೆಪಟ್ಟರು. ಸ್ವಾಮಿ ವಿವೇಕಾನಂದರು ಪರಮಾತ್ಮನನ್ನು ಪಡೆಯಲು ಲೋಕದ ಮುಂದೆ ಇಟ್ಟ 'ದರಿದ್ರನಾರಾಯಣ ಸೇವೆ', ಅಂದರೆ ರೋಗಿ ನಾರಾಯಣ, ಹಸಿದ ನಾರಾಯಣ, ಅವಿದ್ಯಾ ನಾರಾಯಣರ ಸೇವೆಗೆ ಬ್ರಹ್ಮಚಾರಿ ಹರೇಂದ್ರನಾಥರ ಹೃದಯ ತುಡಿಯುತ್ತಿತ್ತು. ೧೯೦೬ರಲ್ಲಿ ಹರೇಂದ್ರನಾಥರು ಬೃಂದಾವನಕ್ಕೆ ಬಂದು ಸಾಧನೆಗೆ ತೊಡಗಿದಾಗ, ಅವರ ಸುತ್ತಮುತ್ತ ರೋಗ ರುಜಿನಗಳು, ರಸ್ತೆಯಲ್ಲಿಯೇ ನರಳುತ್ತಿರುವ ರೋಗಿಗಳು ಇರುವುದನ್ನು ಕಂಡು, ಅವರ ಹೃದಯ ಮಿಡಿಯಿತು. ಈ ನತದೃಷ್ಟರಿಗಾಗಿ ಹರೇಂದ್ರನಾಥರು ಹೋಮಿಯೋಪತಿ ಔಷಧವನ್ನು ತಮ್ಮ ಜೊತೆಯಲ್ಲಿ ಇಟ್ಟುಕೊಂಡು ರೋಗಿಗಳ ಸೇವೆ ಮಾಡತೊಡಗಿದರು. ಶೀಘ್ರವೇ ಜನ ಅವರನ್ನು 'ಔಷಧಿ ಬಾಬಾಜಿ' ಎಂದು ಕರೆಯಲಾರಂಭಿಸಿದರು. ಹೀಗೆ ಹರೇಂದ್ರನಾಥರು ಜನಪ್ರಿಯರಾದರು. ಬೃಂದಾವನದ ಸುತ್ತಮುತ್ತಲ ಜನರು ಅವರ ಬಳಿಗೆ ಔಷಧಿಗಾಗಿ ಬರುತ್ತಿದ್ದರು. ಹೀಗೆ ಬ್ರಹ್ಮಚಾರಿ ಹರೇಂದ್ರನಾಥರು ತಮ್ಮ ಆಧ್ಯಾತ್ಮಿಕ ಸಾಧನೆಯ ಜೊತೆಗೆ ದರಿದ್ರನಾರಾಯಣರ ಸೇವೆಯನ್ನೂ ಅಳವಡಿಸಿಕೊಂಡರು.

**ದೈವ ನೀಡಿದ ಸಹಾಯ :** ೧೯೦೫ನೇ ಇಸವಿಯಲ್ಲಿ ಸ್ಥಳೀಯ ಶ್ರೀ ಜ್ಞಾನೇಶ್ವರ ಚಂದ್ರಸೇನ್ ಎಂಬ ದಯಾವಂತ ಬಂಗಾಳಿ ಗೃಹಸ್ಥರು ಹಾಗೂ ಅವರ ಮಗ, ಹರೇಂದ್ರನಾಥರು ಮಾಡುತ್ತಿದ್ದ

ನಿಷ್ಕಾಮ ಸೇವೆಯನ್ನು ನೋಡಿ, ಅವರಿಗೆ ತಮ್ಮ ಕೈಲಾದ ಸಹಾಯವನ್ನು ಮಾಡತೊಡಗಿದರು.



ಕಾಲಾಬಾಬು ಕುಂಜವು ಬಲರಾಮಬೋಸನ ಕುಟುಂಬದವರಿಗೆ ಸೇರಿತ್ತು. ಆ ಕಟ್ಟಡದ ಹೊರ ವಲಯದಲ್ಲಿದ್ದ ಎರಡು ಕೊಠಡಿಗಳನ್ನು ರೋಗಿಗಳ ಸೇವೆಗಾಗಿ, ಬಾಡಿಗೆರಹಿತವಾಗಿ ನೀಡಲು ಆ ಕುಟುಂಬದವರು ಒಪ್ಪಿದರು. ರೋಗಿಗಳ ಸೇವೆಯಲ್ಲಿ ಸಮಮನಸ್ಕರಾದ ಸ್ವಯಂಸೇವಕರು ರೋಗಿಗಳನ್ನು ಚಿಕಿತ್ಸೆಗಾಗಿ ತರುತ್ತಿದ್ದರು. ಒಂದು ಕೊಠಡಿ ಇದಕ್ಕಾಗಿ ಮೀಸಲಾಗಿತ್ತು. ಇನ್ನೊಂದು ಕೊಠಡಿಯಲ್ಲಿ ಔಷಧಿ ವಿತರಣೆಯ ವ್ಯವಸ್ಥೆ ಇತ್ತು. ಹೀಗೆ ಬೃಂದಾವನ ಸೇವಾಶ್ರಮ ಆರಂಭವಾಯಿತು.

೧೯೦೭ರಲ್ಲಿ ಕಲ್ಕತ್ತೆಯ ಜಮೀನುದಾರನೊಬ್ಬನು ಧನ ಸಹಾಯ ಮಾಡಿದನು. ಹರೇಂದ್ರನಾಥ್, ಜ್ಞಾನೇಶ್ವರ ಚಂದ್ರ ಸೇನ್ ಮತ್ತು ಅವರ ಮಗ, ಹಾಗೂ ಇತರರನ್ನು ಒಳಗೊಂಡ ಒಂದು ಕಾರ್ಯಕಾರಿ ಸಮಿತಿ ರಚಿತವಾಯಿತು. ಎಲ್ಲ ಸದಸ್ಯರೂ ರಾಮಕೃಷ್ಣ ಮಿಷನ್ನಿನ ಸೇವಾ ಆದರ್ಶಕ್ಕೆ ಬದ್ಧರಾಗಿದ್ದರು. ಜಮೀನುದಾರನ ಹಣದಿಂದ ಅಲೋಪಥಿ ಔಷಧ ವಿಭಾಗ ತೆರೆದು, ಒಳರೋಗಿಗಳ ಶುಶ್ರೂಷೆಗಾಗಿ ೪ ಹಾಸಿಗೆಗಳನ್ನು ಸಿದ್ಧ ಪಡಿಸಲಾಯಿತು. ಒಂದು ವರ್ಷದಲ್ಲಿ ೨೬ ಒಳರೋಗಿಗಳಿಗೆ, ೨೭೫ ಹೊರರೋಗಿಗಳಿಗೆ ಚಿಕಿತ್ಸೆ ನೀಡಲಾಯಿತು.

**ರಾಮಕೃಷ್ಣ ಮಿಷನ್ನಿಗೆ ಸೇರ್ಪಡೆ :** ಎಷ್ಟೇ ಉತ್ಸಾಹಿತ ಸ್ವಯಂಸೇವಕರಿದ್ದರೂ, ಅವರೆಲ್ಲರ ಪೂರ್ಣ ಸಹಕಾರ ಹಾಗೂ ಬೆಂಬಲವಿದ್ದರೂ, ಅನಿರೀಕ್ಷಿತವಾಗಿ ಅನೇಕ ತೊಂದರೆ ಗಳು ಬರಲಾರಂಭಿಸಿದವು. ಹರೇಂದ್ರನಾಥರಿಗೆ ಸಣ್ಣದಾಗಿ ಪ್ರಾರಂಭವಾದ ಈ ಸೇವಾಯೋಜನೆಯನ್ನು ಬೃಹತ್ತಾಗಿ ಮಾಡಬೇಕೆಂಬ ಕನಸಿತ್ತು; ಅದನ್ನು ಮಾಡಬಲ್ಲೆನೆಂಬ ದೃಢ ನಂಬಿಕೆಯೂ ಇತ್ತು. ಆದ್ದರಿಂದ ರಾಮಕೃಷ್ಣ ಮಿಷನ್ನಿನ ಆಡಳಿತಕ್ಕೆ ಈ ಸೇವಾಶ್ರಮವನ್ನು ಸೇರ್ಪಡೆ ಮಾಡಿದರೆ ಅನೇಕ ರೀತಿಯ ಪ್ರಯೋಜನಗಳಾಗಬಹುದೆಂದು ಅವರು ಯೋಚಿಸಿದರು. ಇದಕ್ಕಾಗಿ ರಾಮಕೃಷ್ಣ ಮಹಾಸಂಘದ ಆಗಿನ ಅಧ್ಯಕ್ಷರಾಗಿದ್ದ ಪರಮಪೂಜ್ಯ ಸ್ವಾಮಿ ಬ್ರಹ್ಮಾನಂದರಿಗೂ, ಕಾರ್ಯದರ್ಶಿಯಾಗಿದ್ದ ಸ್ವಾಮಿ ಶಾರದಾನಂದರಿಗೂ ಈ ಬಗ್ಗೆ ಮನವಿ ಸಲ್ಲಿಸಿದರು. ರಾಮಕೃಷ್ಣ ಮಿಷನ್ನಿನ ಟ್ರಸ್ಟಿಗಳು ಈ ಸಣ್ಣ ಆಸ್ಪತ್ರೆಯು ಸಲ್ಲಿಸುತ್ತಿರುವ ಸೇವೆಯನ್ನೂ, ಅದಕ್ಕೆ ಮುಂದಿರುವ ಭವ್ಯ ಭವಿಷ್ಯವನ್ನೂ, ಜನಸಾಮಾನ್ಯರಿಗೆ ಇದರಿಂದ ಆಗುವ ಪ್ರಯೋಜನವನ್ನೂ ಅರಿತು ಅನುಮತಿ ನೀಡಿದರು. ೧೯೦೮ರ ಜನವರಿ ೧೨ ರಂದು ರಾಮಕೃಷ್ಣ ಮಿಷನ್ನಿನ ಒಂದು ಶಾಖೆ ಯಾಗಿ ಬೃಂದಾವನ ಸೇವಾಶ್ರಮ ಸೇರ್ಪಡೆಯಾಯಿತು. ಬಂಗಾಳದ ಹೊರಗೆ ಇದು ಮೂರನೆಯ ಸೇವಾಶ್ರಮವಾಯಿತು.

ರಾಮಕೃಷ್ಣ ಮಿಷನ್ನಿಗೆ ಸೇರ್ಪಡೆಯಾದ ನಂತರ ಆಸ್ಪತ್ರೆಯ ಕಾರ್ಯದಲ್ಲೂ ಬಹಳಷ್ಟು ಅಭಿವೃದ್ಧಿಯಾಯಿತು. ಚಿಕಿತ್ಸೆ ಪಡೆ ಯುವ ರೋಗಿಗಳ ಸಂಖ್ಯೆಯೂ ಹೆಚ್ಚಾಯಿತು. ಜೊತೆಗೆ ರಾಮ ಕೃಷ್ಣ ಮಠದಿಂದ ಇದಕ್ಕೆ ನಿಯೋಜಿತರಾದ ಹೊಸ ಸಂನ್ಯಾಸಿ ಸೇವಾಕರ್ತರಿಗೆ ಅಗತ್ಯವಾದ ವಸತಿಯ ಪ್ರಶ್ನೆ ಎದ್ದಿತು. ಇದಲ್ಲದೆ ಆಸ್ಪತ್ರೆಯ ವೆಚ್ಚವೂ ಹೆಚ್ಚಾಯಿತು.

೧೯೦೭-೧೯೧೨ ರವರೆಗೆ ಸೇವಾಶ್ರಮದ ಕಾರ್ಯ ಚಟುವಟಿಕೆಗಳ ಬಗ್ಗೆ, ಅಭಿವೃದ್ಧಿಯ ಬಗ್ಗೆ ವಿವರ ನೀಡುವ ಒಂದು ಸಣ್ಣ ಪುಸ್ತಕವು ಸೇವಾಶ್ರಮದಲ್ಲಿದೆ. ಅದರಲ್ಲಿ ಸ್ವಾಮಿ ಬ್ರಹ್ಮಾನಂದರು ನೀಡಿದ ಹಿತವಚನಗಳ ಜೊತೆಗೆ, ಸೇವಾಶ್ರಮದ ಬಗ್ಗೆ ಅವರು ಆಡಿರುವ ಪ್ರಶಂಸೆಯ ಮಾತುಗಳೂ ಇವೆ. ಸ್ವಾಮಿ ಬ್ರಹ್ಮಾನಂದರು ಸೇವಾಶ್ರಮದ ಅಧ್ಯಕ್ಷರೆಂದೂ, ಹರೇಂದ್ರ ನಾಥರು ಗೌರವ ಕಾರ್ಯದರ್ಶಿಗಳೆಂದೂ ಆ ಕಾಲಾವಧಿಯ ವಾರ್ಷಿಕ ವರದಿಗಳಲ್ಲಿ ನಮೂದಿಸಲ್ಪಟ್ಟಿದೆ. ಮುಂದಿನ ವಾರ್ಷಿಕ ವರದಿಗಳಲ್ಲಿ ರಾಮಕೃಷ್ಣ ಮಹಾಸಂಘದ ಆಗಿನ ಅಧ್ಯಕ್ಷರು ಗಳಾದ ಸ್ವಾಮಿ ಬ್ರಹ್ಮಾನಂದ, ಸ್ವಾಮಿ ಶಿವಾನಂದ, ಸ್ವಾಮಿ ಅಖಂಡಾನಂದ, ಸ್ವಾಮಿ ವಿಜ್ಞಾನಾನಂದ, ಸ್ವಾಮಿ ಶುದ್ಧಾನಂದ ಮತ್ತು ಸ್ವಾಮಿ ವಿರಜಾನಂದರ ಹೆಸರಿನಲ್ಲಿ ಧನಸಹಾಯಕ್ಕಾಗಿ ಮಾಡಿದ ಮನವಿಗಳಿವೆ.

ಈ ಅವಧಿಯಲ್ಲಿ ಸೇವಾಶ್ರಮದ ಆರ್ಥಿಕ ಸ್ಥಿತಿಯು ಅಷ್ಟೇನೂ ತೃಪ್ತಿಕರವಾಗಿರಲಿಲ್ಲ. ಆದರೆ ರೋಗಿಗಳ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿತ್ತು. ಕಾಲಾಬಾಬು ಕುಂಜದಲ್ಲಿ ಸ್ಥಳದ ಅಭಾವವಿದ್ದುದರಿಂದ, ಅಗತ್ಯವಿರುವ ಎಲ್ಲ ರೋಗಿಗಳನ್ನೂ ಒಳರೋಗಿಗಳನ್ನಾಗಿ ತೆಗೆದುಕೊಳ್ಳಲು ಆಗುತ್ತಿರಲಿಲ್ಲ. ಅಲ್ಲದೇ ಸಿಬ್ಬಂದಿ ವರ್ಗದವರಿಗೆ ವಿಶ್ರಾಂತಿ ತೆಗೆದುಕೊಳ್ಳಲು ಬೇರೆ ಸ್ಥಳ ಇರಲಿಲ್ಲ.

**ಹೊಸ ಜಾಗ ಪಾನಿಘಾಟ್‌ನಲ್ಲಿ ಸೇವಾಶ್ರಮ:** ದಿವ್ಯತ್ರಯರ ಕೃಪೆ ಯಿಂದಲೂ, ಪ್ರೇರಣೆಯಿಂದಲೂ, ಬ್ರಹ್ಮಚಾರಿ ಹರೇಂದ್ರನಾಥರು ಬೃಂದಾವನಕ್ಕೆ ಆಗಮಿಸಿದ್ದು ಹಾಗೂ ಸೇವಾಶ್ರಮವು ಜನ್ಮ ತಾಳಿದ್ದು ಸರಿಯಷ್ಟೇ. ಅದೇ ಕೃಪಾಪ್ರವಾಹವೇ ಸೇವಾಶ್ರಮವು ಹೊಸಜಾಗಕ್ಕೆ ಸ್ಥಳಾಂತರಗೊಳ್ಳಲು ಕಾರಣವಾಯಿತು. ಸೇವಾ ಶ್ರಮದ ಶ್ರದ್ಧಾಪೂರ್ವಕ ಸೇವೆಯು ಕೆಲವು ಧನಿಕರನ್ನು ಆಕರ್ಷಿಸಿ ಅವರ ನೆರವಿನಿಂದ ಮತ್ತು ಸ್ವಾಮಿ ಬ್ರಹ್ಮಾನಂದರ ಮಾರ್ಗದರ್ಶನದಿಂದ ಸೇವಾಶ್ರಮವು ಯಮುನಾ ನದಿ ತೀರದಲ್ಲಿ, ಪಾನಿಘಾಟ್‌ನ ಹತ್ತಿರ ೮.೩೨ ಎಕರೆ ಜಾಗವನ್ನು ೨೨. ೮. ೧೯೧೫ರಂದು ಖರೀದಿಸಿತು. ಪುರುಷರಿಗೆ ಮತ್ತು

ಮಹಿಳೆಯರಿಗೆ ಎರಡೆರಡು ಪ್ರತ್ಯೇಕ ವಾರ್ಡ್‌ಗಳನ್ನು ಹುಲ್ಲು ಛಾವಣಿ ಹೊಂದಿಸಿ ನಿರ್ಮಿಸಲಾಯಿತು. ಆದರೆ ಸೇವಾಶ್ರಮದ ಸಿಬ್ಬಂದಿಗೆ ಯಾವ ವಸತಿ ಸೌಕರ್ಯವೂ ಇರಲಿಲ್ಲ. ಅವರೆಲ್ಲರೂ ಒಂದು ಸಣ್ಣ ಗುಡಿಸಿಲಿನಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಆರ್ಥಿಕ ಮುಗ್ಗಟ್ಟೇ ಇದಕ್ಕೆ ಮುಖ್ಯ ಕಾರಣವಾಗಿತ್ತು.

ಅವಿಶ್ರಾಂತ ದುಡಿಮೆಯಿಂದಾಗಿ (೧೯೦೩-೧೯೨೦ ರವರೆಗೆ), ಬ್ರಹ್ಮಚಾರಿ ಹರೇಂದ್ರನಾಥ ಮಹಾರಾಜರ ಆರೋಗ್ಯ ಹದಗೆಟ್ಟಿತು. ಅವರು ಕಾರ್ಯದರ್ಶಿ ಹುದ್ದೆಯಿಂದ ನಿವೃತ್ತರಾಗಿ, ೧೯೨೪ರಲ್ಲಿ ಇಹಲೋಕವನ್ನು ತ್ಯಜಿಸಿದರು.

ಅವರ ಸ್ಥಾನವನ್ನು ತುಂಬಿದವರು ಸ್ವಾಮಿ ವೇದಾನಂದರು. ಸೇವಾಶ್ರಮವು ಅವರ ನೇತೃತ್ವದಲ್ಲಿ ಬಹಳಷ್ಟು ಅಭಿವೃದ್ಧಿ ಹೊಂದಿತು. 'ಸಂಚಾರಿ ಚಿಕಿತ್ಸಾ ಘಟಕ' ಆರಂಭವಾಯಿತು. ಮನೆಮನೆಗೆ ಹೋಗಿ ಚಿಕಿತ್ಸೆ ಒದಗಿಸುವ ಕಾರ್ಯ ಏರ್ಪಾಡಾಯಿತು. ಆದರೆ ಆರ್ಥಿಕ ಸ್ಥಿತಿಯಲ್ಲಿ ಏನೂ ಸುಧಾರಣೆ ಕಂಡುಬರಲಿಲ್ಲ. ಸೇವಾಶ್ರಮದ ಉಳಿವಿಗೆ ಸಂನ್ಯಾಸಿಗಳ, ಬ್ರಹ್ಮಚಾರಿಗಳ ನಿರಂತರ, ನಿಷ್ಕಾಮಸೇವೆಯೇ ಅತ್ಯಮೂಲ್ಯ ಕೊಡುಗೆಯಾಗಿತ್ತು. ಆ ನಿಸ್ವಾರ್ಥ ದುಡಿಮೆಯೇ ಈಗ ಸೇವಾಶ್ರಮ ಕಂಡಿರುವ ಅಭಿವೃದ್ಧಿಗೆ ಕಾರಣ. ಕ್ರಮೇಣ ಆಶ್ರಮದ ಚಟುವಟಿಕೆಗಳು ಹೆಚ್ಚಾಗುತ್ತಾ ಬಂದವು. ೧೯೨೪ರಲ್ಲಿ ವೇದಾನಂದಜಿಯವರ ಆರೋಗ್ಯ ತೀವ್ರ ಹದಗೆಟ್ಟು ಆ ವರ್ಷವೇ ಅವರು ದೈವಾಧೀನರಾದರು. ಆ ವರ್ಷದ ಇನ್ನೊಂದು ದುರಂತವೆಂದರೆ ಯಮುನಾ ನದಿಯಲ್ಲಿ ಪ್ರಚಂಡ ಪ್ರವಾಹವು ಬಂದು ಸೇವಾಶ್ರಮದ ಸಲಕರಣೆಗಳನ್ನೂ ಕಟ್ಟಡಗಳನ್ನೂ ಕೊಚ್ಚಿಹಾಕಿದ್ದು.

೧೯೨೫ ರಲ್ಲಿ ಸ್ವಾಮಿ ಭುವನೇಶ್ವರಾನಂದಜಿಯವರು ಸೇವಾಶ್ರಮದ ಕಾರ್ಯದರ್ಶಿಗಳಾದರು. ಯಾತ್ರಿಕರ ಸಂಖ್ಯೆ ಹಬ್ಬಹರಿದಿನಗಳಲ್ಲಿ ಹೆಚ್ಚಾದಂತೆ, ಸಾಂಕ್ರಾಮಿಕ ರೋಗಗಳೂ ಹೆಚ್ಚುತ್ತಿದ್ದವು. ಸಾಂಕ್ರಾಮಿಕ ರೋಗಗಳಿಗೆ ಪ್ರತ್ಯೇಕ ವಾರ್ಡ್ ಇರಬೇಕೆಂದು ನಿರ್ಧಾರವಾದರೂ, ಅದನ್ನು ನಿರ್ಮಿಸಲು ಆರ್ಥಿಕ ಪರಿಸ್ಥಿತಿ ಅಡ್ಡ ಬಂದಿತು. ಸರ್ಕಾರದ ನೆರವೂ ಅತ್ಯಲ್ಪವಾಗಿತ್ತು. ಹೀಗಾಗಿ ಆ ನಿರ್ಧಾರ ನೆನೆಗುದಿಗೆ ಬಿತ್ತು. ೧೯೨೬ರಲ್ಲಿ ಸ್ವಾಮಿ ಗಿರಿಜಾನಂದರು ಕಾರ್ಯದರ್ಶಿಗಳಾದರು. ೧೯೨೮ರಲ್ಲಿ ಸಾಂಕ್ರಾಮಿಕ ರೋಗಿಗಳಿಗೆ ವಿಶೇಷ ವಾರ್ಡ್ ನಿರ್ಮಿಸಲಾಯಿತು. ೧೯೨೯ರಲ್ಲಿ ಕ್ಷಯರೋಗಿಗಳಾಗಿ ಪ್ರತ್ಯೇಕ ವಾರ್ಡ್ ನಿರ್ಮಿಸಲಾಯಿತು. ಮಹಾತ್ಮ ಗಾಂಧಿಯವರು ಅದನ್ನು ಉದ್ಘಾಟಿಸಿದರು. ಅವರು ಗಣ್ಯ ವ್ಯಕ್ತಿಗಳ ಭೇಟಿಯ ಪುಸ್ತಕದಲ್ಲಿ "I have seen this institution before and I want its success" (ನಾನು ಹಿಂದೆ ಈ ಸಂಸ್ಥೆಗೆ ಬಂದಿದ್ದೆ. ನಾನು ಅದರ ಶ್ರೇಯೋಭಿವೃದ್ಧಿಯನ್ನು ಬಯಸುತ್ತೇನೆ) ಎಂದು ಬರೆದಿದ್ದಾರೆ. ಅವರು ಭೇಟಿ ನೀಡಿದ ತಾರೀಖು ೮-೧೨-೧೯೨೯. ಸ್ವಾಮಿ ಗಿರಿಜಾನಂದರು ನಿವೃತ್ತಿಯಾದ ಮೇಲೆ ೧೯೨೯ರಲ್ಲಿ ಸ್ವಾಮಿ ಸಹಜಾನಂದರು ಕಾರ್ಯದರ್ಶಿಗಳಾದರು. ೧೯೩೧ರಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ವಾರ್ಡ್ ನಿರ್ಮಿಸಲಾಯಿತು. ೧೯೦೮ರಲ್ಲಿ ರಾಮಕೃಷ್ಣ ಮಿಷನ್ ಸೇವಾಶ್ರಮವನ್ನು ತನ್ನ ಕೈಗೆ ತೆಗೆದುಕೊಂಡಾಗ, ಶ್ರೀರಾಮಕೃಷ್ಣರಿಗಾಗಿ ಒಂದು ಸಣ್ಣ ಗುಡಿಯನ್ನು ಕಟ್ಟಲಾಯಿತು. ಇದೇ ರಾಮಕೃಷ್ಣರ ಬೃಹತ್ ಮಂದಿರಕ್ಕೆ ಬೀಜಪ್ರಾಯವಾಯಿತು. ಈ ಸಣ್ಣ ಮಂದಿರವು ಯಮುನಾತೀರದಲ್ಲಿ ಇನ್ನೂ ಇದೆ.

ನೂರಾರು ಗ್ರಾಮಸ್ಥರು ಹೊರರೋಗಿಗಳಾಗಿ ಚಿಕಿತ್ಸೆಗಾಗಿ ದೂರದೂರದಿಂದ ಬರುತ್ತಿದ್ದರು. ಸದ್ಯ ಲಭ್ಯವಿದ್ದ ಜಾಗ ಸಾಲುತ್ತಿರಲಿಲ್ಲ. ಹೀಗಾಗಿ ಉಚಿತ ಔಷಧಾಲಯವನ್ನು ೧೯೪೩ರಲ್ಲಿ ವಿಶಾಲವಾದ ಕಟ್ಟಡಕ್ಕೆ ವರ್ಗಾಯಿಸಲಾಯಿತು.

ನೇತಾಜಿ ಸುಭಾಷ್‌ಚಂದ್ರ ಬೋಸರು ೪-೩-೧೯೪೦ರಂದು ಸೇವಾಶ್ರಮಕ್ಕೆ ಭೇಟಿಯಿತ್ತರು. ಅವರು ಗಣ್ಯರ ಭೇಟಿ ಪುಸ್ತಕದಲ್ಲಿ ಬರೆದಿರುವ ಸಾಲುಗಳು ಚಿರಸ್ಮರಣೀಯವಾಗಿವೆ.

ಸ್ವಾಮಿ ಸಹಜಾನಂದರು ದೇಹ ಬಿಟ್ಟ ಮೇಲೆ ಸ್ವಾಮಿ ಸ್ವಯಂಪ್ರಭಾನಂದರು ಕಾರ್ಯದರ್ಶಿಗಳಾದರು. ಇವರ ಕಾಲದಲ್ಲಿ ೧೯೪೩ರಲ್ಲಿ ಇಬ್ಬರು ಶ್ರೀಮಂತ ದಾನಿಗಳ ನೆರವಿನಿಂದ, ನೇತ್ರ ಚಿಕಿತ್ಸಾ ಘಟಕವನ್ನು ತೆರೆಯಲಾಯಿತು.

ಸ್ವಾಮಿ ಹಿರಣ್ಮಯಾನಂದರು ೧೯೪೬ರಲ್ಲಿ ಕಾರ್ಯದರ್ಶಿಗಳಾಗಿ ಅಧಿಕಾರ ವಹಿಸಿಕೊಂಡರು. ಚಿಂತನಾಶೀಲರಾದ ಇವರು ಹೊಸ ಹೊಸ ಯೋಜನೆಗಳನ್ನು ರೂಪಿಸಿದರು. ೧೯೪೭ರಲ್ಲಿ ವೈಜ್ಞಾನಿಕ ಪರೀಕ್ಷಾ ಕೇಂದ್ರ (ಕ್ಲಿನಿಕಲ್ ಲ್ಯಾಬೊರೇಟರಿ) ಅಸ್ತಿತ್ವಕ್ಕೆ ಬಂದಿತು. ಪದೇ ಪದೇ ಬರುವ ಪ್ರವಾಹಭೀತಿಯಿಂದ ತಪ್ಪಿಸಿಕೊಳ್ಳಲು ಎತ್ತರ ಪ್ರದೇಶಕ್ಕೆ ಸೇವಾಶ್ರಮವನ್ನು ವರ್ಗಾಯಿಸಲು ನಿರ್ಧಾರ ತೆಗೆದುಕೊಳ್ಳಲಾಯಿತು. ೧೯೪೮ರಲ್ಲಿ ಸ್ವಾಮಿ ಹಿರಣ್ಮಯಾನಂದರ ಜಾಗಕ್ಕೆ ಸ್ವಾಮಿ ಪ್ರಜ್ಞಾನಂದರು ಬಂದರು. ಇವರು ಶಾರದಾ ಮಾತೆಯವರ ಶಿಷ್ಯರು. ಹರಿದ್ವಾರದ ಸೇವಾಶ್ರಮದಲ್ಲಿ ಸೇವೆ ಸಲ್ಲಿಸಿದ್ದರು. ಈ ಸಮಯದಲ್ಲಿಯೇ ಹೊಸಜಾಗಕ್ಕೆ ಹುಡುಕಾಟ ಆರಂಭವಾಗಿತ್ತು. ಮಥುರಾ ಬೃಂದಾವನ ರಸ್ತೆಯಲ್ಲಿ ಸೂಕ್ತ ಸ್ಥಳ ದೊರಕಿತು. ಇದು ಎಲ್ಲ ರೀತಿಯಲ್ಲಿಯೂ ಅನುಕೂಲವಾಗಿತ್ತು. ಉತ್ತರಪ್ರದೇಶದ ಸರ್ಕಾರದ ಸಹಾಯಕ್ಕಾಗಿ ವಿನಂತಿಸಲಾಯಿತು. ಸ್ವಾಮಿ ಪ್ರಜ್ಞಾನಂದರ ಶ್ರದ್ಧಾಪೂರಿತ ಪ್ರಯತ್ನವು ದಿವ್ಯತ್ರಯರ ಕೃಪೆಯಿಂದ ಫಲ ನೀಡಿತು. ೧೯೫೧ರಿಂದ ಉತ್ತರಪ್ರದೇಶ ಸರ್ಕಾರವು ದೀರ್ಘಕಾಲದ ಗುತ್ತಿಗೆಯ ಆಧಾರದ ಮೇಲೆ ೨೨.೭೬ ಎಕರೆ ಭೂಮಿಯನ್ನು ನೀಡಿತು. ಈ ಭೂಮಿಯಲ್ಲಿ ಅತ್ಯಾಧುನಿಕ ಸುಸಜ್ಜಿತ ಆಸ್ಪತ್ರೆಯನ್ನು ನಿರ್ಮಿಸಲು ಯೋಜನೆ ರೂಪುಗೊಂಡಿತ್ತಾದರೂ, ಇದು ಕಾರ್ಯಗತವಾಗಲು ಒಂದು ದಶಕವೇ ಬೇಕಾಯಿತು. ಇದಕ್ಕೆ ಮುಖ್ಯವಾಗಿ ಹಣಕಾಸಿನ ಅಡಚಣೆಯೇ ಕಾರಣವಾಗಿತ್ತು.

೧೯೫೦ರಲ್ಲಿ ಬೃಂದಾವನದಲ್ಲಿ ಮೇಳ ನಡೆಯಿತು. ಸೇವಾಶ್ರಮವು ಯಮುನಾನದಿ ತೀರದಲ್ಲಿ ಶಿಬಿರಗಳಿಗೆ ಅನೇಕ ಹಾಸಿಗೆಗಳನ್ನು ಒದಗಿಸಿದುದಲ್ಲದೇ, ಅನಾರೋಗ್ಯ ಪೀಡಿತ ಯಾತ್ರಿಕರಿಗೆ ಸಾಧಾರಣ ಚಿಕಿತ್ಸೆ ಒದಗಿಸಿತು. ೧೯೫೧ರಲ್ಲಿ ಕಣ್ಣು ಚಿಕಿತ್ಸಾ ವಿಭಾಗವನ್ನು ವಿಸ್ತರಿಸಲಾಯಿತು. ಹೊಸ ಚಿಕಿತ್ಸೆಗಳಾದ

ಕಣ್ಣು ಗುಡ್ಡೆಯ ಪಾರದರ್ಶಕ ಭಾಗ ಬದಲಾವಣೆ ಮತ್ತು ಪ್ಲಾಸ್ಟಿಕ್ ಲೆನ್ಸ್‌ನ ಅಳವಡಿಕೆಗಳನ್ನು ಯಶಸ್ವಿಯಾಗಿ ಸೇರಿಸಲಾಯಿತು. ಉತ್ತರಪ್ರದೇಶದ ದೂರದ ಊರುಗಳಿಂದ ಜನರು ಚಿಕಿತ್ಸೆಗಾಗಿ ಬರಲಾರಂಭಿಸಿದರು. ಈ ಹೆಚ್ಚಿನ ಹೊಣೆಯನ್ನು, ಶ್ರೀರಾಮಕೃಷ್ಣರ ಬೋಧನೆಯಾದ 'ಶಿವಜ್ಞಾನೇ ಜೀವಸೇವಾ' – ಈ ಸಂದೇಶದಿಂದ ಸ್ಫೂರ್ತಿ ಪಡೆದ ರಾಮಕೃಷ್ಣರ ಸಂಘದ ಸಂನ್ಯಾಸಿಗಳು, ಬ್ರಹ್ಮಚಾರಿಗಳು ಯಶಸ್ವಿಯಾಗಿ ನಿರ್ವಹಿಸಿದರು. ೧೯೫೪ರಲ್ಲಿ ದಂತ ಚಿಕಿತ್ಸಾ ವಿಭಾಗವನ್ನು ತೆರೆಯಲಾಯಿತು. ಈ ಎಲ್ಲಾ ಕಾರಣಗಳಿಂದ ಕೂಡ, ಹೊಸ ಆಸ್ಪತ್ರೆಯ ನಿರ್ಮಾಣ ಬಹಳ ತಡವಾಯಿತು.

**ಸೇವಾಶ್ರಮದ ಈಗಿನ ಸ್ಥಳವಾದ ಸ್ವಾಮಿ ವಿವೇಕಾನಂದ ರಸ್ತೆ, ಬೃಂದಾವನಕ್ಕೆ ಸ್ಥಳಾಂತರ:** ೧೯೫೪ರಲ್ಲಿ ಕಾರ್ಯದರ್ಶಿಗಳಾಗಿ ಅಧಿಕಾರ ವಹಿಸಿಕೊಂಡ ಸ್ವಾಮಿ ಕೃಪಾನಂದರ ಪರಿಶ್ರಮ ಫಲ ನೀಡಿತು. ಅವರ ನೆರವಿಗೆ ಅನೇಕ ಸ್ವಾಮಿಗಳ ತಂಡವೇ ಬೃಂದಾವನಕ್ಕೆ ಬಂದಿಳಿಯಿತು. ಎಲ್ಲರ ಸಹಕಾರ, ಅವಿರತ ಶ್ರಮ, ಶ್ರದ್ಧೆಗಳಿಂದ ಸೇವಾಶ್ರಮ ಅದ್ಭುತ ಪ್ರಗತಿ ಸಾಧಿಸಿತು. ಹೊಸಜಾಗದಲ್ಲಿ ಆಸ್ಪತ್ರೆಯ ನಿರ್ಮಾಣಕ್ಕೆ ಹಣದ ಅಡಚಣೆಯಿದ್ದುದು ಸರಿಯಷ್ಟೇ. ಆದರೆ ದಿವ್ಯತ್ರಯರ ಕೃಪೆಯಿಂದ ಹಂತಹಂತವಾಗಿ ಆರ್ಥಿಕ ಸಹಾಯ ದೊರೆತು ಆಸ್ಪತ್ರೆಯ ನಿರ್ಮಾಣವಾಯಿತು. ಉತ್ತರ ಪ್ರದೇಶದ ಅಂದಿನ ರಾಜ್ಯಪಾಲರಾಗಿದ್ದ ಶ್ರೀ ವಿ. ವಿ. ಗಿರಿಯವರು ೧೯೫೭ರಲ್ಲಿ ಇದರ ಶಂಕುಸ್ಥಾಪನೆ ನೆರವೇರಿಸಿದರು. ೧೦೦ ಹಾಸಿಗೆಗಳುಳ್ಳ ಆಸ್ಪತ್ರೆಯ ನಿರ್ಮಾಣ ೧೯೬೨ರಲ್ಲಿ ಪೂರ್ಣವಾಯಿತು. ೨೬–೨–೧೯೬೨ ರಂದು ಹೊರರೋಗಿಗಳ ಮತ್ತು ಒಳರೋಗಿಗಳ ವಿಭಾಗ ಆರಂಭಗೊಂಡಿತು. ಗೋಶಾಲೆಯು ಸ್ವಾಮಿ ಶಾರದೇಶಾನಂದರಿಂದ ಉದ್ಘಾಟಿಸಲ್ಪಟ್ಟಿತು. ಪ್ರಧಾನ ಮಂತ್ರಿಗಳಾಗಿದ್ದ ಪಂಡಿತ್ ಜವಹರ್‌ಲಾಲ್ ನೆಹರೂ ೮–೧೨–೧೯೬೩ ರಂದು ವಿಧ್ಯುಕ್ತವಾಗಿ ನವೀನ ಆಸ್ಪತ್ರೆಯನ್ನು ಲೋಕಾರ್ಪಣೆ ಮಾಡಿದರು. ಕಾಲಕಳೆದಂತೆ ಹೊಸ ಕಟ್ಟಡಗಳು, ಹೊಸ ವಿಭಾಗಗಳು ಆಸ್ಪತ್ರೆಗೆ ಸೇರ್ಪಡೆಯಾಗುತ್ತಲೇ ಇವೆ.

ಹೊಸ ಕ್ಯಾನ್ಸರ್ ವಾರ್ಡ್ ಅನ್ನು ಕಟ್ಟಲಾಯಿತು. ೨೧ ವರ್ಷಗಳ ಕಾಲ ಸೇವಾಶ್ರಮವನ್ನು ಮುನ್ನಡೆಸಿದ ಸ್ವಾಮಿ ಕೃಪಾನಂದರು ೧೩–೧೨–೧೯೯೯ರಂದು ದೇಹತ್ಯಾಗ ಮಾಡಿದರು. ನಂತರ ಸ್ವಾಮಿ ಭಕ್ತಾನಂದರು ೧೯೭೦ರಿಂದ ೧೯೭೨ರವರೆಗೆ ಕಾರ್ಯದರ್ಶಿಗಳಾಗಿದ್ದರು. ನಂತರ ಸ್ವಾಮಿ ತ್ರಿವಿಕ್ರಮಾನಂದರು ೧೯೭೨ರಲ್ಲಿ ಕಾರ್ಯದರ್ಶಿಗಳಾಗಿ ಅಧಿಕಾರ ವಹಿಸಿಕೊಂಡರು. ಅವರು ಸುಮಾರು ೨೮ ವರ್ಷಗಳ ಕಾಲ ಸೇವಾಶ್ರಮದ ನೇತಾರರಾಗಿ ಅನನ್ಯವಾದ ಪ್ರಗತಿ ಸಾಧಿಸಿ, ೨೦೦೦ನೇ ಇಸವಿಯಲ್ಲಿ ನಿವೃತ್ತಿ ಪಡೆದುಕೊಂಡರು. ಅವರ ಕಾಲದಲ್ಲಿ ಪ್ರಸಿದ್ಧ ವೈದ್ಯರು ಸೇವಾಶ್ರಮವನ್ನು ಸೇರಿದರು. ವೈದ್ಯರಿಗಾಗಿ, ನರ್ಸ್‌ಗಳಿಗಾಗಿ, ಸಿಬ್ಬಂದಿಗಳಿಗಾಗಿ ವಸತಿಗಳನ್ನು ನಿರ್ಮಿಸಲಾಯಿತು. ನರ್ಸಿಂಗ್ ಸ್ಕೂಲ್, ಹೆರಿಗೆಯ ವಿಭಾಗ, ಕಿವಿ ಮೂಗು ವಿಭಾಗ – ಇವೆಲ್ಲವೂ ಆರಂಭವಾಯಿತು. ನಂತರ ಬಂದ ಸ್ವಾಮಿ ಪ್ರಕಾಶಾನಂದರು ಆಯುರ್ವೇದ ಚಿಕಿತ್ಸೆ ಘಟಕವನ್ನು ಆರಂಭಿಸಿದರು. ಆಯುರ್ವೇದ ಮೂಲಿಕೆಗಳಿಗಾಗಿ ಪಾನಿಘಾಟ್‌ನಲ್ಲಿ ೫–೬ ಎಕರೆಗಳಲ್ಲಿ ಸಸ್ಯತೋಟವನ್ನು ನಿರ್ಮಿಸಿದರು. ಬಟ್ಟೆಗಳನ್ನು ಶುಚಿಗೊಳಿಸಲು ಸ್ವಯಂಚಾಲಿತ ಯಂತ್ರಗಳನ್ನು ಖರೀದಿಸಲಾಯಿತು. ರೋಗಿಗಳಿಗೆ ಹಾಲನ್ನು ನೀಡಲು ಮೊದಲು ಇದ್ದ ಗೋಶಾಲೆಯನ್ನು ಮತ್ತಷ್ಟು ನವೀಕರಿಸಲಾಯಿತು. ಸೇವಾಶ್ರಮ ಆಸ್ಪತ್ರೆಯ ಹಾಸಿಗೆಗಳ ಸೌಲಭ್ಯದ ವಿವರ ಹೀಗಿದೆ :

**ಸಾಮಾನ್ಯ ವಾರ್ಡ್ ೧೩೯:** ಪುರುಷರು–**೪೬,** ಮಹಿಳೆಯರು–**೩೮,** ಮಕ್ಕಳು–**೧೮,** ಮೆಟರ್ನಿಟಿ–**೨೩,** ಕಣ್ಣು–**೧೩,** ತುರ್ತುಚಿಕಿತ್ಸೆ–**೧ :**

**ಖಾಸಗಿ ವಾರ್ಡ್–೨೧, ಐಸಿಯು– ೫: ಒಟ್ಟು = ೧೬೫**

ಸೇವಾಶ್ರಮವನ್ನು ಬರಿಗೈಯಿಂದ ಆರಂಭ ಮಾಡಿ ಹಿಮಾಲಯದಷ್ಟು ಬೆಳೆಸಿರುವ, ಅದಕ್ಕೆ ಕಾರಣರಾದ ಮಹನೀಯರೆಲ್ಲರೂ ಸ್ತುತ್ಯರು.

**ಪಲ್ಲಿ ಮಂಗಲ್‌ಸೇವಾ (ಗ್ರಾಮಾಭಿವೃದ್ಧಿ ಯೋಜನೆ):** ೧೯೮೨ರಲ್ಲಿ ಉತ್ತರ ಪ್ರದೇಶದ ಸರ್ಕಾರದ ಅನುದಾನದಿಂದ, ಈ ಮೊದಲೇ ಇದ್ದ Mobile ಚಿಕಿತ್ಸಾ ಘಟಕವನ್ನು ನವೀಕರಿಸಲಾಯಿತು. ಆಧುನಿಕ ಯಂತ್ರಗಳನ್ನು ಅಳವಡಿಸಿ ರೋಗ ಪತ್ತೆ ಹಚ್ಚುವ ಕಾರ್ಯ ಆರಂಭವಾಯಿತು. ಈ ವಾಹನದ ಜೊತೆ ಡಾಕ್ಟರುಗಳು, ಸರ್ಜನ್‌ಗಳು, ನರ್ಸ್‌ಗಳು, ಕಣ್ಣಿನ, ಹಲ್ಲಿನ ಡಾಕ್ಟರ್‌ಗಳು ಹೋಗಿ ಗ್ರಾಮೀಣ ಜನರಿಗೆ ಉಚಿತ ಸೇವೆ ಸಲ್ಲಿಸುತ್ತಿದ್ದಾರೆ. ರೋಗಿ ಗಂಭೀರ ಸ್ಥಿತಿಯಲ್ಲಿದ್ದರೆ ಬೃಂದಾವನದ ಸೇವಾಶ್ರಮಕ್ಕೆ ಕಳುಹಿಸಲಾಗುತ್ತದೆ; ಕಾಲಕಾಲಕ್ಕೆ ಶಿಬಿರಗಳು ಏರ್ಪಾಡಾಗುತ್ತವೆ. ಆರೋಗ್ಯದ ಬಗ್ಗೆ ಮಾಹಿತಿ ನೀಡುವುದಲ್ಲದೇ, ಅನಕ್ಷರಸ್ಥರಿಗೆ ಅಕ್ಷರಜ್ಞಾನವನ್ನೂ ನೀಡಲಾಗುತ್ತದೆ. ಟೈಲರಿಂಗ್, ಎಂಬ್ರಾಯಿಡರಿ ತರಬೇತಿ ಕೂಡ ನೀಡಲಾಗುತ್ತದೆ. ಮುಖ್ಯವಾಗಿ ಆರ್ಥಿಕ ಸ್ವಾವಲಂಬನೆಗೆ ಇಲ್ಲಿ ಪ್ರಾಮುಖ್ಯತೆ ನೀಡಲಾಗುತ್ತಿದೆ.

**ರಾಮಕೃಷ್ಣ ಮಠ ಮತ್ತು ರಾಮಕೃಷ್ಣ ಮಂದಿರ:** ೧೯೦೮ರಲ್ಲಿ ರಾಮಕೃಷ್ಣ ಮಿಷನ್ನಿನ ಶಾಖೆಯಾಗಿ ಬೃಂದಾವನ ಸೇವಾಶ್ರಮ ಸೇರ್ಪಡೆಯಾಯಿತು. ೧೯೬೫ರಲ್ಲಿ ರಾಮಕೃಷ್ಣ ಮಠದ ಶಾಖೆಯೊಂದು ಬೃಂದಾವನದಲ್ಲಿ ಆರಂಭವಾಯಿತು. ಅನೇಕ ಹಿರಿಯ ಸಾಧುಗಳು ಕಾಲಕಾಲಕ್ಕೆ ಇಲ್ಲಿಗೆ ಬಂದು ಮಾರ್ಗದರ್ಶನ ಮಾಡುತ್ತಿದ್ದಾರೆ. ೧೯೭೩ರಲ್ಲಿ ರಾಮಕೃಷ್ಣರಿಗಾಗಿ ಅರ್ಪಿತವಾದ ಹೊಸ ಮಂದಿರವನ್ನು ಲೋಕಾರ್ಪಣೆ ಮಾಡಲಾಯಿತು. ೧೯೭೧ರಲ್ಲಿ ಶ್ರೀಮತಿ ಎಂ. ಎಸ್. ಸುಬ್ಬಲಕ್ಷ್ಮಿಯವರು ಮುಂಬೈನಲ್ಲಿ ಭಜನೆ ಕಾರ್ಯಕ್ರಮ ನಡೆಸಿ, ಬಂದ ೨,೪೦,೦೦೦/– ರೂಪಾಯಿಗಳನ್ನು ದೇಣಿಗೆಯಾಗಿ ಈ ಮಂದಿರದ ನಿರ್ಮಾಣಕ್ಕೆ ನೀಡಿದರು. ಇತರ ಎಲ್ಲಾ ರಾಮಕೃಷ್ಣ ಮಠಗಳಂತೆ ಇಲ್ಲಿಯೂ ದೈನಂದಿನ ಪೂಜೆ, ಆರತಿ, ದಿವ್ಯತ್ರಯರ ಜಯಂತಿ, ಶಿವರಾತ್ರಿ, ಕಾಳಿಪೂಜೆ, ದುರ್ಗಾ ಪೂಜೆಗಳು, ಶ್ರೀಕೃಷ್ಣಜನ್ಮಾಷ್ಟಮಿ ಉತ್ಸವ ನಡೆಯುತ್ತಿವೆ.

**ಹಿನ್ನುಡಿ:** ಕಳೆದ ೧೦೬ ವರ್ಷಗಳಲ್ಲಿ ಸೇವಾಶ್ರಮವು ಅನೇಕ ಕಷ್ಟಗಳನ್ನು, ಆತಂಕಗಳನ್ನು ಎದುರಿಸಬೇಕಾಯಿತು. ಬ್ರಹ್ಮಚಾರಿ ಹರೇಂದ್ರನಾಥರಿಂದ ಹಿಡಿದು ಇದುವರೆಗೆ ಸೇವೆ ಸಲ್ಲಿಸಿದ ಎಲ್ಲ ಸಾಧುಗಳು, ಸಂತರು, ಬ್ರಹ್ಮಚಾರಿಗಳು ಅಭಿನಂದನೆಗೆ ಅರ್ಹರು. ಇವರೆಲ್ಲರ ತ್ಯಾಗ, ಸೇವೆ, ಶ್ರದ್ಧೆಗಳೇ ಸೇವಾಶ್ರಮದ ಅಭೂತಪೂರ್ವ ಬೆಳವಣಿಗೆಗೆ ಕಾರಣವಾಗಿದೆ.

ಬೃಂದಾವನವು ಶ್ರೀಕೃಷ್ಣ ರಾಧೆಯರ ಲೀಲಾ ಸ್ಥಳ. ಅಗೋಚರವಾಗಿ ಕೃಷ್ಣಲೀಲೆಯು ಇನ್ನೂ ನಡೆಯುತ್ತಿದೆಯೆಂದು ಭಕ್ತಾದಿಗಳ ನಂಬಿಕೆ. ಶ್ರೀಚೈತನ್ಯ ಪ್ರಭುವಿನ ಭೇಟಿ (೧೫೧೪), ಶ್ರೀರಾಮಕೃಷ್ಣರ ಬೃಂದಾವನ ದರ್ಶನ (೧೮೬೮), ಶಾರದಾದೇವಿಯವರ ಕ್ಷೇತ್ರವಾಸ (೧೮೮೬–೮೭ ಮತ್ತು ೧೮೯೪–೯೫) ಸ್ವಾಮೀಜಿಯವರ ಐತಿಹಾಸಿಕ ಭೇಟಿ (೧೮೮೮) ಮತ್ತು ಶ್ರೀರಾಮಕೃಷ್ಣರ ಉಳಿದ ಶಿಷ್ಯರು ವಿವಿಧ ಕಾಲಗಳಲ್ಲಿ ಕ್ಷೇತ್ರ ಸಂದರ್ಶನ ಮಾಡಿದ್ದು – ಇವೆಲ್ಲದರಿಂದ ಈ ವ್ರಜಭೂಮಿಯು ಮತ್ತಷ್ಟು ಪುನೀತವಾಗಿದೆ. ಇವರೆಲ್ಲರ ಸದಾಶಯಗಳೇ ಸೇವಾಶ್ರಮದ ಅದ್ಭುತ ಪ್ರಗತಿಗೆ ಕಾರಣವಾಗಿದೆ. ಸ್ವಾಮಿ ವಿವೇಕಾನಂದರ 'ದರಿದ್ರ ದೇವೋ ಭವ' ಸೇವಾಧರ್ಮವು ಇಲ್ಲಿ ಕಾರ್ಯಗತಗೊಳ್ಳುತ್ತಿದೆ.



ಪ್ರತಿ ತಿಂಗಳೂ ಸುಮಾರು ೧,೦೦೦ ಮಂದಿ ಬಡ ಮತ್ತು ವೃದ್ಧ ವಿಧವೆಯರಿಗೆ ಅಕ್ಕಿ, ಗೋಧಿಹಿಟ್ಟು, ಬೇಳೆ ಸಕ್ಕರೆ ಮೊದಲಾದ ಆಹಾರಧಾನ್ಯಗಳನ್ನು ವಿತರಿಸುತ್ತಿರುವುದು ದಿವ್ಯ ತ್ರಯರ ಕೃಪೆಯೇ ಸರಿ. ಆಗಾಗ್ಗೆ ಪಾತ್ರೆ, ಪಡಗ, ಬಟ್ಟೆಗಳು, ಶಾಲುಗಳು ಮುಂತಾದವನ್ನು ಕೂಡ ಸೇವಾಶ್ರಮದಲ್ಲಿ ವಿತರಿಸಲಾಗುತ್ತಿದೆ. ದಾನಿಗಳ ಸಂಖ್ಯೆ ಪ್ರತಿವರ್ಷವೂ ಹೆಚ್ಚಾಗುತ್ತಿದೆ. ದಿವ್ಯತ್ರಯರ ಕೃಪೆಯಿಂದ ಸೇವಾಶ್ರಮವು ಇನ್ನೂ ಹೆಚ್ಚಿನ ಪ್ರಗತಿ ಸಾಧಿಸಲಿ ಎಂಬುದು ಎಲ್ಲರ ಹಾರೈಕೆಯಾಗಲಿ.



ಹೆಚ್. ವಿ. ಸರೋಜ

# ಶ್ರೀ ವಿವೇಕಾನಂದ ಸೇವಾಶ್ರಮ
## ಮತ್ತು
# ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ

**ರಾಮಕೃಷ್ಣ–ವಿವೇಕಾನಂದ ಭಾವಧಾರೆಯಿಂದ ಪ್ರೇರಣೆ ಪಡೆದ ಅನೇಕ ಸೇವಾಸಂಸ್ಥೆಗಳು ಶೈಕ್ಷಣಿಕ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಗಣನೀಯ ಸೇವೆಯನ್ನು ಸಲ್ಲಿಸುತ್ತಿವೆ. ಅಂಥ ಎರಡು ಸಂಸ್ಥೆಗಳ ಪರಿಚಯವನ್ನು ಮಾಡಿಕೊಟ್ಟಿರುವ ಲೇಖಕಿ ಬೆಂಗಳೂರು ಶ್ರೀರಾಮಕೃಷ್ಣ ಮಠದ ಭಕ್ತರು. ಇವರ ಕೆಲವು ಲೇಖನಗಳು ಈ ಪತ್ರಿಕೆಯಲ್ಲಿ ಈಗಾಗಲೇ ಪ್ರಕಟವಾಗಿವೆ.**

ವಿವೇಕಾನಂದರ ಜೀವನ, ಅವರ ಜೀವನದ ಧ್ಯೇಯ, ಗುರಿ ಅನೇಕರ ಮೇಲೆ ಪರಿಣಾಮ ಬೀರಿತು; ತಾವು ಕೂಡ ಜನಗಳ ಸೇವೆಗೆ ಏನನ್ನಾದರೂ ಮಾಡಬೇಕು ಎಂಬ ಯೋಚನೆ ಉಂಟಾಯಿತು.

ಇಂತಹ ಒಂದು ಯೋಚನೆಯ ಫಲವೇ 'ಶ್ರೀ ವಿವೇಕಾನಂದ ಸೇವಾಶ್ರಮ'. ವಿವೇಕಾನಂದರ ಧ್ಯೇಯವಾದ "ಮಾನವ ಸೇವೆಯೇ ಈಶಸೇವೆ" ಎಂಬುದೇ ಈ ಸಂಸ್ಥೆಯ ಗುರಿ ಮತ್ತು ಉದ್ದೇಶ.

ಈ ಸಂಘವು ೧೯೭೫ರ ಅಕ್ಟೋಬರ್ ೨ನೇ ತಾರೀಖಿನಂದು ಮಹಾತ್ಮ ಗಾಂಧಿಯವರ ಜನ್ಮದಿನದಂದು ಬೆಂಗಳೂರಿನ ವಸಂತಪುರದಲ್ಲಿ ಪ್ರಾರಂಭವಾಯಿತು. ಮೊದಲು ಈ ಸಂಘದವರು ಮಾಡಿದ ಸೇವೆ ಎಂದರೆ, ಅಲ್ಲಿಯ ರೋಗಿಗಳಿಗೆ ಔಷಧಿ ಕೊಡುವುದು, ಅವರ ರೋಗಗಳನ್ನು ತಪಾಸಣೆ ಮಾಡುವುದು ಇತ್ಯಾದಿ. ಇದು ವಾರಕ್ಕೊಮ್ಮೆ ಭಾನುವಾರದಂದು ನಡೆಯುತ್ತಿತ್ತು. ಈಗಲೂ ಅದು ನಡೆದುಕೊಂಡು ಬರುತ್ತಿದೆ. ಈ ಸೇವೆಯಿಂದ ಸುಮಾರು ೬೦ ಜನ ರೋಗಿಗಳಿಗೆ ಸಹಾಯವಾದದ್ದರಿಂದ ಇದನ್ನು ೧೯೭೭ರಲ್ಲಿ ತಾತಗುಣಿ ಎಂಬ ಇನ್ನೊಂದು ಹಳ್ಳಿಗೂ ವಿಸ್ತರಿಸಲಾಯಿತು. ಇಲ್ಲಿಯವರೆಗೆ ಲೆಕ್ಕ ಹಾಕಿದರೆ ಸುಮಾರು



೨,೫೦,೦೦೦ ರೋಗಿಗಳು ಇದರಿಂದ ಉಪಯೋಗ ಪಡೆದಿದ್ದಾರೆ.

ವಿವೇಕಾನಂದ ಸೇವಾಶ್ರಮವು ಒಂದು ರಿಜಿಸ್ಟರ್ಡ್ ಸೇವಾ ಸಂಸ್ಥೆ. ಇದಕ್ಕೆ ಅನೇಕ ಮಂದಿ ಧನ ಸಹಾಯ ಮಾಡುತ್ತಿದ್ದಾರೆ. ಪರದೇಶದವರಿಂದಲೂ ಧನಸಹಾಯ ಪಡೆಯುವುದಕ್ಕೆ ಪರವಾನಗಿ ಇದೆ. ಇದರ ಖರ್ಚು, ವೆಚ್ಚ ಎಲ್ಲವನ್ನೂ ಆದಾಯ ತೆರಿಗೆಯ ಕಛೇರಿಗೆ ಕಾಲಕ್ಕೆ ಸರಿಯಾಗಿ ಈ ಸಂಸ್ಥೆ ಒದಗಿಸುತ್ತಿದೆ.

ಈ ಕಾರ್ಯಕ್ರಮವು ಇಷ್ಟು ಯಶಸ್ವಿಯಾಗಿ ನಡೆದಿದ್ದು ಕಾರ್ಯಕರ್ತರ ಮನಸ್ಸಿಗೆ ಉತ್ಸಾಹವನ್ನುಂಟುಮಾಡಿತು. ಆದ್ದರಿಂದ ಅವರಲ್ಲಿ ಇನ್ನಷ್ಟು ಜನಸೇವೆ ಅಂದರೆ, ಬಡ ರೋಗಿಗಳಿಗೆ ಉಪಯೋಗವಾಗುವಂತಹ ಕಾರ್ಯ ಮಾಡಬೇಕೆಂಬ ಪ್ರಚೋದನೆಯನ್ನುಂಟುಮಾಡಿತು.

ಆದುದರಿಂದ ೧೯೮೧ನೇ ಇಸವಿಯಲ್ಲಿ 'ಕಣ್ಣು ಚಿಕಿತ್ಸೆ' ಅಂದರೆ ಕಣ್ಣು ಪರೀಕ್ಷೆ ಮಾಡಿ ಪೊರೆ ಇದ್ದಲ್ಲಿ ಅದನ್ನು ತೆಗೆಯುವ (ಆಪರೇಷನ್) ಕಾರ್ಯವನ್ನು 'ಕಣ್ಣು ಶಿಬಿರ'ಗಳ ಮೂಲಕ ಪ್ರಾರಂಭ ಮಾಡಲಾಯಿತು. ಈ ಕಾರ್ಯ ಮೊದಲು ಬಿಳಿಗಿರಿರಂಗನ ಬೆಟ್ಟದಲ್ಲಿ ಡಾ. ಸುದರ್ಶನ್ ಅವರ ಸಮ್ಮುಖದಲ್ಲಿ ನಡೆಯಿತು. ನಂತರ ಪೊನ್ನಂಪೇಟೆ ರಾಮಕೃಷ್ಣ ಶಾರದಾಶ್ರಮದಲ್ಲಿ ನಡೆಯಿತು.

ಕಣ್ಣಿನ ಚಿಕಿತ್ಸೆಗೆ ಬರೀ ಆಪರೇಷನ್ ಮಾಡಿದರೆ ಸಾಲದು. ಕಣ್ಣಿನ ಎಲ್ಲಾ ತೊಂದರೆಗಳನ್ನು ನಿವಾರಿಸಲು ಸಾಧ್ಯವಾಗುವಂತೆ, ಕ್ರಮವಾಗಿ ರೋಗಿಗಳಿಗೆ ಚಿಕಿತ್ಸೆ ಕೊಡುವುದಕ್ಕಾಗಿ **'ವಿವೇಕ ದೃಷ್ಟಿ'** ಎಂಬ ಆಸ್ಪತ್ರೆಯನ್ನು ಬೆಂಗಳೂರಿನ ಬನಶಂಕರಿ ೨ನೇ ಹಂತದಲ್ಲಿ ಈ ಸಂಘದವರು ಪ್ರಾರಂಭಿಸಿದರು. ಈಗ ಅದೇ ಜಾಗದಲ್ಲಿ ಇನ್ನೂ ಹೆಚ್ಚಿನ ಆಧುನಿಕ ಸೌಕರ್ಯ ಮತ್ತು ಈ ಕೆಲಸಕ್ಕೆ ಬೇಕಾದ ಉಪಕರಣಗಳನ್ನು ಹೊಂದಿರುವ ದೊಡ್ಡ ಆಸ್ಪತ್ರೆ ಸ್ಥಾಪನೆಯಾಗಿದೆ. ಇಲ್ಲಿ ಹೊರಗಡೆಯಿಂದ ಬರುವ ರೋಗಿಗಳಿಗೆ ಉಚಿತ ಮತ್ತು ಕಡಿಮೆ ಖರ್ಚಿನಲ್ಲಿ ಆಪರೇಷನ್



ಮಾಡುತ್ತಾರೆ. ಭಿಕ್ಷುಕರ ಕಾಲೋನಿಯಲ್ಲಿರುವವರಿಗೆ ಮತ್ತು ತುಂಬಾ ಬಡವರಿಗೆ ಉಚಿತವಾಗಿಯೇ ಆಪರೇಷನ್ ಮತ್ತು ಕಣ್ಣಿನ ಚಿಕಿತ್ಸೆ ಮಾಡುತ್ತಾರೆ.

**ವಿವೇಕ ವಸಂತ:** ಸದ್ಭಾವನೆಯಿಂದ, ಸೇವಾ ಮನೋಭಾವನೆಯಿಂದ ಮಾಡುವ ಕರ್ಮಕ್ಕೆ, ಭಗವಂತನ ಅನುಗ್ರಹ ಇದ್ದೇ ಇರುತ್ತದೆ. ಇದಕ್ಕೆ ಉದಾಹರಣೆ 'ವಿವೇಕ ವಸಂತ.'

ಶ್ರೀವಿವೇಕಾನಂದ ಸೇವಾಶ್ರಮದವರು ತಮ್ಮ ಸೇವಾಕಾರ್ಯ ಯಶಸ್ವಿಯಾಗಿ ನೆರವೇರಿ, ಅನೇಕರಿಗೆ ಉಪಯೋಗವಾದ್ದರಿಂದ ಉತ್ಸಾಹಿತರಾಗಿ ೨೦೧೧ರ ಆಗಸ್ಟ್ ೬ನೇ ತಾರೀಖು ಬೆಂಗಳೂರಿನ ವಸಂತಪುರದಲ್ಲಿ ಇನ್ನೊಂದು ಆಸ್ಪತ್ರೆಯನ್ನು ಉದ್ಘಾಟಿಸಿದರು. ಸತ್ಕಾರ್ಯಕ್ಕೆ ಸಜ್ಜನರ ಸಹಯೋಗ ಒದಗುತ್ತದೆ ಎನ್ನುವಂತೆ, ಆ ಆಸ್ಪತ್ರೆಗೆ ಬೇಕಾದ ಆಪರೇಷನ್ನಿನ ಸಾಮಗ್ರಿಗಳನ್ನು 'ಶ್ರೀ ಕಾಮಾಕ್ಷಿ ಶಾರದಾಂಬ ಟ್ರಸ್ಟ್, ಹೆಬ್ಬೂರು' ಇವರು ದಾನ ಮಾಡಿದರು.

ಅಲ್ಲಿ ೩೯ ಆಪರೇಷನ್‌ಗಳನ್ನು ನಿರಾಶ್ರಿತರ ಕೇಂದ್ರ ನಿವಾಸಿಗಳಾದ ರೋಗಿಗಳಿಗೆ ಮಾಡಿದ್ದಾರೆ. ಈ ಆಸ್ಪತ್ರೆಯ ಸೇವಾ ವೇಳೆ ೫.೩೦ ರಿಂದ ೬.೩೦, ಅಂದರೆ ಸಂಜೆಯಲ್ಲಿ ನಡೆಯುತ್ತಿದೆ. ಆಸ್ಪತ್ರೆಯವರು, ಹೊರಗಡೆಯಿಂದ ಬರುವ ರೋಗಿಗಳಿಗೆ ಉಚಿತ ಸಲಹೆ, ತಪಾಸಣೆ, ಆಪರೇಷನ್ ಮಾಡಬೇಕಾಗಿದ್ದಲ್ಲಿ ಅತಿ ಕಡಿಮೆ ವೆಚ್ಚದಲ್ಲಿ ಸೇವೆ ಒದಗಿಸುತ್ತಿದ್ದಾರೆ. ಇದಲ್ಲದೆ, ಕಡಿಮೆ ವೆಚ್ಚವನ್ನೂ ಭರಿಸಲಾಗದಂತಹ ರೋಗಿಗಳಿಗೆ ಉಚಿತವಾಗಿಯೇ ಆಪರೇಷನ್ ಮಾಡುತ್ತಿದ್ದಾರೆ.

**ವಾಹನ ವಿಭಾಗ (Mobile Ambulance):** ವಾಹನದಲ್ಲಿ ಸಂಚಾರ ಹೊರಟು ಮಾಗಡಿ, ಆನೇಕಲ್ಲು, ಮಳವಳ್ಳಿ, ಮಾಲೂರು, ಶಿಡ್ಲಘಟ್ಟ, ಅಲ್ಕಾಪುರ, ಸುಗ್ಗನಹಳ್ಳಿ, ಪಟ್ಟನಾಯಕನ ಹಳ್ಳಿ – ಈ ಗ್ರಾಮಗಳಲ್ಲಿ ಯಾವುದಾದರೂ ಒಂದು ಕೇಂದ್ರವನ್ನು ಆರಿಸಿಕೊಂಡು ಕಣ್ಣಿನ ಪೊರೆಯ ಆಪರೇಷನ್ ಕಾರ್ಯವನ್ನು ಕೂಡ ವಿವೇಕಾನಂದ ಸೇವಾಶ್ರಮದವರು ಮಾಡುತ್ತಿದ್ದಾರೆ. ಬೆಂಗಳೂರಿನ ಆಸುಪಾಸಿನ ಸ್ಥಳಗಳಲ್ಲಿಯೂ ಈ ವಾಹನ ಸಂಚಾರದ ಸೇವೆ (Mobile Ambulance) ನಡೆಯುತ್ತಿದೆ.

ಸೇವಾಶ್ರಮ ಸ್ಥಾಪನೆಯಾದಾಗ ಬಿ. ಆರ್. ಹಿಲ್ಸ್‌ನಲ್ಲಿ ದಿನಕ್ಕೆ ಒಂದು ಆಪರೇಷನ್ ಮಾಡಲಾಗುತ್ತಿತ್ತು. ಇಂದು ೩೦೦ರಿಂದ ೫೦೦ ಆಪರೇಷನ್‌ಗಳನ್ನು, ೨ ದಿನದ ಕ್ಯಾಂಪ್‌ಗಳಲ್ಲಿ ರಾಜ್ಯದ ಅನೇಕ ಕಡೆ ಕೈಗೊಳ್ಳಲಾಗುತ್ತಿದೆ. ಇದರಿಂದ ಈ ಸೇವಾಕಾರ್ಯ ಬಹುಜನರಿಗೆ ಉಪಯೋಗವಾಗಿ ಎಲ್ಲ ಕಡೆ ಪ್ರಶಂಸೆ ಪಡೆಯುತ್ತಿದೆ. ಈ ಸೇವೆಯು ಹೈದರಾಬಾದ್ ಕರ್ನಾಟಕ, ರಾಯಚೂರು, ಕೊಪ್ಪಳ, ಯಾದಗಿರಿ, ಬಳ್ಳಾರಿ ಜಿಲ್ಲೆಗಳಲ್ಲಿ ನಡೆಯುತ್ತಿದ್ದು ಬಹುಜನರ ವಿಶ್ವಾಸವನ್ನು ಗಳಿಸಿಕೊಂಡಿದೆ.

ಇದುವರೆಗೆ ಅತ್ಯಂತ ಹೆಚ್ಚಿನ ಆಪರೇಷನ್‌ಗಳು ನಡೆದದ್ದು ಹಗರಿಬೊಮ್ಮನಹಳ್ಳಿಯಲ್ಲಿ. ಇಲ್ಲಿ ಶ್ರೀ ವಿವೇಕಾನಂದ ಸೇವಾಶ್ರಮದ ವತಿಯಿಂದ ೨೦೧೩ರ ಅಕ್ಟೋಬರ್ ೫ ಮತ್ತು ೬ರಂದು ನಡೆದ ಎರಡು ದಿನಗಳ ಕ್ಯಾಂಪಿನಲ್ಲಿ, ೫೦೮ ಉಚಿತ ಆಪರೇಷನ್‌ಗಳನ್ನು ನಡೆಸಲಾಯಿತು.

**ಮೈಲಗಲ್ಲು:** ಸೇವಾಶ್ರಮದ ಕಾರ್ಯಕರ್ತರು, ಕಮಿಟಿಯ ಸದಸ್ಯರು ಈ ಸೇವಾಕಾರ್ಯ ತೃಪ್ತಿದಾಯಕವಾಗಿ ನಡೆದಿದ್ದಕ್ಕೆ, ಅಂದರೆ ೨೭, ೬೦೦ ಉಚಿತ ಕಣ್ಣಿನ ಪೊರೆಯ ಆಪರೇಷನ್‌ಗಳನ್ನು ಯಶಸ್ವಿಯಾಗಿ ನೆರವೇರಿದ್ದಕ್ಕೆ ಬಹಳ ಆನಂದಿತರಾಗಿದ್ದಾರೆ. ಇದರ ಸವಿನೆನಪಿಗಾಗಿ ಈ ಸೇವಾಕಾರ್ಯದ ಫಲ ಸಮರ್ಪಣೆಯನ್ನು ದಿವ್ಯತ್ರಯರಾದ ಶ್ರೀರಾಮಕೃಷ್ಣ, ಶ್ರೀಶಾರದಾದೇವಿ, ಸ್ವಾಮಿ ವಿವೇಕಾನಂದರಿಗೆ ಅರ್ಪಿಸಲು ಬೆಂಗಳೂರಿನ ಬಸವನಗುಡಿಯಲ್ಲಿರುವ ರಾಮಕೃಷ್ಣ ಮಠದಲ್ಲಿ ಒಂದು ಸಮರ್ಪಣಾ ಸಮಾರಂಭವನ್ನು ೨೦೧೩, ಸೆಪ್ಟೆಂಬರ್ ೨೨ರಂದು ಆಚರಿಸಲಾಯಿತು.

**ಮೈಸೂರಿನ ಸೇವಾ ಕಾರ್ಯಗಳು:** ಇನ್ನು ಈ ವಿವೇಕಾನಂದ ಸೇವಾಶ್ರಮ ಮೈಸೂರಿನಲ್ಲಿ ಏನು ಸೇವೆ ಮಾಡಿದೆ ಎಂದು ನೋಡೋಣ.

ಶಾಲೆಗಳಲ್ಲಿ ಕಾರ್ಯಕ್ರಮಗಳನ್ನು ಏರ್ಪಡಿಸಿ, ಮಾಧ್ಯಮಿಕ ಮತ್ತು ಹೈಸ್ಕೂಲಿನ ಮಕ್ಕಳಿಗೆ ಉಚಿತ ಕಣ್ಣು ತಪಾಸಣೆ ಮಾಡಿ, ಕಣ್ಣಿನ ದೋಷವಿದ್ದ ಮಕ್ಕಳಿಗೆ ಉಚಿತ ಕನ್ನಡಕಗಳನ್ನು ನೀಡಲಾಗಿದೆ. ಆಪರೇಷನ್ ಅಗತ್ಯವಿದ್ದ ಮಕ್ಕಳಿಗೆ ಡಾ. ರವಿಶಂಕರ್, ಡಾ. ಉಷಾಕಿರಣ್ ತಮ್ಮ ಮೈಸೂರಿನ ಆಸ್ಪತ್ರೆಯಲ್ಲಿ ಉಚಿತ ಆಪರೇಷನ್‌ಗಳನ್ನು ಮಾಡಿದ್ದಾರೆ. ಇದಕ್ಕೆ ಸ್ವಲ್ಪ ಮಟ್ಟಿಗೆ ಹಣ ಸಹಾಯ ಅಮೆರಿಕೆಯಿಂದಲೂ ಬಂದಿದೆ. ೩ ತಿಂಗಳ ಮಗುವಿನಿಂದ ಹಿಡಿದು ೧೮ ವರ್ಷ ವಯಸ್ಸಿನವರಿಗೆ ೯೮ ಅಪರೇಷನ್‌ಗಳು ಇದುವರೆಗೆ ನಡೆದಿದೆ. ೧೦,೦೦೦ ಮಕ್ಕಳಿಗೆ ಕಣ್ಣಿನ ಉಚಿತ ತಪಾಸಣೆ ಆಗಿದೆ. ೨,೫೦೦ ಮಕ್ಕಳಿಗೆ ಉಚಿತ ಕನ್ನಡಕಗಳನ್ನು ವಿತರಿಸಲಾಗಿದೆ.

**ಅಂಗವಿಕಲರಿಗೆ ಚಿಕಿತ್ಸೆ:** ಶ್ರೀರಾಮಕೃಷ್ಣರು ಈ ಸಂಸ್ಥೆಯಿಂದ ಎಷ್ಟು ಸಂತೃಪ್ತರಾಗಿದ್ದಾರೆಂದರೆ ಮತ್ತೆ ಮತ್ತೆ ಬೇರೆ ಬೇರೆ ರೀತಿಯಲ್ಲಿ ಸಂಕಷ್ಟದಲ್ಲಿರುವವರಿಗೆ ಸಹಾಯ ಅಥವಾ ಸೇವೆ ಮಾಡುವ ಅವಕಾಶವನ್ನು ಶ್ರೀ ವಿವೇಕಾನಂದ ಸೇವಾ ಸಂಸ್ಥೆಗೆ ಹಲವಾರು ರೀತಿಯಲ್ಲಿ ಒದಗಿಸುತ್ತಿದ್ದಾರೆ.

ಬೆಳಗೊಳ, ಹುಲಿಕೆರೆ ಎಂಬ ಎರಡು ಹಳ್ಳಿಗಳು ಕೆ.ಆರ್. ಎಸ್. ಅಣೆಕಟ್ಟೆಯ ಹತ್ತಿರದಲ್ಲಿವೆ. ಅಲ್ಲಿ ಅಂಗವಿಕಲ ಮಕ್ಕಳ



ಸೇವೆಗೆ ಸಂಸ್ಥೆಯವರು ಬಟ್ಟೆಗಳು, ಆಟದ ಸಾಮಾನು, ಮಕ್ಕಳ ಚಿಕಿತ್ಸೆಗೆ ಬೇಕಾದ ಸಲಕರಣೆಗಳು ಹಾಗೂ ಶಕ್ತಿಕೊಡುವಂತಹ ಆಹಾರ ಸಾಮಗ್ರಿಗಳನ್ನು ಒದಗಿಸುತ್ತಿದ್ದಾರೆ. ಅಲ್ಲಿ ನೆಲೆಸಿರುವ ೨೦ ಮಕ್ಕಳು ದೈಹಿಕ ಮತ್ತು ಮಾನಸಿಕ ಕಾಯಿಲೆಯಿಂದ ಬಳಲುತ್ತಿದ್ದಾರೆ. ಸಂಸ್ಥೆಯವರ ಸಹಾಯ ದೊರೆತ ಮೇಲೆ, ಅವರ ವರ್ತನೆ ಬಹಳಷ್ಟು ಉತ್ತಮಗೊಂಡಿದೆ. 'ಫಿಸಿಯೋಥೆರಪಿ' ಅವರು ಮಾಡುವ ಚಿಕಿತ್ಸೆಗಳಲ್ಲಿ ಮುಖ್ಯವಾದದ್ದು. ಈ ಸೇವೆಗೆ ಡಾ. ಗುರುರಾಜ್ ದೇಶಪಾಂಡೆಯವರು ನಡೆಸುತ್ತಿರುವ 'ಮಾನಸಿಕ ಖಾಯಿಲೆಯಿಂದ ನರಳುತ್ತಿರುವವರಿಗೆ ನೆರವಿನ ಯೋಜನೆ'ಯವರು ಸಹಾಯ ಮಾಡುತ್ತಿದ್ದಾರೆ.

ದೈಹಿಕವಾಗಿ, ಮಾನಸಿಕವಾಗಿ ನರಳುತ್ತಿರುವವರಿಗೆ ಸೇವೆ ಮಾಡುತ್ತಿರುವ ಈ ಸಂಸ್ಥೆಯು ಮತ್ತೊಂದು ಕಾರ್ಯವನ್ನು ಕೈಗೆತ್ತಿಕೊಂಡಿದೆ. ಅದೇನೆಂದರೆ, ಕಲಿಕೆಯ ಸಾಮರ್ಥ್ಯ ಕಡಿಮೆ ಇರುವ ಮಕ್ಕಳಿಗೆ ಉತ್ತೇಜನ ಕೊಟ್ಟು, ಪ್ರೋತ್ಸಾಹಿಸಿ, ಉಪಾಧ್ಯಾಯರ ಸಹಾಯದಿಂದ ಅವರು ಕಲಿಕೆಯಲ್ಲಿ ಮುಂದುವರೆಯುವಂತೆ ಮಾಡುವುದು. ಈ ಕಾರ್ಯ ಹಂಪಾಪುರ, ಚಿಕ್ಕ ಅಂಕನಹಳ್ಳಿ (ಮಂಡ್ಯಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕುನಲ್ಲಿವೆ) ಗ್ರಾಮಗಳಲ್ಲಿ ನಡೆಯುತ್ತಿದೆ. ಈ ಕಾರ್ಯ ಯಶಸ್ವಿಯಾಗುವುದಕ್ಕೆ ಜಾಣತನ, ದೃಢನಿಶ್ಚಯ, ಸತತಪ್ರಯತ್ನ ಇರಬೇಕು. ಇದಕ್ಕೆ ಪರಿಣಿತ ಉಪಾಧ್ಯಾಯರನ್ನು ಆರಿಸಲಾಗಿದೆ. ಇದೇ ಕೆಲಸವನ್ನು ಮೈಸೂರಿನ ಹೈಸ್ಕೂಲುಗಳಲ್ಲಿರುವ ಎಸ್.ಎಸ್.ಎಲ್.ಸಿ ಹುಡುಗರಿಗೂ ವಿಸ್ತರಿಸುವ ಯೋಜನೆ ಇದೆ.

**ಇತರ ಚಟುವಟಿಕೆಗಳು :** ಇದಲ್ಲದೆ ಸೇವಾಸಂಸ್ಥೆಯವರು ಬರಗಾಲ ಪೀಡಿತ ಜನಗಳಿಗೆ, ಪ್ರವಾಹದಿಂದ ನೆಲೆ ಕಳೆದುಕೊಂಡವರಿಗೆ ಬೇಕಾದ ಬಟ್ಟೆ, ಆಹಾರ ಇತ್ಯಾದಿಗಳನ್ನು ಸಾರ್ವಜನಿಕರಿಂದ ಪಡೆದು ಅವನ್ನು ಸಂಗ್ರಹಿಸಿ ಇಟ್ಟುಕೊಳ್ಳುವುದಕ್ಕಾಗಿ ಮೈಸೂರಿನ ಕೆ.ಆರ್.ಎಸ್. ರೋಡಿನಲ್ಲಿರುವ ಬೆಳಗೊಳದಲ್ಲಿ ಒಂದು ಬಾಡಿಗೆ ಕಟ್ಟಡ ತೆಗೆದುಕೊಂಡಿದ್ದಾರೆ. ಈ ಯೋಜನೆಯಿಂದ ಪ್ರಯೋಜನ ಪಡೆದಿರುವ ಸ್ಥಳಗಳೆಂದರೆ, ಮೈಸೂರಿನ ಸುತ್ತಮುತ್ತಲಿನ ಹಳ್ಳಿಗಳು ಮತ್ತು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಹನುಮಸಾಗರ. ಅಲ್ಲಿಯವರಿಗೆಲ್ಲಾ ಈ ಸೇವಾ ಕಾರ್ಯದಿಂದ ಬಹಳಷ್ಟು ಉಪಕಾರವಾಗಿದೆ. ಹೆಚ್ಚು ಉಳ್ಳವರಿಂದ ಇಂತಹ ವಸ್ತುಗಳನ್ನು ಸಂಗ್ರಹಿಸಿ, ಏನೂ ಇಲ್ಲದವರಿಗೆ ಹಂಚುವ ಸೇವಾಕಾರ್ಯ ಈ ಸಂಸ್ಥೆಯಿಂದ ನಡೆಯುತ್ತಿದೆ. ಈ ಕಾರ್ಯಕ್ಕೆ ಉತ್ತರ ಕರ್ನಾಟಕದ ಅನೇಕ ದೇವಸ್ಥಾನಗಳು ಸೀರೆಗಳನ್ನು ದಾನ ಮಾಡಿವೆ.

## ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ (ರಿ.)

ವಿದ್ಯೆ ಇಲ್ಲದ ಮನುಷ್ಯ ಪಶುವಿಗೆ ಸಮಾನ ಎಂಬ ನಾಣ್ನುಡಿ ಇದೆ. ಅನ್ನದಾನ, ಆರೋಗ್ಯದಾನ, ವಿದ್ಯಾದಾನ, ಜ್ಞಾನದಾನ ಇವೆಲ್ಲವೂ ಮನುಷ್ಯನ ಸರ್ವತೋಮುಖ ಬೆಳವಣಿಗೆಗೆ ಅತ್ಯಗತ್ಯ.

ಆದರೆ ಈಗಿನ ಕಾಲದಲ್ಲಿ ವಿದ್ಯೆ ಎಂಬುದು ಬಡವರ ಪಾಲಿಗೆ ಗಗನಕುಸುಮವಾಗಿದೆ. ಆದ್ದರಿಂದ ವಿದ್ಯಾರ್ಥಿಗಳು ತಮಗೆ ಆಸಕ್ತಿ ಇದ್ದರೂ ಕೂಡ, ಅನುಕೂಲತೆಗಳು ಇಲ್ಲದಿರುವುದರಿಂದ, ತಮ್ಮ ಇಚ್ಛೆಗೆ ಅನುಸಾರವಾಗಿ ವಿದ್ಯೆ ಕಲಿಯುವುದು ಅಸಾಧ್ಯವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಕಡೆಯ ಪಕ್ಷ ವಿದ್ಯಾರ್ಥಿದೆಸೆಯಲ್ಲಿ ಬಹುಮುಖ್ಯವಾದ ಘಟ್ಟವಾದ ಎಸ್.ಎಸ್.ಎಲ್.ಸಿ.ಯನ್ನಾದರೂ ಪೂರ್ಣಗೊಳಿಸಲು ಅನುಕೂಲ ಮಾಡಿಕೊಡುವುದಕ್ಕಾಗಿ ಪ್ರಾರಂಭವಾಗಿರುವುದೇ **'ಸ್ವಾಮಿ ವಿವೇಕಾನಂದ ಶೈಕ್ಷಣಿಕ ಸಂಸ್ಥೆ.'** ಈ ಸಂಸ್ಥೆಯು ಬೆಂಗಳೂರಿನ ಬನಶಂಕರಿ ೧ನೇ ಘಟ್ಟದಲ್ಲಿ ಸ್ಥಾಪಿತವಾಗಿದೆ.

ಇದನ್ನು ಪ್ರಾರಂಭಿಸಿದವರು ಯಾರು? ಅವರು ಈ ಶಾಲೆಯನ್ನು ಹೇಗೆ, ಇಷ್ಟರಮಟ್ಟಿಗೆ ಯಶಸ್ವಿಯಾಗಿ ನಡೆಸುತ್ತಿದ್ದಾರೆ ಎಂಬುದನ್ನು ನೋಡೋಣ.

ಪೂಜನೀಯ ಸ್ವಾಮಿ ಯತೀಶ್ವರಾನಂದರು ಸ್ಥಾಪನೆ ಮಾಡಿದ ಬಾಲಕ ಸಂಘ **'ವಿವೇಕಾನಂದ ಬಾಲಕ ಸಂಘ'**. ಇದು ಬೆಂಗಳೂರಿನ ಬಸವನಗುಡಿಯ ಶ್ರೀರಾಮಕೃಷ್ಣ ಆಶ್ರಮದ ಒಂದು ಅಂಗಸಂಸ್ಥೆ. ೭ ವರ್ಷದ ಮಕ್ಕಳಿಂದ ಹಿಡಿದು ೧೫ ವರ್ಷದ ಬಾಲಕರಿಗಾಗಿ ನಡೆಸುತ್ತಿರುವ ಸಂಘ ಇದು.

ಈ ಸಂಘದಲ್ಲಿ ಬಾಲಕರಾಗಿ ಸೇರಿ ತರಬೇತಿ ಪಡೆದ ಕೆಲವು ಯುವಕರಿಗೆ, ವಿವೇಕಾನಂದರ ಆದರ್ಶದ ಪ್ರಕಾರ, ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಅವಕಾಶವಿರುವಂತಹ ಒಂದು ಶಾಲೆಯನ್ನು ಸ್ಥಾಪಿಸಬೇಕೆಂಬ ಉತ್ಕಟ ಅಭಿಲಾಷೆ ಉಂಟಾಯಿತು. ಆದರೆ ಇವರು ಯಾರೂ ಹಣವಂತರಲ್ಲ. ಆದರೂ ಧೈರ್ಯಮಾಡಿ ಆಶ್ರಮದ ಹಿರಿಯ ಸ್ವಾಮಿಗಳಿಂದ ಉತ್ತೇಜನ ಪಡೆದುಕೊಂಡು, ೧೯೭೧ರಲ್ಲಿ ಈ ಶಾಲೆಯನ್ನು ಒಂದು ಬಾಡಿಗೆಯ ಕಟ್ಟಡದಲ್ಲಿ ಪ್ರಾರಂಭಿಸಿಯೇಬಿಟ್ಟರು. ಈ ಯುವಕರು ಬೇರೆಕಡೆ ಕೆಲಸ ಮಾಡಿಕೊಂಡು ಹೊರಗಿನಿಂದಲೇ ಶಾಲೆಯ ಅಭಿವೃದ್ಧಿ ಕೆಲಸಕ್ಕೆ ಸಹಾಯ ಮಾಡಿದರು. ಮೊದಲಿಗೆ ಕನ್ನಡ ಮಾಧ್ಯಮದಲ್ಲಿ ಪ್ರೌಢಶಾಲೆ ಮಾತ್ರ ಪ್ರಾರಂಭವಾಯಿತು.

**ಧ್ಯೇಯೋದ್ದೇಶಗಳು:** ವಿದ್ಯಾರ್ಥಿಗಳಿಗೆ, ಅವರ ಜೀವನದಲ್ಲಿ ಪ್ರೌಢಶಾಲಾ ಹಂತ ಬಹಳ ಮುಖ್ಯವಾದದ್ದು. ಅವರ ಜೀವನದಲ್ಲಿ ತಿರುವು ತೆಗೆದುಕೊಳ್ಳುವ ಸಮಯ ಇದು. ಆದ್ದರಿಂದ ಆ ವಯಸ್ಸಿನಲ್ಲಿ ಅವರಲ್ಲಿ ಒಳ್ಳೆಯ ಧ್ಯೇಯ ಗುರಿಗಳನ್ನು ಬಿತ್ತಿದಲ್ಲಿ, ಮುಂದೆ ಅವರು ಆ ದಾರಿಯಲ್ಲಿ ನಡೆದು, ಉತ್ತಮ ಪ್ರಜೆಗಳಾಗಲು ಸಾಧ್ಯವಾಗುತ್ತದೆ. ಆದ್ದರಿಂದ ಈ ಸಂಸ್ಥೆಯ ಧ್ಯೇಯ ಮಕ್ಕಳ ಶೈಕ್ಷಣಿಕ, ನೈತಿಕ, ಧಾರ್ಮಿಕ

ಮತ್ತು ಆಧ್ಯಾತ್ಮಿಕ ಮಟ್ಟವನ್ನು ಉತ್ತಮಗೊಳಿಸುವುದೇ ಆಗಿದೆ. ೪೫ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಈ ಶಾಲೆ ಈಗ ಇಂಗ್ಲಿಷ್ ಮಾಧ್ಯಮದಲ್ಲಿಯೂ ಶಿಶುವಿಹಾರ, ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆಗಳನ್ನು ನಡೆಸುತ್ತಿದ್ದು, ೫೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ.

**ಶಿಕ್ಷಣ :** ಈ ಶಾಲೆಯಲ್ಲಿ ನರ್ಸರಿಯಿಂದ ಪ್ರೌಢಶಾಲೆಯವರೆಗೆ ತರಗತಿಗಳು ನಡೆಯುತ್ತಿವೆ. ಪ್ರೌಢಶಾಲಾ ಮಕ್ಕಳಿಗೆ ಉಚಿತ ಶಿಕ್ಷಣ ನೀಡಲಾಗುತ್ತಿದೆ. ಅವರು ಸರ್ಕಾರದಿಂದ ನಿಗದಿತವಾದ ಶುಲ್ಕ ಮಾತ್ರ ನೀಡಬೇಕಾಗುತ್ತದೆ.

**ಕಟ್ಟಡ :** ಶಾಲೆಯು ಪ್ರಾರಂಭದಲ್ಲಿ ಒಂದು ಬಾಡಿಗೆ ಕಟ್ಟಡದಲ್ಲಿ ಪ್ರಾರಂಭವಾಯಿತು. ಈಗ ಆಡಳಿತ ವರ್ಗದವರ ಸತತ ಪ್ರಯತ್ನ ಮತ್ತು ಅನೇಕ ಸಹೃದಯರ ಉದಾರ ಕೊಡುಗೆಯಿಂದಾಗಿ ತನ್ನದೇ ಆದ ವಿಶಾಲವಾದ ಸ್ವಂತ ಕಟ್ಟಡದಲ್ಲಿ ೧೯೮೭ರಿಂದ ಕೆಲಸ ಮಾಡುತ್ತಿದೆ.

**ವಿವೇಕ ಬಾಲ ವಿಕಾಸ ಕೇಂದ್ರ :** ೫ ರಿಂದ ೯ನೇ ತರಗತಿಯಲ್ಲಿ ಓದುತ್ತಿರುವ ಮಕ್ಕಳ ನೈತಿಕ, ಆಧ್ಯಾತ್ಮಿಕ ಜಾಗೃತಿಯನ್ನು ಉಂಟುಮಾಡಲು ಪ್ರತಿ ಭಾನುವಾರ ೯ ರಿಂದ ೧೧-೩೦ರವರೆಗೆ ತರಗತಿಯನ್ನು ನಡೆಸಲಾಗುವುದು. ಇದರಲ್ಲಿ ಭಜನೆ, ವೇದಮಂತ್ರ ಪಠಣ, ಕಥೆ, ಕ್ವಿಜ್, ಆಟ ಸೇರಿವೆ.

**ವಿದ್ಯಾರ್ಥಿ ಸಂಘ:** ವಿದ್ಯಾರ್ಥಿಗಳಲ್ಲಿ ಪ್ರಜಾಪ್ರಭುತ್ವದ ಅರಿವು ಮೂಡಿಸುವುದಕ್ಕಾಗಿ ವಿದ್ಯಾರ್ಥಿಸಂಘವನ್ನು ಏರ್ಪಡಿಸಲಾಗಿದೆ. ಪ್ರತಿ ತರಗತಿಯಿಂದಲೂ ಒಬ್ಬ ವಿದ್ಯಾರ್ಥಿ ಪ್ರತಿನಿಧಿ, ಒಬ್ಬ ವಿದ್ಯಾರ್ಥಿನಿ ಪ್ರತಿನಿಧಿಯನ್ನು ಆರಿಸಿ, ಅವರಲ್ಲೇ ಒಬ್ಬ ವಿದ್ಯಾರ್ಥಿ ಕಾರ್ಯದರ್ಶಿ ಮತ್ತು ಜಂಟಿ ಕಾರ್ಯದರ್ಶಿಯನ್ನು ಆರಿಸಲಾಗುವುದು.

**ಸಾಂಸ್ಕೃತಿಕ ಚಟುವಟಿಕೆ :** ವಿದ್ಯಾರ್ಥಿಗಳು ಅಂತರ-ಶಾಲಾ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಾರೆ. ಉದಾಹರಣೆ ಸಂಗೀತ, ಚರ್ಚಾಕೂಟ, ಆಶುಭಾಷಣ ಇತ್ಯಾದಿ.

**ಶಾಲೆಯ ಪತ್ರಿಕೆ :** ಶಾಲೆಯ ಮೂಲಕ 'ಉದಯ' ಎಂಬ ಹೆಸರಿನಿಂದ ಒಂದು ಶಾಲಾಪತ್ರಿಕೆ ಹೊರಡಿಸುತ್ತಿದ್ದಾರೆ. ಇದರಲ್ಲಿ ವಿದ್ಯಾರ್ಥಿಗಳ ಲೇಖನ, ಚಿತ್ರಗಳನ್ನು ಮುದ್ರಿಸಲಾಗುವುದು.

**ನೈತಿಕ ಶಿಕ್ಷಣ:** ಒಂದು ನೈತಿಕ ಶಿಕ್ಷಣ ಶಿಬಿರವನ್ನು ಪ್ರತಿ ವರ್ಷ ಅಕ್ಟೋಬರ್ ಮೊದಲ ವಾರದಲ್ಲಿ ನಡೆಸಲಾಗುವುದು. ಇದರಲ್ಲಿ ಮಹಾಪುರುಷರ ಜೀವನ ಚರಿತ್ರೆಯ ಪರಿಚಯವನ್ನು ವಿದ್ಯಾರ್ಥಿಗಳಿಗೆ ಮಾಡಿಸಲಾಗುವುದು. ಇದರಿಂದ ಅವರಿಗೆ ನೈತಿಕ ಜಾಗೃತಿ ಉಂಟಾಗಲು ಸಹಾಯವಾಗುತ್ತದೆ.

**ವೈಯಕ್ತಿಕ ಗಮನ :** ಪ್ರತಿ ವಿದ್ಯಾರ್ಥಿಯನ್ನು ಕರೆದು ಅವರ ವೈಯಕ್ತಿಕ ಸಮಸ್ಯೆಯನ್ನು ವಿಚಾರಿಸಿ ಆ ಸಮಸ್ಯೆಗೆ ತಕ್ಕಂತೆ ಸೂಕ್ತ ಪರಿಹಾರ, ಮಾರ್ಗದರ್ಶನ ನೀಡುವ ಕಾರ್ಯಕ್ರಮವನ್ನೂ ಶಾಲೆಯ ವತಿಯಿಂದ ಹಾಕಿಕೊಳ್ಳಲಾಗಿದೆ. ಈ ಮಾರ್ಗದರ್ಶನವನ್ನು ತಜ್ಞ ಮಾರ್ಗದರ್ಶಿಗಳಾದ ಶ್ರೀಮತಿ ಸುಧಾ ನಾಗೇಂದ್ರರವರು ನೀಡುತ್ತಿದ್ದಾರೆ.

**ಹೊಲಿಗೆ ತರಬೇತಿ :** ಮಕ್ಕಳಿಗೆ ತಮ್ಮ ಸ್ವಂತ ಕಾಲ ಮೇಲೆ ನಿಲ್ಲಲು ಸಹಾಯ ಮಾಡುವ ಉದ್ದೇಶದಿಂದ ನುರಿತ ಶಿಕ್ಷಕರ ಮಾರ್ಗದರ್ಶನದಲ್ಲಿ ಹೊಲಿಗೆಯನ್ನೂ ಶಾಲೆಯವರು ಕಲಿಸುತ್ತಿದ್ದಾರೆ.

**ಸೂತ್ರದ ಬೊಂಬೆಯಾಟ :** ವಿಶ್ವವಿಖ್ಯಾತ ಮಾಸ್ಟರ್ ಕ್ರಾಫ್ಟ್ಸ್‌ಮನ್ ಶ್ರೀ ಎಂ. ಆರ್. ರಂಗನಾಥರಾವ್‌ರವರು ಸೂತ್ರದ ಬೊಂಬೆಯಾಟದ ಬೊಂಬೆಗಳನ್ನು ತಯಾರಿಸುವುದು, ವಸ್ತ್ರಾಲಂಕಾರ ಮಾಡುವುದು ಮತ್ತು ಬೊಂಬೆಗಳನ್ನು ಆಡಿಸುವ ಕಲೆಯನ್ನು ಮಕ್ಕಳಿಗೆ ಕಲಿಸಿದ್ದಾರೆ. ಇದರಿಂದ ಮಕ್ಕಳು 'ಹನುಮದ್ವಿಲಾಸ' ಎಂಬ ಪ್ರಸಂಗದ ೨೪೫ಕ್ಕೂ ಹೆಚ್ಚು ಯಶಸ್ವಿ ಪ್ರದರ್ಶನಗಳನ್ನು ಗೋವಾ, ಕರ್ನಾಟಕದ ವಿವಿಧ ಸ್ಥಳಗಳಲ್ಲಿ ನೀಡಿದ್ದಾರೆ. ಇದರ ತೆಲುಗು ಆವೃತ್ತಿಯನ್ನು ಆಂಧ್ರಪ್ರದೇಶದಲ್ಲಿ ಯಶಸ್ವಿಯಾಗಿ ಪ್ರದರ್ಶಿಸಲಾಗಿದೆ.

**ಸಲಾಕಿ ಬೊಂಬೆಯಾಟ :** ಶ್ರೀ ಎಂ.ಆರ್. ರಂಗನಾಥರಾವ್ ಅವರು ಶಾಲೆಯ ಮಕ್ಕಳಿಗೆ ಕಲಿಸಿಕೊಟ್ಟ 'ಶ್ರೀಕೃಷ್ಣ ತುಲಾಭಾರ' ಎಂಬ ಸಲಾಕಿ ಬೊಂಬೆಯಾಟವು ಇದುವರೆಗೆ, ೨೨ ಪ್ರದರ್ಶನಗಳನ್ನು ಕಂಡಿದ್ದು, ಬಹಳ ಯಶಸ್ವಿಯಾಗಿ ಮುನ್ನಡೆಯುತ್ತಿದೆ.

**ಓಪನ್ ಸ್ಕೂಲ್ :** ಶಾಲೆಯ 'ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಓಪನ್ ಸ್ಕೂಲಿಂಗ್' (ಎನ್.ಐ.ಓ.ಎಸ್) ನವದೆಹಲಿಯವರ ಮನ್ನಣೆ ಪಡೆದಿದ್ದು, ೨೦೧೧ನೆಯ ಸಾಲಿನಲ್ಲಿ 'ಸಿ.ಬಿ.ಎಸ್.ಇ' ಪಠ್ಯಕ್ರಮದಲ್ಲಿ ೧೦ನೇ ತರಗತಿಗೆ ನೇರ ಪ್ರವೇಶ ಪ್ರಾರಂಭಿಸಲಾಗಿದೆ. ಅನೇಕ ಕಾರಣಗಳಿಂದ ಓದು ಮುಂದುವರಿಸಲಾಗದ ವಿದ್ಯಾರ್ಥಿಗಳಿಗೆ ಸಂಪರ್ಕ ತರಗತಿಗಳ ಮೂಲಕ ಪರೀಕ್ಷೆಗೆ ಕೂಡಿಸುವುದೇ ಈ ಯೋಜನೆಯ ಉದ್ದೇಶ.

**ಅಮೇಜಿಂಗ್ ಸ್ಕೇಟ್ಸ್ :** ಶಾಲೆಯ ಹಿರಿಯ ವಿದ್ಯಾರ್ಥಿ ಎಸ್. ರಾಘವೇಂದ್ರ ಅವರ ನೇತೃತ್ವದಲ್ಲಿ ಸಂಜೆಯ ವೇಳೆ ಎಳೆಯರಿಗೆ ಸ್ಕೇಟಿಂಗ್ ತರಬೇತಿ ನೀಡಲಾಗುತ್ತಿದೆ. ಈ ಕ್ಲಬ್ಬಿನ "ವಂದೇ ಮಾತರಂ" ಸ್ಕೇಟಿಂಗ್ ನೃತ್ಯವು ಕರ್ನಾಟಕದಲ್ಲಲ್ಲದೆ ನೆರೆಯ ಆಂಧ್ರಪ್ರದೇಶದಲ್ಲಿಯೂ ಜನಪ್ರಿಯತೆ ಗಳಿಸಿದೆ.





# ಶತಮಾನಕ್ಕೂ ಹೆಚ್ಚಿನ ಅಪೂರ್ವ ಸೇವೆ ಸಲ್ಲಿಸಿದ ಚೆನ್ನೈ ಸ್ಟೂಡೆಂಟ್ ಹೋಮ್



ಡಾ. ಬಿ.ವಿ. ವಸಂತಕುಮಾರ್

**ರಾಮಕೃಷ್ಣ ಮಿಷನ್ನಿನ ಅತ್ಯಂತ ಹಳೆಯ ಆವಾಸೀ ಶಿಕ್ಷಣ ಸಂಸ್ಥೆಯಾದ ಚೆನ್ನೈನ ಸ್ಟೂಡೆಂಟ್ ಹೋಂನ ಹೃದಯಸ್ಪರ್ಶಿ ಚಿತ್ರಣ ಇಲ್ಲಿದೆ. ತ್ಯಾಗ – ಸೇವೆಗಳು ಮಡುಗಟ್ಟಿ ಒಂದು ಅಪೂರ್ವ ರೂಪವನ್ನು ಪಡೆದ ಕಥೆ ಇದು. ಲೇಖಕರು ಮೈಸೂರಿನ ಮಹಾರಾಣಿ ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜಿನ ಕನ್ನಡ ವಿಭಾಗದಲ್ಲಿ ಸಹ ಪ್ರಾಧ್ಯಾಪಕರಾಗಿದ್ದಾರೆ.**

ಭಾರತದ ಆತ್ಮ ಧರ್ಮ. ಧರ್ಮದ ಆತ್ಮ ಜ್ಞಾನ. ಹಾಗಾಗಿಯೇ ಭಾರತೀಯ ಸಂಸ್ಕೃತಿಯು ಜ್ಞಾನದ ಆಧಾರದ ಮೇಲೆ ನಿರ್ಮಿತವಾಗಿದೆ. ಆತ್ಮಜ್ಞಾನವೇ ಪರಿಪೂರ್ಣಜ್ಞಾನ. ಅಂಥ ಪರಿಪೂರ್ಣ ಜ್ಞಾನದ ತವರು ಭಾರತ. ಆದರೆ ಅದರ ಮರೆವಿನ ಕಾರಣವಾಗಿ ಮತ್ತು ಅವಿವೇಕದ ಪರಿಣಾಮವಾಗಿ ಜಾತೀಯತೆ, ಅಸ್ಪೃಶ್ಯತೆ, ಬಡತನ, ದಾರಿದ್ರ್ಯ, ದಾಸ್ಯ, ಗುಲಾಮತನಗಳು ಅಧಿಕಗೊಂಡು ಭಾರತ ಹಾಗೂ ಭಾರತೀಯತೆ ಪತನಗೊಂಡ ಸಂದರ್ಭದಲ್ಲಿ ಶತಕೋಟಿಸೂರ್ಯಪ್ರಭೆ ಹೊರಹೊಮ್ಮಿದ್ದು ಬಂಗಾಳದ ದಕ್ಷಿಣೇಶ್ವರದ ಕಾಳಿಯ ಮಂದಿರದಿಂದ! ಕಾಳಿ, ಮಹಾಕಾಳಿ, ಮಹಾನ್‌ತಾಯಿಯ ಮಂದಿರದಿಂದ ಭಾರತದ ಸನಾತನ ಅರಿವಿನ ಅರುಣೋದಯವಾಯಿತು. ಸೂರ್ಯನಂಥ ರಾಮಕೃಷ್ಣ ಪರಮಹಂಸರು ಅನಂತ ಅಮರ ಕಿರಣದಂಥ ಸ್ವಾಮಿ ವಿವೇಕಾನಂದರನ್ನು ಸ್ಪರ್ಶಮಾಡಿದ್ದರಿಂದ ಭಾರತದ ಭಾಗ್ಯೋದಯವಾಯಿತು. ಉತ್ತರದ ಹಿಮಾಲಯದಿಂದ ಹಿಡಿದು ದಕ್ಷಿಣದ ಕನ್ಯಾಕುಮಾರಿಯವರೆಗೆ ಹಾಗೂ ಅದರಾಚೆಯ ಚಿಕಾಗೋದಿಂದ ಹಿಡಿದು ಚಿರಂತನ ಜಗತ್ತಿನವರೆಗೆ ಭಾರತದ ದಾಸ್ಯದಾರಿದ್ರ್ಯದ ಕತ್ತಲೆಯು ಕಳೆದು ವೇದವೇದಾಂತದ ಚೇತನ ಪ್ರಜ್ವಲಿಸಿತು. ಅಂಥದ್ದೊಂದು ಬೆಳಕಿನ ಪರಿಣಾಮ ಚೆನ್ನೈನಲ್ಲಿ ೧೯೦೫ರಂದು ಆರಂಭವಾದ ಸ್ಟೂಡೆಂಟ್ ಹೋಂ. ಅದು ಕೇವಲ ಬಡ ವಿದ್ಯಾರ್ಥಿಗಳ ಮನೆಯಲ್ಲ; ಅದು ಭಾರತದ ದರಿದ್ರನಾರಾಯಣರ ಸೇವೆಯ ರೀತಿಯಲ್ಲಿ ಪ್ರಕಟಗೊಂಡಿರುವ ಭಾರತದ ಸಮ್ಮಾನ.

ವೀರಸನ್ಯಾಸಿ, ವಿಶ್ವವಿಜೇತ, ವಿಶ್ವಮಾನವ ಸ್ವಾಮಿ ವಿವೇಕಾನಂದರು ಪರಮಹಂಸರ ದೇಹತ್ಯಾಗದ ಬಳಿಕ ೧೮೮೬ರಿಂದ ೧೮೯೩ರವರೆಗೆ ಭಾರತದ ಉದ್ದಗಲಕ್ಕೂ ನಡೆದಾಡಿ ನಾಡಿನ ನಾಡಿ ಹಿಡಿದು ಅದರ ಸಮಸ್ಯೆ–ಸವಾಲು–ಪರಿಹಾರದ ಎಲ್ಲ ಸಾಧ್ಯತೆಗಳನ್ನು ಅರ್ಥಮಾಡಿಕೊಂಡು, ರಾಷ್ಟ್ರದ ಕುಂಡಲಿನಿ ಶಕ್ತಿಯನ್ನು ಎಚ್ಚರಿಸಿದರು. 'ಮಾತೃದೇವೋ ಭವ', 'ಪಿತೃದೇವೋ ಭವ', 'ಆಚಾರ್ಯದೇವೋ ಭವ', 'ಅತಿಥಿದೇವೋ ಭವ' ಗಳ ಜೊತೆಗೆ, 'ದರಿದ್ರದೇವೋ ಭವ', ಮೂರ್ಖದೇವೋ ಭವ' ಎಂಬ ಹೊಸ ದೇವರುಗಳನ್ನು ನೀಡಿದರು. ಯಾರಿಗೆ ತನ್ನ ಬಗ್ಗೆ ತನ್ನಲ್ಲಿ ನಂಬಿಕೆ ಇಲ್ಲವೋ ಅವನೇ ನಾಸ್ತಿಕ ಎಂದರು. ಗುಡಿಸಲುಗಳಲ್ಲಿ ಭಾರತವಿದೆ, ಗುಡಿಸಲುಗಳು ಉದ್ಧಾರವಾದಾಗ ಭಾರತ ಉದ್ಧಾರವಾಗುತ್ತದೆ ಎಂದು ಸಾರಿದರು. ಸೇವೆ ಮತ್ತು ತ್ಯಾಗ ಭಾರತದ ಅವಳಿ ಆದರ್ಶಗಳು. ಹಳ್ಳಿಗಳೆಡೆಗೆ, ಕೊಳಚೆಗೇರಿಗಳೆಡೆಗೆ, ದೀನದರಿದ್ರರ ಕಡೆಗೆ ಸೋದರತ್ವದ, ಬಂಧುತ್ವದ ರಾಷ್ಟ್ರೀಯಭಾವದೊಂದಿಗೆ ಶಿಕ್ಷಣದ ಹಣತೆಯನ್ನು ಹಿಡಿದು ತೆರಳಬೇಕು. ಇಂಥ ಸೇವಾ ಆಂದೋಲನದ, ಶಿಕ್ಷಣದ ಆಂದೋಲನದ ಮೂಲಕ, ತನ್ನ ಮರೆತ ವ್ಯಕ್ತಿತ್ವವನ್ನು ಪ್ರತಿಯೊಬ್ಬ ಭಾರತೀಯನೂ ಗಳಿಸಿಕೊಳ್ಳಬೇಕು. ಆಮೂಲಕ ಭಾರತ

ಶಕ್ತಿಶಾಲಿಯಾಗಿ ಮಹಾಕಾಳಿಯಾಗಿ ಮೈಕೊಡವಿ ಮೇಲೆದ್ದು ನಿಲ್ಲಬೇಕು, ಜಗನ್ಮಾತೆಯಾಗಿ ಜಗವ ಸಲಹಬೇಕು ಎಂಬಂಥ ಪೂರ್ವ– ಪಶ್ಚಿಮಗಳನ್ನು, ಪರಾ–ಅಪರಾ ಜ್ಞಾನಗಳನ್ನು, ಇಹ–ಪರಗಳನ್ನು ಒಂದುಮಾಡುವ ಐಕ್ಯದ ಶಾಕ್ತದರ್ಶನದೊಂದಿಗೆ ಸ್ವಾಮಿ ವಿವೇಕಾನಂದರು ಭಾರತಕ್ಕೆ ಅನುಷ್ಠಾನ ವೇದಾಂತದ ಮಹಾಮಾರ್ಗವನ್ನು ತೋರಿದರು.

ಚೆನ್ನೈನ ಸ್ಟೂಡೆಂಟ್ ಹೋಂ ಒಂದು ಜಡ ಕಟ್ಟಡವಲ್ಲ. ಸ್ವಾಮಿ ವಿವೇಕಾನಂದರ ಚಿಂತನೆಗಳ ಜೀವಂತ ಚೇತನ ಶರೀರ; ಪರಮಹಂಸರ ಅಂತರಾತ್ಮ; ಮಹಾಕಾಳಿಯ ಮಹಾಮಂದಿರ. ಸೇವೆ, ತ್ಯಾಗ, ಶಿಕ್ಷಣ, ಅಧ್ಯಾತ್ಮ, ಪ್ರೀತಿ, ಮನುಷ್ಯತ್ವ, ದೈವತ್ವ – ಒಟ್ಟಾರೆ ಪರಿಪೂರ್ಣ ಭಾರತೀಯ ದರ್ಶನದ ಕ್ರಿಯಾಸಾರ.

ಕ್ರಿಯೆ ಇಲ್ಲದ ಜ್ಞಾನ ಅಪ್ರಯೋಜಕ. ಜ್ಞಾನವಿಲ್ಲದ ಕ್ರಿಯೆ ಅಪಾಯಕಾರಿ. 'ಕ್ರಿಯೆ–ಜ್ಞಾನ', 'ಜ್ಞಾನ–ಕ್ರಿಯೆ' ಒಂದೇ ನಾಣ್ಯದ ಎರಡು ಮುಖಗಳು. ಅವು ಚೆನ್ನೈನ ರಾಮಕೃಷ್ಣ ಮಿಷನ್ ಸ್ಟೂಡೆಂಟ್ ಹೋಮ್‌ನ ಹೃದಯ–ಮಿದುಳುಗಳಂತೆ, ಪರಮಹಂಸ–ವಿವೇಕಾನಂದರ ಸಂಗಮದಂತೆ. ಈ ಮೌಲ್ಯಗಳೇ ಸ್ಟೂಡೆಂಟ್ ಹೋಮಿನ ಮೂಲಕ ಒಂದು ಶತಮಾನದುದ್ದಕ್ಕೂ ಬಡಜನರ, ದೀನ ಅನಾಥರ ಉದ್ಧಾರಕ್ಕಾಗಿ, ಅವರ ಅಂತರಂಗದಲ್ಲಿ ದಿವ್ಯವ್ಯಕ್ತಿತ್ವ ನಿರ್ಮಾಣಕ್ಕಾಗಿ ಶ್ರಮಿಸಿವೆ; ಆ ಮೂಲಕ ಭಾರತವನ್ನು ಬಲಗೊಳಿಸಿವೆ.

ಆಗ ಚೆನ್ನೈನಲ್ಲಿ ರಾಮಕೃಷ್ಣ ಮಠದ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ರಾಮಕೃಷ್ಣಾನಂದಜಿ ಅವರ ಬಳಿ ಮೈಸೂರಿನ ಅನಾಥ ಬಾಲಕನೊಬ್ಬ ಆಶ್ರಯ ಕೋರಿ ಬಂದಿದ್ದ. ಆತನ ತಂದೆ ತಾಯಿ ಪ್ಲೇಗ್ ರೋಗದಿಂದ ಕಾಲವಾಗಿದ್ದರು. ಮೈಸೂರಿನಿಂದ ಚೆನ್ನೈಗೆ ಹೋದ ಹುಡುಗ ಅನೇಕರ ಬಳಿ ಆಶ್ರಯ ಕೋರಿದ. ಯಾರಿಂದಲೂ ಸಹಾಯ ದೊರೆಯಲಿಲ್ಲ. ಕಡೆಗೆ ಸ್ವಾಮಿ ರಾಮಕೃಷ್ಣಾನಂದಜಿ ತಮ್ಮ ಮಠದಲ್ಲಿ ಆಶ್ರಯ ನೀಡಿದರು. ಆದರೆ ಆ ಹುಡುಗನಿಗೆ ಕಾಲೇಜಿನ ಸಮಯಕ್ಕೆ ಸರಿಯಾಗಿ ಊಟೋಪಚಾರದ ವ್ಯವಸ್ಥೆ ಮಾಡಲು ಸ್ವಾಮಿಗಳಿಗೆ ಆಗಲಿಲ್ಲ. ಇದರಿಂದ ಆತನಿಗೆ ಸರಿಯಾಗಿ ಓದಲಾಗುತ್ತಿರಲಿಲ್ಲ. ಅಲ್ಲಿನ ವಾಸ ಅವನಿಗೆ ಹೊಂದಿಕೆಯಾಗಿರಲಿಲ್ಲ. ಇದನ್ನು ಅರಿತ ಸೂಕ್ಷ್ಮ ಮನಸ್ಸಿನ ಸ್ವಾಮೀಜಿಯವರು ಶ್ರೀ ರಾಮಸ್ವಾಮಿ ಐಯ್ಯಂಗಾರ್ (ರಾಮು) ಎಂಬ ಭಕ್ತರ ಬಳಿ ಆ ಹುಡುಗನಂಥವರ ಬಗೆಗಿನ ತಮ್ಮ ಕಳಕಳಿಯನ್ನು ತೋಡಿಕೊಂಡರು. ಇಂಥವರ ಸೇವಾಕಾರ್ಯವನ್ನು ಮಾಡುವುದು ಹೇಗೆ? ಇದಕ್ಕೆ ಸಹಾಯ ಮಾಡುವವರು ಯಾರು? ಈ ಕುರಿತು ಏನು ಮಾಡಬಹುದು? ಎಂಬ ಆಲೋಚನೆಗಳನ್ನು ರಾಮು ಅವರ ಬಳಿ ಹಂಚಿಕೊಂಡರು. ರಾಮು ಪ್ರಯತ್ನಿಸಿದರು. ಅದರ ಪರಿಣಾಮವೇ ಇಂದಿನ ಚೆನ್ನೈನ ಸ್ಟೂಡೆಂಟ್ ಹೋಂ.

ಈ ಸೇವಾಕಾರ್ಯಕ್ಕಾಗಿ ಡಾ. ಎಂ. ಸಿ. ನಂಜುಂಡರಾವ್ ಅವರು ತಮ್ಮ ಒಂದು ಮನೆಯನ್ನು ಉಚಿತವಾಗಿ ನೀಡಿದರು. ಮೈಸೂರಿನ ಅನಾಥ ಹುಡುಗನಂಥ ಹತ್ತಾರು ಹುಡುಗರಿಗೆ ಈ ಸ್ಟೂಡೆಂಟ್ ಹೋಂ ಆಶ್ರಯ ನೀಡಿತು. ೧೯೦೫ರಲ್ಲಿ ೭ ವಿದ್ಯಾರ್ಥಿಗಳಿದ್ದರು. ೪೫೦ ರೂಪಾಯಿಗಳ ದೇಣಿಗೆ ಬಂತು. ಎರಡನೆಯ ವರ್ಷ ೧೦೫೦ ರೂಪಾಯಿ ದೇಣಿಗೆ ದೊರೆಯಿತು. ಆದರೆ ಮೂರನೆಯ ವರ್ಷ ದೇಣಿಗೆ ೨೫೦ಕ್ಕೆ ಕುಸಿಯಿತು. ಸ್ಟೂಡೆಂಟ್ ಹೋಮ್ ನಡೆಸುವುದು ಕಷ್ಟವಾಯಿತು. ಹಲವರು 'ಇದು ಸಾರ್ವಜನಿಕ ಹಣದ ವ್ಯರ್ಥ ವ್ಯಯ' ಎಂದು ಟೀಕಿಸಿದರು. ಸಹಾಯ ನಿಲ್ಲಿಸಿದರು. ಆದರೂ ಎದೆಗುಂದದೆ ಮುನ್ನಡೆದ ಕಾರಣ ಹಲವರ ಸಹಕಾರ ದೊರೆತು ಸಂಸ್ಥೆ ಬೆಳೆಯಿತು. ದೀನದುರ್ಬಲರ ಸೇವೆ ಮುಂದುವರೆಯಿತು.

೧೯೧೭ರಲ್ಲಿ ಶ್ರೀ. ಎಸ್. ಜಿ. ಶ್ರೀನಿವಾಸಾಚಾರ್ಯ ಅವರು ಮೈಲಾಪುರದಲ್ಲಿನ ವಿಶಾಲವಾದ ಜಾಗವನ್ನು ದಾನ ಮಾಡಿದರು. ಈ ನಡುವೆ ಸ್ವಾಮಿ ರಾಮಕೃಷ್ಣಾನಂದಜಿ ದೇಹತ್ಯಾಗ ಮಾಡಿದರು. ಶ್ರೀ ರಾಮಸ್ವಾಮಿ ಐಯ್ಯಂಗಾರ್ ಸ್ಟೂಡೆಂಟ್ ಹೋಂ ಅನ್ನು ಮುನ್ನಡೆಸುವ ಬಗ್ಗೆ ಚಿಂತಾಕ್ರಾಂತರಾದರು. ಆದರೆ ಸ್ವಾಮಿ ರಾಮಕೃಷ್ಣಾನಂದರು ಹೇಳಿದ್ದರು, "ಇದನ್ನು ಮುನ್ನಡೆಸಲು ಗುರುಮಹಾರಾಜರ ಆಶೀರ್ವಾದವಿರುತ್ತದೆ, ಅನುಗ್ರಹವಿರುತ್ತದೆ" ಎಂದು. ಆ ಸಂದರ್ಭದಲ್ಲಿ ಚೆನ್ನೈಗೆ ಆಗಮಿಸಿದ ರಾಮಕೃಷ್ಣ ಮಹಾಸಂಘದ ಪರಮಾಧ್ಯಕ್ಷರಾದ ಸ್ವಾಮಿ ಬ್ರಹ್ಮಾನಂದಜಿ ಮಹಾರಾಜ್ ಸ್ಟೂಡೆಂಟ್ ಹೋಂ ಏಳ್ಗೆಗೆ ತಮ್ಮ ಆಶೀರ್ವಾದವನ್ನು ನೀಡಿದರು.

೧೯೧೭ರಿಂದ ೧೯೨೧ರ ನಡುವೆ ಸ್ಟೂಡೆಂಟ್ ಹೋಂನ ಪ್ರಧಾನ ಕಟ್ಟಡ ಸುಂದರವಾಗಿ ಮೇಲೆದ್ದು ನಿಂತಿತು. ಸುವ್ಯವಸ್ಥಿತ ವಸತಿಯ ಜೊತೆಗೆ ವಸತಿ ಪ್ರೌಢಶಾಲೆಯನ್ನೂ ಆರಂಭಿಸಲಾಯಿತು. ೧೯೨೨ರಿಂದ ೧೯೨೪ರ ನಡುವೆ ವಸತಿ ಪ್ರೌಢಶಾಲೆಯ ಕಟ್ಟಡವನ್ನು ನಿರ್ಮಿಸಲಾಯಿತು. ತನ್ನದೇ ಆದ ಅಸ್ಮಿತೆಯನ್ನು ಹೊಂದಿದ ಸಂಶೋಧನಾತ್ಮಕವಾದ ಹೊಸ ಕೈಗಾರಿಕಾ ಶಾಲೆಯನ್ನೂ ತೆರೆಯಲಾಯಿತು. ಇದು ದಕ್ಷಿಣಭಾರತದಲ್ಲೇ ಇಂಥ ಮೊದಲ ಶಾಲೆ. ಇಂಥ ಶಾಲೆಗಳನ್ನು ೧೯೬೦ರ ಅನಂತರ ಪಾಲಿಟೆಕ್ನಿಕ್ ಕಾಲೇಜುಗಳೆಂದು ಕರೆಯಲಾಗುತ್ತಿದೆ. ಅಧ್ಯಾತ್ಮ ಹಾಗೂ ಆಧುನಿಕ ವಿಜ್ಞಾನ – ತಂತ್ರಜ್ಞಾನದ ಸಂಗಮದ ಮೂಲಕ ಭಾರತವನ್ನು ದೀನ, ದರಿದ್ರ, ದುಃಖಿತರಿಲ್ಲದ ಭಾರತವನ್ನಾಗಿ ಕಟ್ಟಬೇಕಾಗಿದೆ ಎಂಬ ವಿವೇಕಾನಂದರ ಚಿಂತನೆ ಇಲ್ಲಿ ನನಸಾಗಿದೆ. ಅದಕ್ಕಾಗಿಯೇ ಪಾಲಿಟೆಕ್ನಿಕ್ ಶಾಲೆಯ ಜೊತೆಗೆ ಗುರುಕುಲವನ್ನು ಪ್ರಾರಂಭಿಸಲಾಗಿದೆ. ಇದು ಕೇವಲ ಮಾಹಿತಿಯ ಗುರುಕುಲವಲ್ಲ. ಇದು ವ್ಯಕ್ತಿನಿರ್ಮಾಣ ಹಾಗೂ ಸಚ್ಚಾರಿತ್ರದ ನಿರ್ಮಾಣದ ಮೂಲಕ ರಾಷ್ಟ್ರನಿರ್ಮಾಣದ ಸಾಧನೆಯ ಮಹಾ ಆಲಯ; ವಿದ್ಯಾರ್ಥಿ ಶಕ್ತಿಯನ್ನು ರಾಷ್ಟ್ರಶಕ್ತಿಯನ್ನಾಗಿಸಿರುವ ದೇವಾಲಯ.

ಚೆನ್ನೈನ ಸ್ಟೂಡೆಂಟ್ ಹೋಂ ೧೯೦೫ರಲ್ಲಿ ೭ ವಿದ್ಯಾರ್ಥಿಗಳೊಂದಿಗೆ ಪ್ರಾರಂಭವಾಗಿ ೧೯೩೦ರ ಹೊತ್ತಿಗೆ ೧೪೨ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿತ್ತು. ಈ ಹೋಂಗೆ ೧೯೧೪ರಲ್ಲಿ ಅನಿಬೆಸೆಂಟ್, ೧೯೧೫ರಲ್ಲಿ ಮಹಾತ್ಮ ಗಾಂಧೀಜಿ, ೧೯೧೭ರಲ್ಲಿ ಸರೋಜಿನಿ ನಾಯ್ಡು, ೧೯೨೨ರಲ್ಲಿ ಲಾರ್ಡ್ ವಿಲ್ಲಿಂಗಟನ್ ಮೊದಲಾದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಹನೀಯರು ಭೇಟಿ ನೀಡಿ ಬೆರಗಾಗಿದ್ದಾರೆ, ಪ್ರೇರಣೆ ಪಡೆದಿದ್ದಾರೆ; ಮೆಚ್ಚುಗೆಯ ನುಡಿಗಳನ್ನಾಡಿದ್ದಾರೆ; ಇಂಥ ಕೇಂದ್ರಗಳ ಮಹತ್ವವನ್ನು ಅರಿತಿದ್ದಾರೆ.

ಇಂದಿಗೂ ಯಾವುದೇ ರೀತಿಯ ಜಾತಿ, ಮತ, ಪಂಥ, ಭಾಷೆ, ಬಣ್ಣಗಳ ತಾರತಮ್ಯವಿಲ್ಲದೆ ರಾಷ್ಟ್ರೀಯ ಸಾಮರಸ್ಯದ, ದೈವಿಕ ವ್ಯಕ್ತಿತ್ವದ ಕಾಂತಿಯ ಶಾಂತಿಯ ಕೇಂದ್ರವಾಗಿ ಚೆನ್ನೈನ ರಾಮಕೃಷ್ಣ ಮಿಷನ್ ಸ್ಟೂಡೆಂಟ್ ಹೋಂ ಸ್ವಾಮಿ ವಿವೇಕಾನಂದರು ಬಯಸಿದ ಭಾರತವನ್ನು ಅನುಷ್ಠಾನ ವೇದಾಂತದ ಮೂಲಕ ಕಟ್ಟುತ್ತಿದೆ. ದೇಶದ ಪ್ರತಿಯೊಂದು ಊರಿನಲ್ಲಿಯೂ ಇಂಥ ಪ್ರಯತ್ನಗಳು ಆಗಬೇಕು.

ಸ್ವಾಮಿ ವಿವೇಕಾನಂದರ ೧೫೦ನೆಯ ಜಯಂತಿಯ ಈ ವರ್ಷ ಭಾರತದ ಪ್ರತಿ ಮನುಷ್ಯನ ಮನಸ್ಸಿನಲ್ಲಿಯೂ, ಪ್ರತಿಯೊಂದು ಮನೆಯಲ್ಲಿಯೂ **'ಚೆನ್ನೈನ ಸ್ಟೂಡೆಂಟ್ ಹೋಂ'** ನಿರ್ಮಾಣವಾಗಬೇಕು. ಅದಕ್ಕಾಗಿ ಭಾರತದ ಸನಾತನ ಶಕ್ತಿ ಯನ್ನೂ ಸಂಸ್ಕೃತಿಯನ್ನೂ ಅರಿವನ್ನೂ ಪರಮಹಂಸರಂತೆ, ವಿವೇಕಾನಂದರಂತೆ ಕಾಳಿಯ ಪದತಲದಿಂದ ಹಿಡಿದು ಕನ್ಯಾಕುಮಾರಿಯ ಪದತಲದವರೆಗೂ ನಡೆದು ಭಾರತದ ಭೂತ–ವರ್ತಮಾನ–ಭವಿಷ್ಯದ ನಾಡಿಯನ್ನು ಹಿಡಿದು ನಮ್ಮ ಒಳಗೆ ಒಬ್ಬ ಕಾಳಿ, ಒಬ್ಬ ಕನ್ಯಾಕುಮಾರಿ, ಒಬ್ಬ ಭಾರತಮಾತೆಯನ್ನು ಪ್ರತಿಷ್ಠಾಪಿಸಿಕೊಳ್ಳಬೇಕು. ಅದಕ್ಕಾಗಿ ಸ್ವಾಮಿ ರಾಮಕೃಷ್ಣಾನಂದರಂಥ ಮಹಾಪುರುಷರು ಮೈಸೂರಿನ ಅನಾಥ ಹುಡುಗನಂಥ ಲಕ್ಷಾಂತರ ಮಕ್ಕಳ ಭವಿಷ್ಯಕ್ಕಾಗಿ ಸೇವೆ ಹಾಗೂ ತ್ಯಾಗದ ಮಹಾಮಾರ್ಗವನ್ನು ತೋರಿದ್ದಾರೆ. ಅದರಿಂದ ಆ ಮಕ್ಕಳು ಮಹಾಪುರುಷಸಿಂಹರಾಗುತ್ತಾರೆ. **'ದನಗಾಹಿ ಬಾಲಕರು ಆದಾರು ರಾಷ್ಟ್ರರಥ ಚಾಲಕರು'** ಎಂಬ ಕವಿವಾಣಿ ನನಸಾಗುತ್ತದೆ. ಅದಕ್ಕೆ ರಾಮಕೃಷ್ಣ ವಿವೇಕಾನಂದರ ಕಾವಿನಲ್ಲಿ ಕೆ.ವಿ ಪುಟ್ಟಪ್ಪ ಮಹಾಕವಿ, ರಾಷ್ಟ್ರಕವಿ, ರಸಋಷಿ 'ಕುವೆಂಪು' ಆಗಿ ರೂಪಾಂತರಗೊಂಡು ಅನಿಕೇತನವಾದ ಚೇತನಕ್ಕೆ ಆಶ್ರಯ ನೀಡಿದ್ದ ಮೈಸೂರಿನ ಶ್ರೀರಾಮಕೃಷ್ಣ ಆಶ್ರಮವೂ ಒಂದು ಉತ್ತಮ ಉದಾಹರಣೆ.

ಎಲ್ಲಾ ಮಠಗಳ ಬಾಗಿಲು, ಎಲ್ಲಾ ಮನೆಗಳ ಬಾಗಿಲು, ಎಲ್ಲಾ ಮನಸ್ಸುಗಳ ಬಾಗಿಲು, ಎಲ್ಲಾ ದೇವಾಲಯಗಳ ಬಾಗಿಲು, ಎಲ್ಲಾ ಅರಿವಿನ, ಆನಂದದ ಬಾಗಿಲುಗಳು ಎಲ್ಲಾ ದೀನ, ದರಿದ್ರ, ದಲಿತ, ದುಃಖಿತ, ಅಸಹಾಯಕ ಮೂರ್ಖರಿಗೂ ತೆರೆಯುವಂತಾಗಬೇಕೆಂಬುದು ಇಂಥ ಚಿಂತನೆ ಹಾಗೂ ಸೇವಾಕಾರ್ಯದ ಮಹಾ ಆದರ್ಶ. ನಮ್ಮ ಕಾಲದ ದೇವರು ದೀನದರಿದ್ರ ದುಃಖಿತರು. ಅವರ ಸೇವೆ ಈಶನ ಸೇವೆ. ಅವರ ಶಕ್ತಿ ವಿಶ್ವದ ಶಕ್ತಿ. ಅದರಿಂದ ತಾಯಿ ಭಾರತಿ ಜಗದ್ಗುರು ಭಾರತಿ, ಜಗನ್ಮಾತೆ ಭಾರತಿ ಆಗುತ್ತಾಳೆ.

ಅದಕ್ಕಾಗಿ ೧೯೦೫ರಲ್ಲಿ ಪ್ರಾರಂಭವಾದ ಚೆನ್ನೈನ ರಾಮಕೃಷ್ಣ ಮಿಷನ್ ಸ್ಟೂಡೆಂಟ್ ಹೋಂ ೨೦೦೫ರ ಶತಮಾನೋತ್ಸವದ ಹೊಸ್ತಿಲನ್ನು ದಾಟಿ ಬಂದಿದೆ. ಸೇವೆಯ ಸಾಧನೆ ಹಾಗು ಸಂದೇಶವನ್ನು ಹೊತ್ತು ತಂದಿದೆ. ಅದನ್ನು ನಾವು ನಮ್ಮ ಮನ–ಮನೆಗಳಲ್ಲಿ ತುಂಬಿಸಿಕೊಳ್ಳೋಣ.

**ಈ ಜೀವನ ಅಶಾಶ್ವತವಾದುದು, ಜಗತ್ತಿನ ಅಹಂಕಾರಗಳು ಕ್ಷಣಿಕವಾದುವು. ಆದರೆ ಯಾರು ಇತರರಿಗಾಗಿ ಜೀವಿಸುತ್ತಾರೋ, ಅವರು ಮಾತ್ರವೇ ಜೀವಿಸುತ್ತಾರೆ. ಉಳಿದವರು, ಜೀವಂತವಾಗಿರುವುದಕ್ಕಿಂತ ಹೆಚ್ಚಾಗಿ ಸತ್ತಂತೆಯೇ ಇರುತ್ತಾರೆ.**

*– ಸ್ವಾಮಿ ವಿವೇಕಾನಂದ*

# ನರೇಂದ್ರಪುರ ರಾಮಕೃಷ್ಣ ಮಿಷನ್ ಆಶ್ರಮ

**ಕೆ.ಆರ್. ಮೋಹನ್**

ರಾಮಕೃಷ್ಣ ಮಿಷನ್ನಿನ ಅತಿದೊಡ್ಡ ಶೈಕ್ಷಣಿಕ ಕೇಂದ್ರಗಳಲ್ಲಿ ಒಂದಾದ ನರೇಂದ್ರಪುರ ಆಶ್ರಮದ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಟ್ಟಿರುವ ಲೇಖಕರು ನಿವೃತ್ತ ಬ್ಯಾಂಕ್ ಅಧಿಕಾರಿಗಳು. ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರಾಗಿರುವ ಇವರ ಲೇಖನಗಳು ವಿವೇಕಪ್ರಭ ಪತ್ರಿಕೆಯಲ್ಲಿ ನಿಯಮಿತವಾಗಿ ಪ್ರಕಟವಾಗುತ್ತಲಿವೆ.






ನನ್ನ ಸೇವಾವಧಿಯಲ್ಲಿ, ೧೯೬೬–೧೯೮೮ ನೇ ಇಸವಿಯಲ್ಲಿ, ಕೊಲ್ಕತಾದಲ್ಲಿ ಕೆಲಸ ಮಾಡುವ ಸುಕೃತ ದೊರೆಯಿತು. ಇದರಿಂದ ಮೇಲಿಂದ ಮೇಲೆ ಬೇಲೂರು ಮಠ, ಉದ್ಬೋಧನ ಹಾಗೂ ದಕ್ಷಿಣೇಶ್ವರ ಪಾವನ ಕ್ಷೇತ್ರಗಳಿಗೆ ಹೋಗಲು ಅವಕಾಶವಾಗುತ್ತಿತ್ತು. ಇದರ ಜೊತೆಗೆ, ಆಶ್ರಮದ ಒಬ್ಬ ಸ್ವಾಮೀಜಿಯವರ ಪರಿಚಯವಾಗಿ, ನರೇಂದ್ರಪುರ ಆಶ್ರಮಕ್ಕೂ ಆಗಾಗ ಹೋಗುತ್ತಿದ್ದೆ. ಬಾಕಿ ಎಲ್ಲಾ ಆಶ್ರಮಗಳಿಗಿಂತ ಇದು ವಿಭಿನ್ನವಾಗಿದೆ. ಏಕೆಂದರೆ, ಸ್ವಾಮಿ ವಿವೇಕಾನಂದರ ಕನಸುಗಳನ್ನು ಕಾರ್ಯಗತ ಮಾಡುವ ಸಫಲ ಪ್ರಯತ್ನಗಳು ಇಲ್ಲಿ ನಡೆಯುತ್ತಿದೆ. ಇಲ್ಲಿ ಶಿಕ್ಷಣ ಮತ್ತು ಪ್ರಶಿಕ್ಷಣಕ್ಕೆ ಪ್ರಾಮುಖ್ಯತೆ. ನನ್ನ ಮಟ್ಟಿಗೆ ನರೇಂದ್ರಪುರ ಆಶ್ರಮ ೨೦ನೇ ಶತಮಾನದ ಆಧುನಿಕ ದೇಗುಲ.

**ಹಿನ್ನೆಲೆ :** ೧೯೪೩ರಲ್ಲಿ ಬಂಗಾಳದಲ್ಲಿ ಭೀಕರ ಬರಗಾಲ ಬಂದು, ಜನರು ಕಂಗಾಲಾಗಿದ್ದರು. ಅವರಿಗೆ ಸಾಂತ್ವನ ಮತ್ತು ಭರವಸೆ ಕೊಡಲು ಕೊಲ್ಕತಾದ ಉತ್ತರ ಭಾಗದಲ್ಲಿರುವ ಪಾಥೂರಿಯಾ ಘಾಟ್ ಎಂಬ ಪ್ರದೇಶದಲ್ಲಿ ರಾಮಕೃಷ್ಣ ಮಿಷನ್ ಆಶ್ರಮ ಪ್ರಾರಂಭವಾಯಿತು. ಮೊದಲು ಬಡ ಮತ್ತು ಅನಾಥ ಬಾಲಕರಿಗೆ ವಸತಿಸೌಕರ್ಯವನ್ನು ಒದಗಿಸಲಾಯಿತು. ಆಮೇಲೆ ಕೈಗೊಂಡ ರಚನಾತ್ಮಕ ಚಟುವಟಿಕೆಗಳಿಗೆ ಸ್ಥಳ ಸಾಲದೆ, ಕೊಲ್ಕತ್ತದಿಂದ ೧೬ ಕಿ.ಮೀ. ದಕ್ಷಿಣ ದಿಕ್ಕಿನಲ್ಲಿರುವ ಘಾರಿಯಾ ಎಂಬ ವಿಶಾಲ ಪ್ರದೇಶಕ್ಕೆ ೧೯೫೭ ರಲ್ಲಿ ಆಶ್ರಮವನ್ನೂ ಸ್ಥಳಾಂತರಿಸಿ. ಆ ಪ್ರದೇಶವನ್ನು 'ನರೇಂದ್ರಪುರ' ಎಂದು ನಾಮಕರಣ ಮಾಡಲಾಯಿತು.

**ಆಶ್ರಮದ ಅಂಗ ಸಂಸ್ಥೆಗಳು : ರಾಮಕೃಷ್ಣ ಮಿಷನ್ ವಿದ್ಯಾಲಯ** : ಈ ವಸತಿಶಾಲೆಯು ತಾರೀಖು ೨೨–೦೪–೧೯೫೮ರಂದು ಸ್ಥಾಪನೆಯಾಯಿತು. ಇಲ್ಲಿ ಬಂಗಾಳಿ ಮತ್ತು ಇಂಗ್ಲೀಷ್ ಮಾಧ್ಯಮಗಳ ಮೂಲಕ ಪ್ರೌಢಶಿಕ್ಷಣ (Higher Secondary) ಮತ್ತು ಪದವಿಪೂರ್ವ (+ ೨) ಶಿಕ್ಷಣವನ್ನು ನೀಡಲಾಗುತ್ತಿದೆ. ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವಾಗ ಬಡ, ಶೋಷಿತ, ವಿಕಲಾಂಗ ಹಾಗೂ ನಿಮ್ನ ವರ್ಗದವರಿಗೆ ಆದ್ಯತೆ. ಇಲ್ಲಿನ ವಿದ್ಯಾರ್ಥಿಗಳ ಸಂಖ್ಯೆ ಸುಮಾರು ೧,೫೦೦. ಕಳೆದ ೧೦ ವರ್ಷಗಳಲ್ಲಿ ಪಶ್ಚಿಮ ಬಂಗಾಳ ಸರಕಾರ ನಡೆಸುವ ಪಬ್ಲಿಕ್ ಪರೀಕ್ಷೆಯಲ್ಲಿ, ಶೇಕಡ ನೂರಕ್ಕೆ ನೂರು ವಿದ್ಯಾರ್ಥಿಗಳು ಉತ್ತಮ ಮಟ್ಟದಲ್ಲಿ (Distinction) ಉತ್ತೀರ್ಣರಾಗಿದ್ದಾರೆ.



**ರಾಮಕೃಷ್ಣ ಮಿಷನ್ ರೆಸಿಡೆನಿಷಿಯಲ್ ಕಾಲೇಜು :** ಹೆಸರೇ ಸೂಚಿಸುವಂತೆ ಇದು ಕೂಡ ವಸತಿ ವಿದ್ಯಾಲಯ. ಇದು ೧೯೬೦ರಲ್ಲಿ ಸ್ಥಾಪನೆಯಾಯಿತು. ಇಂಗ್ಲಿಷ್ ಮಾಧ್ಯಮದ ಮೂಲಕ ಪದವಿ ಮತ್ತು ಸ್ನಾತಕೋತ್ತರ ಪದವಿ ಶಿಕ್ಷಣಗಳ ವ್ಯವಸ್ಥೆ ಇಲ್ಲಿದೆ. ಸುಮಾರು ೩೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ಇಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ಇಲ್ಲಿನ ಫಲಿತಾಂಶಗಳು ಕೂಡ ಶೇಕಡ ನೂರಕ್ಕೆ ನೂರು.

**ಸಮಗ್ರ ಗ್ರಾಮೀಣ ಅಭಿವೃದ್ಧಿ ಮತ್ತು ವ್ಯವಸ್ಥಾಪನಾ ಪ್ರಶಿಕ್ಷಕ ಕೇಂದ್ರ** (Faculty Centre for Integrated Rural Development & Management) **:** ಇದೊಂದು ವಿನೂತನ ಶಿಕ್ಷಣ ಕೇಂದ್ರ. ಇಲ್ಲಿ ಎರಡು ವರ್ಷದ ಸ್ನಾತಕೋತ್ತರ (Post Graduate) ಶಿಕ್ಷಣವನ್ನು ನೀಡಿ ಉತ್ತಮ ಮಟ್ಟದ ಪ್ರಶಿಕ್ಷಕರನ್ನು ತಯಾರು ಮಾಡುತ್ತಾರೆ. ಮುಂದೆ ಇವರು ದೇಶಾದ್ಯಂತ ಸಮಗ್ರ ಗ್ರಾಮೀಣಾಭಿವೃದ್ಧಿ ಮತ್ತು ಬುಡಕಟ್ಟು ಜನಾಂಗ ಅಭಿವೃದ್ಧಿಯಲ್ಲಿ (Tribal Development) ತೊಡಗುವ ಹರಿಕಾರರಾಗುತ್ತಾರೆ. ಈ ಕೇಂದ್ರ ೨೦೦೫ರಲ್ಲಿ ಸ್ಥಾಪಿತವಾದ ರಾಮಕೃಷ್ಣ ಮಿಷನ್ ವಿವೇಕಾನಂದ ವಿಶ್ವವಿದ್ಯಾಲಯದ ಒಂದು ಅಂಗಸಂಸ್ಥೆಯಾಗಿದೆ.

**ಅಂಧ ಮಕ್ಕಳ ಶಾಲೆ** (Blind Boys Academy) **:** ಇದು ಅಂಧಮಕ್ಕಳಿಗೆ ಶಿಕ್ಷಣ ಕೊಡುವ ವಿಶೇಷ ಸೌಲಭ್ಯವುಳ್ಳ ಶಾಲೆ.

**ಇತರ ಸಂಸ್ಥೆಗಳು :** ಹೆಚ್ಚಿನ ಶಿಕ್ಷಣ ಪಡೆಯಲು ಸಾಧ್ಯವಾಗದ ವಿದ್ಯಾರ್ಥಿಗಳಿಗೆ ಆಟೊಮೊಬೈಲ್ ತರಬೇತಿ ಕೇಂದ್ರ (Automobile Training Centre), ಕೃಷಿ ತರಬೇತಿ ಕೇಂದ್ರ (Agriculture Training Center), ಲೋಕ ಶಿಕ್ಷಾ ಪರಿಷದ್ ಮತ್ತು ವಾಣಿಜ್ಯ ಕೇಂದ್ರಗಳಲ್ಲಿ (Commercial Institute) ವೃತ್ತಿಪರ ಶಿಕ್ಷಣ ನೀಡಿ, ಸ್ವ-ಉದ್ಯೋಗ ಮಾಡಿಕೊಳ್ಳಲು ಹಾಗೂ ಉದ್ಯೋಗ ಪಡೆಯುವ ಅರ್ಹತೆಯನ್ನು ಪಡೆಯಲು ಅವಕಾಶಗಳನ್ನು ಕಲ್ಪಿಸಿಕೊಡಲಾಗುತ್ತಿದೆ.

ನರೇಂದ್ರಪುರದ ಆಸುಪಾಸಿನಲ್ಲಿರುವ ಬಡ ವಿದ್ಯಾರ್ಥಿಗಳ ಸಲುವಾಗಿ ಒಂದು ರಾತ್ರಿ ಶಾಲೆ ಕೂಡ ನಡೆಯುತ್ತಿದೆ.

**ವಿಶೇಷತೆ:** ಇಲ್ಲಿನ ವಿದ್ಯಾಸಂಸ್ಥೆಗಳಲ್ಲಿ ಸಂಶೋಧನೆ ಮತ್ತು ಗ್ರಂಥ ಪ್ರಕಟನೆಗಳಿಗೆ ವಿಶೇಷ ಆದ್ಯತೆ ನೀಡಲಾಗಿದೆ. ಸಂಸ್ಕೃತಿ, ಕ್ರೀಡೆ, ದೈಹಿಕ ವ್ಯಾಯಾಮ ಮುಂತಾದ ಪಠ್ಯೇತರ ಚಟುವಟಿಕೆಗಳಿಗೆ ಮುಕ್ತ ಅವಕಾಶಗಳಿವೆ.

ಈ ಸಂಸ್ಥೆಗೆ ಪ್ರತಿಷ್ಠಿತ ಸಂಸ್ಥೆಗಳು, ಸಮಾಜದ ಗಣ್ಯವ್ಯಕ್ತಿಗಳು ಹಾಗೂ ಹಳೆಯ ವಿದ್ಯಾರ್ಥಿಗಳು ಉದಾರವಾಗಿ ದೇಣಿಗೆ ನೀಡಿದ್ದಾರೆ. ಇದರ ಫಲವಾಗಿ, ಅರ್ಹ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನದ ಸವಲತ್ತನ್ನು ಕಲ್ಪಿಸಿಕೊಡಲು ಸಾಧ್ಯವಾಗಿದೆ.

ಈ ಎಲ್ಲಾ ಸಂಸ್ಥೆಗಳಲ್ಲಿ ದಿವ್ಯತ್ರಯರ ಜಯಂತಿ, ಕಲ್ಪತರು ಉತ್ಸವ, ನರನಾರಾಯಣ ಶಿಬಿರ, ರಕ್ತದಾನ ಶಿಬಿರ ಮುಂತಾದ ಉತ್ಸವಗಳು ಮತ್ತು ರಚನಾತ್ಮಕ ಕಾರ್ಯಕ್ರಮಗಳನ್ನು ನಿಯಮಿತವಾಗಿ ಹಮ್ಮಿಕೊಳ್ಳಲಾಗುತ್ತಿದೆ.

ಸ್ವಾಮಿ ವಿವೇಕಾನಂದರ ಮಾನವ ನಿರ್ಮಾಣ ಮತ್ತು ವ್ಯಕ್ತಿತ್ವ ರೂಪಿಸುವ ಸಿದ್ಧಾಂತದ ಸಫಲ ಯತ್ನಗಳು ಮೇಲಿನ ಎಲ್ಲ ಸಂಸ್ಥೆಗಳಲ್ಲಿ ಕ್ರಮಬದ್ಧವಾಗಿ ನಡೆಯುತ್ತಿವೆ.

**ಸಾಮಾಜಿಕ ಕಳಕಳಿ :** ಕೊಳಚೆ ನಿರ್ಮೂಲನ ಮತ್ತು ಪುನರ್ವಸತಿ, ಹರಿಜನರ ಕ್ಷೇಮಾಭಿವೃದ್ಧಿ, ಕೃಷಿ ಸಾಗುವಳಿ, ವೈದ್ಯಕೀಯ ಸವಲತ್ತು, ಗಿಡಮೂಲಿಕೆಗಳ ಉದ್ಯಾನವನ ಮುಂತಾದ ಇನ್ನಿತರ ರಚನಾತ್ಮಕ ಕಾರ್ಯಗಳನ್ನು ಈ ಆಶ್ರಮದ ಅಡಿಯಲ್ಲಿರುವ ಸೇವಾಸಂಸ್ಥೆಗಳು ಜಾರಿಗೆ ತಂದಿವೆ.

**ಉಪಸಂಹಾರ :** ಸುಮಾರು ೨೦೦ ಎಕರೆ ವಿಸ್ತೀರ್ಣದಲ್ಲಿ ಹಲವಾರು ಸಂಸ್ಥೆಗಳು, ೨,೦೦೦ಕ್ಕೂ ಹೆಚ್ಚಿನ ವಿದ್ಯಾರ್ಥಿ ಸಮೂಹ, ಉದ್ಯಾನವನ, ಮಾವಿನ ತೋಪು, ಕೆರೆಗಳಿಂದ ಆವೃತವಾಗಿ ಹರಿದ್ವರ್ಣದಂತೆ ಶೋಭಿಸುವ ನರೇಂದ್ರಪುರ ಆಶ್ರಮವು ಕಣ್ಣಿಗೆ ಮತ್ತು ಮನಸ್ಸಿಗೆ ಮುದ ನೀಡುತ್ತದೆ. ಈ ತಾಣಕ್ಕೆ ಭೇಟಿಕೊಡುವುದೇ ಒಂದು ಆಧ್ಯಾತ್ಮಿಕ ಅನುಭವ.



# ಪುಣ್ಯ ನಗರಿಯಲ್ಲೊಂದು ಅಪೂರ್ವ ಸಂಸ್ಥೆ



## ರಾಮಕೃಷ್ಣ ಮಿಷನ್ ಸೇವಾಶ್ರಮ, ವಾರಾಣಸಿ

**ಪಿ. ಉಷಾ**

**ರಾಮಕೃಷ್ಣ ಮಿಷನ್ನಿನ ಅತ್ಯಂತ ಹಳೆಯ ಸೇವಾಸಂಸ್ಥೆಗಳಲ್ಲಿ ವಾರಾಣಸಿಯ ಸೇವಾಶ್ರಮವೂ ಒಂದು. ಸ್ವಾಮಿ ವಿವೇಕಾನಂದರೇ ಸ್ವಂತ ಇದಕ್ಕೆ ತಮ್ಮ ಆಶೀರ್ವಾದವನ್ನು ಮಾಡಿದ್ದಾರೆ; ಮನವಿಪತ್ರವನ್ನು ಬರೆದುಕೊಟ್ಟಿದ್ದಾರೆ. ಈ ಪುಣ್ಯ ಸಂಸ್ಥೆಯ ರೋಚಕ ಗಾಥೆಯನ್ನು ಬರೆದುಕೊಟ್ಟಿರುವ ಲೇಖಕಿ, ವಾರಾಣಸಿಯ ಈ ಸಂಸ್ಥೆಯಲ್ಲಿಯೇ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಹಲವು ಲೇಖನಗಳು ಈಗಾಗಲೇ ವಿವೇಕಪ್ರಭ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

ಸ್ವಾಮಿ ವಿವೇಕಾನಂದರೊಮ್ಮೆ ಸಂಘಟನಾಶಕ್ತಿಯ ಬಗ್ಗೆ ತಮ್ಮ ಗುರುಭ್ರಾತೃಗಳಿಗೆ ವಿವರಿಸುತ್ತಿದ್ದಾಗ, ಸ್ವಾಮಿ ಅದ್ಭುತಾನಂದರು ಕೇಳಿದರು, "ಸೋದರ, ಈ ಕ್ರಿಯಾ ಕಲಾಪಗಳನ್ನೇಕೆ ಪ್ರಾರಂಭಿಸಿರುವೆ? ಜಪ-ಧ್ಯಾನಗಳಿಗೆ ಇವು ಬಾಧಕವಲ್ಲವೇ?"

ಒಡನೆಯೇ ಸ್ವಾಮೀಜಿಯವರು ಗುಡುಗಿದರು, "ವೇದಿಕೆಯ ಮೇಲಿನ ದೇವರ ಪಟದೆದುರು ನಾಲ್ಕಾರು ಹೂವುಗಳನ್ನೆಸೆದು ಕರೆದಾಕ್ಷಣವೇ ಭಗವಂತನೇನು ನಿಮ್ಮೆದುರು ಬಂದು ನಿಲ್ಲುವನೆ? ಹೇಳು... ನೀವೆಲ್ಲಾ ಭಕ್ತರು! ಓಹ್, ನೀವು ಯಾವುದನ್ನು ಭಕ್ತಿ ಎನ್ನುವಿರೊ ಅದು ಮನುಷ್ಯನನ್ನು ದುರ್ಬಲಗೊಳಿಸುವ ಭಾವುಕತೆಯಷ್ಟೇ. ಅಂಥ ಭಕ್ತಿಯಿಂದೇನು ಪ್ರಯೋಜನ? ತಮ್ಮ ಸ್ವಂತ ಮುಕ್ತಿಯನ್ನು ಮಾತ್ರವೇ ಪಡೆಯುವುದರಲ್ಲಿ ನಿರತರಾಗಿ, ಪರರ ದುಃಖವನ್ನು ಕಂಡು ಮರುಗದ ಸ್ವಾರ್ಥಿಗಳಲ್ಲಿ ನನಗೆ ಯಾವ ಭರವಸೆಯೂ ಇಲ್ಲ. ನಿಮಗೆ ಗೊತ್ತೇನು? ಒಂದು ದಿನ ನಾನು ಗುರುದೇವ ರಾಮಕೃಷ್ಣರನ್ನು, 'ನಿರ್ವಿಕಲ್ಪ ಸಮಾಧಿಯಲ್ಲಿಯೇ ಮಗ್ನನಾಗಿರುವಂತೆ ಕರುಣಿಸಿ' ಎಂದು ಪ್ರಾರ್ಥಿಸಿದಾಗ ಅವರು ನಾನು ಸ್ವಾರ್ಥಿಯೆಂದೂ ಅತಿ ತುಚ್ಛ ಮನೋಭಾವದವನೆಂದೂ ಗದರಿಸಿದರು. ಅವರ ಆಣತಿಯಂತೆ ನಾನು ಕಾರ್ಯದಲ್ಲಿ ತೊಡಗುವೆ. ತಮಸ್ಸಿನಲ್ಲಿ ಮುಳುಗಿರುವ ನಮ್ಮ ದೇಶವಾಸಿಗಳನ್ನು ಎಚ್ಚರಗೊಳಿಸಿ ಸ್ವಾವಲಂಬಿಗಳಾಗಿ ಕರ್ಮಯೋಗಿಗಳನ್ನಾಗಿಸಲು ಸಾವಿರ ಸಲ ಘೋರ ನರಕಕ್ಕೂ ಸಂತೋಷದಿಂದ ಹೋಗಬಲ್ಲೆ."

ಹೀಗೆ ಹೇಳುತ್ತಲೇ ಅವರ ಕಂಠ ಗದ್ಗದವಾಯಿತು, ಕಣ್ಣುಗಳು ತುಂಬಿಬಂದುವು. ಅವರಿದ್ದ ಕೋಣೆಯನ್ನು ಬಿಟ್ಟು ಹೊರಟು ಹೋದರು. ಸೋದರಶಿಷ್ಯರು ಅವರನ್ನು ಸಂತೈಸಲು ಹೋದಾಗ ಮತ್ತೆ ಅವರೆಂದರು, "ನಾನು ರಾಮಕೃಷ್ಣರ ಗುಲಾಮ. ಅವರು ಬಿಟ್ಟು ಹೋದ ಕಾರ್ಯವನ್ನು ಪೂರ್ಣಗೊಳಿಸುವ ತನಕ

ನನಗೆ ಅದೆಲ್ಲಿಯ ವಿಶ್ರಾಂತಿ?" ೧೮೮೪ರಷ್ಟು ಹಿಂದೆಯೇ, ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರು ಸ್ವಾಮೀಜಿಯವರಿಗೆ, "ಮನುಜರನ್ನು ಭಗವಂತನೆಂದೇ ತಿಳಿದು ಅವರ ಸೇವೆಯನ್ನು ಮಾಡು" ಎಂದಿದ್ದರು.

ಈ ಹಿನ್ನೆಲೆಯಲ್ಲಿ ಶ್ರೀರಾಮಕೃಷ್ಣರ ಆದೇಶದಂತೆ ಹಾಗೂ ಸ್ವಾಮಿ ವಿವೇಕಾನಂದರ ಭಾವಾದರ್ಶಕ್ಕನುಗುಣವಾಗಿ ರಾಮಕೃಷ್ಣ ಮಹಾಸಂಘ ಸ್ಥಾಪನೆಯಾಯಿತು. ಅದರ ಹತ್ತಾರು ಶಾಖೆಗಳು ಅತಿ ಶೀಘ್ರದಲ್ಲಿಯೇ ದೇಶದಾದ್ಯಂತ ಹುಟ್ಟಿಕೊಂಡವು. ಅವುಗಳಲ್ಲಿ ಪುಣ್ಯನಗರಿ ವಾರಾಣಸಿಯಲ್ಲಿ ಒಂದು ಅಪೂರ್ವ ಸಂಸ್ಥೆ ಜನ್ಮ ತಾಳಿದ ವೃತ್ತಾಂತವು ಸ್ವಾರಸ್ಯಕರವೂ ಸ್ಫೂರ್ತಿದಾಯಕವೂ ಆಗಿದೆ.

ವಿಶ್ವವಿಜೇತ ಸ್ವಾಮಿ ವಿವೇಕಾನಂದರು ಪ್ರಥಮ ಬಾರಿ ಪಾಶ್ಚಾತ್ಯ ದೇಶಗಳಿಂದ ಕೊಲ್ಕತಾಗೆ ಮರಳಿದಾಗ ಅವರಿದ್ದ ಗಾಡಿಯ ಕುದುರೆಗಳನ್ನು ಬಿಚ್ಚಿ, ಹೆಮ್ಮೆಗೌರವಗಳಿಂದ ಗಾಡಿಯನ್ನು ಸ್ವತಃ ಎಳೆದ ಯುವಕರಲ್ಲಿ ಚಾರುಚಂದ್ರರೂ (ಮುಂದೆ ಸ್ವಾಮಿ ಶುಭಾನಂದ) ಒಬ್ಬರು. ಸ್ವಾಮೀಜಿಯವರಿಂದ ಸ್ಫೂರ್ತಿಯನ್ನು ಪಡೆದ ಅವರಿಗೆ ನಂತರ ಶ್ರೀರಾಮಕೃಷ್ಣರ ನೇರಶಿಷ್ಯರಲ್ಲಿ ಒಬ್ಬರಾದ ಸ್ವಾಮಿ ನಿರಂಜನಾನಂದರ ಸಂಸರ್ಗವೂ ವಿಶೇಷವಾಗಿ ಲಭಿಸಿತ್ತು. ನಂತರ ಅವರು ತಮ್ಮ ವೃದ್ಧ ಮಾತಾಪಿತರೊಡನೆ ಮುಕ್ತಿಕ್ಷೇತ್ರವೆಂದು ಪ್ರಸಿದ್ಧವಾದ ಕಾಶಿನಗರಿಯಲ್ಲಿ ನೆಲೆಸಿದರು; ಸಾಧನೆ–ಭಜನೆ–ಸಾಧುಸಂಗದಲ್ಲಿ ತೊಡಗಿದರು. ಜೊತೆಜೊತೆಗೆ ಪೂರ್ವಪರಿಚಿತರಾದ ಸ್ವಾಮಿ ಶುದ್ಧಾನಂದರಿಂದ ಪ್ರಕಟವಾಗುತ್ತಿದ್ದ 'ಉದ್ಬೋಧನ' ಪತ್ರಿಕೆಯ ಸಹಕಾರದಿಂದ ರಾಮಕೃಷ್ಣ–ವಿವೇಕಾನಂದರ ಅಧ್ಯಯನವನ್ನು ಕೈಗೊಂಡರು. ಅವರೊಡನೆ ಸಮವಯಸ್ಕ ಹಾಗೂ ಸಮಮನಸ್ಕ ಸಂಗಡಿಗರಾದ ಕೇದಾರನಾಥ ಮಲ್ಲಿಕ್ (ಮುಂದೆ ಕೇದಾರ ಬಾಬಾ–ಸ್ವಾಮಿ ಅಚಲಾನಂದ), ಜಾಮಿನಿ ರಂಜನ್ ಮಜುಮ್ದಾರ್, ಹರಿದಾಸ ತಯೇದಾರ್ (ಮುಂದೆ ಸ್ವಾಮಿ ಸದಾಶಿವಾನಂದ) ಇದ್ದರು. ಇದೇ ಸಮಯದಲ್ಲಿ ಸ್ವಾಮಿ ನಿರಂಜನಾನಂದರು ಕಾಶಿಗೆ ಬಂದರು. ಅವರನ್ನು ತಮ್ಮಲ್ಲಿಗೆ ಆಮಂತ್ರಿಸಿದ ಯುವಕರು ಅವರ ದಿವ್ಯ ಉಪಸ್ಥಿತಿ ಹಾಗೂ ಸ್ಫೂರ್ತಿ ನುಡಿಗಳಿಂದ ಪ್ರಭಾವಿತರಾದರು.

ಸ್ವಾಮಿ ನಿರಂಜನಾನಂದರು ಹರಿದ್ವಾರಕ್ಕೆ ತೆರಳಿದ ಸ್ವಲ್ಪ ಸಮಯದಲ್ಲೇ ಕಾಶಿಗೆ ಬಂದ ಸ್ವಾಮಿ ಕಲ್ಯಾಣಾನಂದರು ಕೇದಾರನಾಥರ ಮನೆಯಲ್ಲಿ ತಂಗಿದ್ದರು. ಸ್ವಾಮಿ ಕಲ್ಯಾಣಾನಂದರು ಸ್ವಾಮಿ ವಿವೇಕಾನಂದರ ಶಿಷ್ಯರು; ಹರಿದ್ವಾರದ ಕನ್‌ಖಲ್‌ನಲ್ಲಿರುವ ಸೇವಾಶ್ರಮದ ಸ್ಥಾಪಕರು. ಅವರ ಭಾವಭರಿತ ನುಡಿಗಳು ಚಾರುಚಂದ್ರ ಮುಂತಾದವರ ಮನದಲ್ಲಿ ಸ್ವಾಮೀಜಿಯವರ ಭಾವಾದರ್ಶಗಳನ್ನು ಸದೃಢಗೊಳಿಸಿದವು. ಚಾರುಚಂದ್ರರ ನೇತೃತ್ವದಲ್ಲಿ ವಾರಾಣಸಿಯಲ್ಲಿ ಸದ್ದುಗದ್ದಲವಿಲ್ಲದೆ ಸುಸಂಸ್ಕೃತ ಆದರ್ಶ ಯುವಕರ ಸಂಘವೊಂದು ಮೂಡಿಬಂತು. ಈ ಸಂಘದ ಗೋಷ್ಠಿಗಳಲ್ಲಿ 'ಉದ್ಬೋಧನ' ಪತ್ರಿಕೆಯ ಲೇಖನಗಳನ್ನು ಓದುತ್ತಿದ್ದಂತೆ, ಅಲ್ಲಿ ಮೂಡಿಬರುತ್ತಿದ್ದ ಸ್ವಾಮಿ ವಿವೇಕಾನಂದರ ವೇದಾಂತವಾಣಿಗಳು ಯುವಕರ ಹೃನ್ಮನಗಳಲ್ಲಿ ಗಾಢವಾದ ಪ್ರಭಾವವನ್ನು ಬೀರಿದವು. ಒಂದು ದಿನ ಚಾರುಚಂದ್ರರು ಬಂಧುಗಳನ್ನುದ್ದೇಶಿಸಿ ಹೀಗೆ ನುಡಿದರು: "ಸ್ವಾಮೀಜಿಯವರ ಉಕ್ತಿಗಳನ್ನಾಲಿಸಿರಿ – 'ನೀವೇನು ಕಣ್ಣುಮುಚ್ಚಿ ಮೂಲೆಯಲ್ಲಿ ಕುಳಿತಿರುವಿರಾ? ನಿಮ್ಮೆದುರು ಇರುವ ವ್ಯಾಧಿಪೀಡಿತ, ದುಃಖ ದಾರಿದ್ರ್ಯದಲ್ಲಿ ನರಳಾಡುವ ಮನುಜರು ನಿಮಗೆ ಕಾಣುವುದಿಲ್ಲವೇ? ಅವರೇ ನಮ್ಮ ದೇವರು – ನಮ್ಮ ನಾರಾಯಣ – ನಮ್ಮ ಶಿವ.' ಸೋದರ ಜಾಮಿನಿ, ಕೇಳು. ಸ್ವಾಮೀಜಿಯವರೆನ್ನುತ್ತಾರೆ, 'ಜಗತ್ತಿನ ಪ್ರತಿಯೊಂದು ಜೀವಿಯಲ್ಲಿಯೂ ಭಗವಂತನು ನೆಲೆಸಿರುತ್ತಾನೆ. ಸರ್ವಭೂತಗಳಲ್ಲಿ ಬ್ರಹ್ಮತತ್ತ್ವವು ವಿರಾಜಮಾನವಾಗಿರುವುದು. ಈ ಭಾವವನ್ನು ಜಾಗೃತಗೊಳಿಸುವುದೇ ಸಕಲ ಸಾಧನೆ, ಧರ್ಮ ಹಾಗೂ ಕರ್ಮಗಳ ಸಾರ.' ಇಂದು ಸ್ವಾಮಿ ವಿವೇಕಾನಂದರು ನಮಗೆ ಕಲಿಸುತ್ತಿರುವುದು ಇದನ್ನೇ. ಅವರ ಭಾವದಲ್ಲಿ ಅನುಪ್ರಾಣಿತರಾಗಿ ನಮ್ಮ ವೈಯಕ್ತಿಕ ಜೀವನವನ್ನು ಉನ್ನತಗೊಳಿಸಿ ಶಕ್ತಿಸಂಪನ್ನವಾಗಿಸಿಕೊಳ್ಳುವುದೇ ಶ್ರೇಷ್ಠ ಧರ್ಮಸಾಧನೆ."

ಇದನ್ನು ಕೇಳಿದ ಬಂಧು ಜಾಮಿನಿ ರಂಜನ್ ಮಜುಮ್ದಾರನ ದೇಹ–ಮನಗಳಲ್ಲಿ ಸ್ವಾಮೀಜಿಯವರ ಭಾವವು ವಿದ್ಯುತ್ತಿನಂತೆ ಸಂಚರಿಸಿತು. ಪ್ರತಿದಿನ ಬೆಳಗ್ಗೆ ಗಂಗಾಸ್ನಾನ, ವಿಶ್ವನಾಥ–ಅನ್ನಪೂರ್ಣೆಯರ ದರ್ಶನ ಮಾಡಿ, ಅನ್ನಛತ್ರದಲ್ಲಿ ಪ್ರಸಾದವನ್ನು ಸ್ವೀಕರಿಸಿ, ಸಾಧನೆ– ಭಜನೆಗಳಲ್ಲಿ ದಿನಗಳನ್ನು ಈತ ಕಳೆಯುತ್ತಿದ್ದ.



ಒಂದು ಮುಂಜಾನೆ ಗಂಗಾಸ್ನಾನಕ್ಕೆಂದು ಹೋಗುತ್ತಿದ್ದಾಗ ರಸ್ತೆಯಂಚಿನಲ್ಲಿ ಸಾಯುತ್ತಿದ್ದ ವೃದ್ಧೆಯೊಬ್ಬಳನ್ನು ಕಂಡು ಆತನ ಹೃದಯ ಕರಗಿತು. ಮಲಮೂತ್ರದಿಂದ ಕೊಳಕಾಗಿದ್ದ ಆಕೆಯನ್ನು ನಿಸ್ಸಂಕೋಚವಾಗಿ ಮೇಲೆತ್ತಿ ತನ್ನದೇ ಬಟ್ಟೆಯಿಂದ ಆಕೆಯ ಶರೀರವನ್ನು ಶುದ್ಧಗೊಳಿಸಿ, ಹತ್ತಿರದ ಮನೆಯ ಜಗುಲಿಯ ಮೇಲೆ ಮಲಗಿಸಿದನು. ಬಳಿಕ ಅವಳ ಆಹಾರ–ಶುಶ್ರೂಷೆಗಳಿಗೆ ಮುಂದಾದನು. ಅಸಹಾಯಕನಾದ ಅವನೀಗ ಏನುತಾನೆ ಮಾಡುವುದು? ಭಿಕ್ಷೆ ಬೇಡಿದಾಗ ಯಾರೋ ಒಬ್ಬ ಸಹೃದಯರು ಅತನ ಕೈಗೆ ನಾಲ್ಕಾಣೆಯ ಪಾವಲಿಯನ್ನು ಹಾಕಿದರು. ಅದರಿಂದ ಜಾಮಿನಿಯು ಕೊಂಚ ಹಾಲನ್ನು ಕೊಂಡು ವೃದ್ಧೆಗೆ ಕುಡಿಸಿದನು. ಆಕೆ ಬದುಕಿಕೊಂಡಳು. ಬಹಳಷ್ಟು ಶ್ರಮಪಟ್ಟು, ಅನೇಕ ಅಡಚಣೆಗಳನ್ನೆದುರಿಸಿ ವೃದ್ಧೆಯ ಚಿಕಿತ್ಸೆಗಾಗಿ ಸಮೀಪದ ಆಸ್ಪತ್ರೆಗೆ ಸೇರಿಸಿದನು. ಬಳಿಕ ಸ್ನೇಹಿತರಿಂದ ಸಂಗ್ರಹಿಸಿದ ಹಣವನ್ನು ಆಕೆಯ ಚಿಕಿತ್ಸೆಗಾಗಿ ವಿನಿಯೋಗಿಸಿದನು. ಭಗವಂತನ ಕೃಪೆಯಿಂದ ವೃದ್ಧೆಯು ಕ್ರಮೇಣ ಗುಣಮುಖಳಾದಳು. ಜಾಮಿನಿ ರಂಜನ್ ಮಜುಮ್ದಾರನ ಈ ಸೇವಾಕಾರ್ಯವು ಚಾರುಚಂದ್ರ–ಕೇದಾರನಾಥರ ಮೆಚ್ಚಿಗೆ ಪಡೆಯಿತು. ಅವರ ಪ್ರೋತ್ಸಾಹ–

ಸಮರ್ಥನೆ ಹಾಗೂ ನಾಲ್ಕಾಣೆಯ ದಾನದಿಂದ ಕಾಶಿಯಲ್ಲಿ 'ಶಿವಜ್ಞಾನದಲ್ಲಿ ಜೀವಸೇವೆ'ಯ ಶುಭಾರಂಭವಾಯಿತು.

ಮರಣೋನ್ಮುಖ ವೃದ್ಧೆಯ ಶುಶ್ರೂಷೆಯು ಸಫಲವಾದ್ದರಿಂದ ಆ ಯುವಕಸಂಘದ ಆತ್ಮವಿಶ್ವಾಸವು ವೃದ್ಧಿಸಿತು. 'ಜನಸೇವೆಯೇ ಜನಾರ್ದನ ಸೇವೆ' ಎಂದು ಅರಿತ ಅದರ ಸದಸ್ಯರು ಆರ್ತಪೀಡಿತ, ಅಸಹಾಯಕ ನರ–ನಾರಿಯರ ಸೇವೆಯನ್ನೇ 'ನಾರಾಯಣ ಸೇವೆ' ಯೆಂದು ಬಗೆದು ಮನಸಾರೆ ಕಾರ್ಯಕ್ಷೇತ್ರಕ್ಕಿಳಿದರು. ರೋಗಿನಾರಾಯಣರಿಗಾಗಿ ಔಷಧಿ, ಹಾಸಿಗೆ–ಕಂಬಳಿ ಹಾಗೂ ಆಸ್ಪತ್ರೆ ಖರ್ಚಿಗಾಗಿ ಹಣವನ್ನು ಸಂಗ್ರಹಿಸತೊಡಗಿದರು. ಕೇದಾರನಾಥರ ಮನೆಯು ಈ ಸಮಿತಿಯು ಪ್ರಧಾನ ಕಾರ್ಯಾಲಯವಾಯಿತು. ಯುವಕರು ಸೇವಾಕಾರ್ಯದೊಂದಿಗೆ ಸ್ವಾಮೀಜಿಯವರ ಗ್ರಂಥಗಳನ್ನೂ ಅಧ್ಯಯನ ಮಾಡುತ್ತ ನವಸ್ಫೂರ್ತಿಯನ್ನು ಪಡೆಯುತ್ತಿದ್ದರು. ೧೯೦೦ರ ಸೆಪ್ಟೆಂಬರ್ ತಿಂಗಳಿನಲ್ಲಿ ಐದು ರೂಪಾಯಿಗಳ ಬಾಡಿಗೆಗೆ ಕಾಶಿಯ ಜಂಗಮಬಾಡಿಯ ಒಂದು ಕೋಣೆಯಲ್ಲಿ ಈ ಯುವಕರು ಕಾರ್ಯವನ್ನು ಪ್ರಾರಂಭಿಸಿದಾಗ ಈ ಕಾರ್ಯವು ನಗರದ ಕೆಲವು ಗಣ್ಯವ್ಯಕ್ತಿಗಳ ಗಮನವನ್ನು ಸೆಳೆಯಿತು. ಈಗ ಅವರೆಲ್ಲ ಸೇರಿ, 'Poor Mens' Relief Association, Benaras' ಎಂಬ ಸಂಘಟನೆಯನ್ನು ನಿರ್ಮಿಸಿದರು. ಸೇವಾಕಾರ್ಯವು ವಿಸ್ತಾರಗೊಂಡಾಗ ೧೯೦೧ರಲ್ಲಿ ಕಾರ್ಯಾಲಯವನ್ನು ದೊಡ್ಡ ಕಟ್ಟಡಕ್ಕೆ ವರ್ಗಾಯಿಸಲಾಯಿತು. ಶ್ರೀರಾಮಕೃಷ್ಣರ ಪ್ರತ್ಯಕ್ಷಶಿಷ್ಯರಾದ ಸ್ವಾಮಿ ನಿರಂಜನಾನಂದ ಹಾಗೂ ಸ್ವಾಮಿ ಶಿವಾನಂದರ ಪ್ರೋತ್ಸಾಹದಿಂದ ಈ ಕಾರ್ಯವು ಸಾಂಗವಾಗಿ ಮುನ್ನಡೆಯಿತು. ಕಟ್ಟಡದ ನೆಲಮಾಳಿಗೆಯಲ್ಲಿ ಆಸ್ಪತ್ರೆಯೂ, ಮಹಡಿಯ ಮೇಲೆ ಚಾರುಚಂದ್ರರ ವಾಸಸ್ಥಾನವೂ ಇತ್ತು. ಯುವಕರ ಶ್ರದ್ಧೆಯನ್ನು ಕಂಡ ಕೆಲವು ವೈದ್ಯರು ಉಚಿತ ಚಿಕಿತ್ಸೆಯನ್ನೂ, ಔಷಧಿಗಳನ್ನೂ ನೀಡಲಾರಂಭಿಸಿದರು. ಒಂದು ವರ್ಷದಲ್ಲಿ ೨೬೧ ಮಂದಿಗೆ ಸೇವೆಯನ್ನು ನೀಡಲಾಯಿತು.

ಎರಡನೆಯ ಬಾರಿ ಪಾಶ್ಚಾತ್ಯ ದೇಶದಿಂದ ಮರಳಿದ ಸ್ವಾಮಿ ವಿವೇಕಾನಂದರು ವಾರಾಣಸಿಯ ಸೇವಾಕಾರ್ಯದ ಬಗ್ಗೆ ತಿಳಿದು ಬಹಳ ಸಂತೋಷಗೊಂಡರು. ಕಾಶಿಯಿಂದ ಬೇಲೂರು ಮಠಕ್ಕೆ ಹೋದವರಿಂದ ಇಲ್ಲಿನ ಸೇವಾಕಾರ್ಯದ ಬಗ್ಗೆ ವಿಚಾರಿಸುತ್ತಿದ್ದರು. ಒಮ್ಮೆ ಜಾಮಿನಿ ರಂಜನ್ ಮಜುಮ್ದಾರ್ ಸ್ವಾಮೀಜಿಯವರ ದರ್ಶನಕ್ಕೆಂದು ಹೋದಾಗ ಅವರು, "ಇಂಥ ಆಶ್ರಮಗಳು ಭಾರತದಾದ್ಯಂತ ಪ್ರತಿಯೊಂದು ತೀರ್ಥಕ್ಷೇತ್ರದಲ್ಲೂ ಇರಬೇಕು... ಏನೇ ಆಗಲಿ, ಕಾಶಿಯ ಹುಡುಗರು ನನ್ನಿಂದ ಸ್ಫೂರ್ತಿಪಡೆದು ಸ್ವಲ್ಪ ಕಾರ್ಯವನ್ನು ಮಾಡಿದ್ದಾರೆ" ಎಂದು ತಮ್ಮ ಮೆಚ್ಚುಗೆಯನ್ನು ಪ್ರಕಟಿಸಿದರು.

೧೯೦೨ರ ಜನವರಿಯಲ್ಲಿ ಸ್ವಾಮಿ ವಿವೇಕಾನಂದರು ಈ ಸೇವಾಕಾರ್ಯವನ್ನು ಸ್ವತಃ ನೋಡಲು ಉತ್ಸುಕರಾದರು. ಸ್ವಾಮಿ ನಿರ್ಭಯಾನಂದ, ಸ್ವಾಮಿ ಬೋಧಾನಂದ ಹಾಗೂ ಜಪಾನಿನ ಶಿಲ್ಪಿ ಓಕಾಕುರಾ ಮುಂತಾದವರೊಡನೆ ಕಾಶಿಗೆ ಆಗಮಿಸಿದರು. ವಿಶ್ವವಿಖ್ಯಾತರಾದ ಅವರನ್ನು ಕಾಣಲು ಕಾಶಿಯ ಪಂಡಿತರು, ಶಾಸ್ತ್ರಜ್ಞರು ಹಾಗೂ ಜನಸಾಮಾನ್ಯರು ನೆರೆಯುತ್ತಿದ್ದರು. ಇದೇ ಸಮಯದಲ್ಲಿ ಚಾರುಚಂದ್ರರೂ ಸ್ವಾಮೀಜಿಯವರ ಹತ್ತಿರದ ಸಂಪರ್ಕಕ್ಕೆ ಬಂದರು. ಸೇವಾಕಾರ್ಯವನ್ನು ಕೂಲಂಕಷವಾಗಿ ವೀಕ್ಷಿಸಿದ ಸ್ವಾಮೀಜಿಯ ಕಣ್ಣುಗಳಿಗೆ ಅದರ ಹಿನ್ನೆಲೆಯ ಕೆಲವು ಲೋಪದೋಷಗಳು ಗೋಚರವಾಗದೆ ಇರಲಿಲ್ಲ. ಯುವಕರನ್ನುದ್ದೇಶಿಸಿ ಸ್ವಾಮೀಜಿ ಹೀಗೆ ಹೇಳಿದರು: "ಸರ್ವಜೀವಿಗಳಲ್ಲಿ ಈಶ್ವರನನ್ನು ಕಾಣುತ್ತ ಸೇವೆಗೈಯಬೇಕು. ಆದರೆ ನೀವು ದಯೆಗೆ ಉಚ್ಚ ಸ್ಥಾನವನ್ನು ನೀಡಿರುವಿರಿ. ಇತರರಿಗೆ ದಯೆತೋರುವುದರಲ್ಲಿ ದರ್ಪಾಹಂಕಾರಗಳು ಅಡಗಿರುತ್ತವೆ. ನಾವು ಇತರರ ಸೇವೆಯನ್ನು ಮಾಡಬಹುದಷ್ಟೆ; ದಯೆ ತೋರುವ ಅಧಿಕಾರ ನಮಗಿಲ್ಲ. ನೀವು ಅದೆಂಥ Poor mens' relief ಮಾಡುವಿರಿ? ನಿಮ್ಮ ಸಮಿತಿಯ ಹೆಸರನ್ನು ಬದಲಾಯಿಸಿ, Home of Service (ಸೇವಾಶ್ರಮ) ಎಂದು ಇಡಿ" ಎಂಬ ಸೂಕ್ತ ಸಲಹೆಯನ್ನಿತ್ತರು. ಅವರ ನಿರ್ದೇಶನದಂತೆ ಯುವಕರು ತಮ್ಮ ಸಂಘಟನೆಗೆ Ramakrishna Home of Service (ರಾಮಕೃಷ್ಣ ಸೇವಾಶ್ರಮ) ಎಂದು ಮರುನಾಮಕರಣ ಮಾಡಿದರು.

ಸ್ವಾಮಿ ವಿವೇಕಾನಂದರು ಇಲ್ಲಿನ ಕಾರ್ಯಕರ್ತರಲ್ಲಿ ಹಲವರಿಗೆ ಮಂತ್ರದೀಕ್ಷೆಯನ್ನಿತ್ತು ಅವರ ಜೀವನವನ್ನು ಪಾವನಗೊಳಿಸಿದರು. ಸೇವಾಶ್ರಮದ ಸೇವಕರು ಸಮರ್ಪಿತ ಭಾವದಿಂದ ಸೇವಾಕಾರ್ಯವನ್ನು ನಿರ್ವಹಿಸುತ್ತಿದ್ದರೂ ಅವರಿಗೆ ಪುಷ್ಟಿಕರ ಆಹಾರ ಇಲ್ಲದಿದ್ದುದನ್ನು ಗಮನಿಸಿದ ಸ್ವಾಮೀಜಿಯವರು ಅವರೆಲ್ಲರಿಗೆ ತಾವಿಳಿದುಕೊಂಡಿದ್ದ ತಾಣದಲ್ಲೇ ಭೋಜನದ ಏರ್ಪಾಟನ್ನೂ ಮಾಡಿದರು. ಸ್ವಾಮೀಜಿಯವರಿಗೆ ಚಾರುಚಂದ್ರ ಮುಂತಾದವರ ಮೇಲಿದ್ದ ಪ್ರೀತಿ ಅಗಾಧ ಹಾಗೂ ಕಲ್ಪನಾತೀತ.

ಸ್ವಾಮಿ ವಿವೇಕಾನಂದರ ವೇದಾಂತ ಪ್ರಚಾರವು ಜೀವಕಲ್ಯಾಣಕ್ಕಾಗಿಯೇ; ಈ ಕಾರ್ಯಕ್ಕಾಗಿಯೇ ಅವರು ಧರೆಗಿಳಿದು ಬಂದುದು; ಸಕಲ ಸಂನ್ಯಾಸಿಮಂಡಲ ಹಾಗೂ ಹಿಂದೂಧರ್ಮವು ಅವರಿಗೆ ಚಿರಋಣಿಗಳು – ಹೀಗೆ ಅಭಿನಂದಿಸುತ್ತ ಕಾಶಿಯ ಗಣ್ಯರು ಸ್ವಾಮೀಜಿಯ ಕಾರ್ಯಕ್ಕೆ ಬೆಂಬಲ ನೀಡಿದರು. ಶಿವಾನಂದರೆಂಬ ವಿದ್ವಾಂಸರು ಪಂಡಿತ ಮಹಾಸಭೆಯಲ್ಲಿ ಮುಕ್ತ ಕಂಠದಿಂದ ಸ್ವಾಮೀಜಿಯವರ ಗುಣಗಾನ ಮಾಡುತ್ತ, ಅವರ ನಿಕಟ ಹಿತೈಷಿಗಳಾದರು. ಧರ್ಮನಿಷ್ಠ ಜಮೀನುದಾರರಾದ ಉದಯ ಪ್ರತಾಪ ಸಿಂಹರು ಸ್ವಾಮೀಜಿಯವರನ್ನು ತಮ್ಮಲ್ಲಿಗೆ ಆಹ್ವಾನಿಸಿ ಕಾಶಿಯಲ್ಲಿ ವೇದಾಂತ ಪ್ರಚಾರಕ್ಕೆಂದು ಧನಸಹಾಯ ಮಾಡಿದರು. ಇದರಿಂದ ರಾಮಕೃಷ್ಣ ಅದ್ವೈತ ಆಶ್ರಮದ ಸ್ಥಾಪನೆ ಆಯಿತು.

ಸ್ವಾಮಿ ವಿವೇಕಾನಂದರು ಕಾಶಿಯಲ್ಲಿ ಸುಮಾರು ಮೂರು ವಾರಗಳ ಕಾಲ ತಂಗಿದ್ದರು. ಅನಂತರ ಬೇಲೂರು ಮಠಕ್ಕೆ ಹಿಂದಿರುಗುವ ಮುನ್ನ, ಚಾರುಚಂದ್ರ ಮುಂತಾದವರು ಅವರನ್ನು ಸೇವಾಶ್ರಮದ ಸಹಾಯಕ್ಕಾಗಿ ಒಂದು 'ಮನವಿ' (Appeal) ತಯಾರು ಮಾಡಿಕೊಡಲು ಕೇಳಿಕೊಂಡರು. ಆಗ ಸ್ವಾಮೀಜಿ ಅದಕ್ಕೆ ಸಂತೋಷದಿಂದ ಒಪ್ಪಿಕೊಂಡರು. ಅದರಲ್ಲಿ ಅವರು ಹೀಗೆ ಬರೆದಿದ್ದಾರೆ: " ...ಬನ್ನಿ, ನಮ್ಮೊಡನೆ ಸಹಕರಿಸಿ. ಈ ಸೇವಾಕಾರ್ಯದಲ್ಲಿ ನಿಮ್ಮ ಕೊಡುಗೆಯು ಕೇವಲ ಕಣದಷ್ಟಾದರೂ, ನೀವು ನೀಡುವ ನೆರವು ಅತ್ಯಲ್ಪವಾದರೂ, ಹಳೆಯ ನಾಣ್ಣುಡಿಯಂತೆ, ಕ್ಷುದ್ರ ಹುಲ್ಲುಕಡ್ಡಿಗಳನ್ನು ಸೇರಿಸಿ ಬೆಸೆದ ಹಗ್ಗವು ಮಹಾಮತ್ತ ಗಜರಾಜನನ್ನೂ ಕಟ್ಟಿಹಾಕಲು ಸಮರ್ಥವಾಗುತ್ತದೆ."

ಸ್ವಾಮೀಜಿಯವರ ಹಸ್ತಾಕ್ಷರವಿದ್ದ ಈ ಪ್ರಪ್ರಥಮ ಮನವಿಯ ಐತಿಹಾಸಿಕ ಮೌಲ್ಯ ಅಸಾಧಾರಣ. ಅದು ಮಂತ್ರದಂತೆ ಕೆಲಸ ಮಾಡಿತು. ಸ್ವಾಮೀಜಿಯವರ ಪಾಶ್ಚಾತ್ಯ ಶಿಷ್ಯೆಯಾದ ಸೋದರಿ ನಿವೇದಿತಾ ಕೂಡ ಭಾಷಣಗಳ ಮೂಲಕವೂ, ಇತರ ರೀತಿಯಲ್ಲಿಯೂ ಸೇವಾಶ್ರಮದ ಕಾರ್ಯದಲ್ಲಿ ಸಹಕರಿಸಿದರು. ಸ್ಥಳೀಯ ಜನತೆಯೂ ಸೇವಾಶ್ರಮದತ್ತ ಒಲವು ತೋರಿಸಿದ ಕಾರಣವಾಗಿ, ಜನಸಹಾಯ, ಅರ್ಥಸಹಾಯಗಳೆರಡೂ ಒದಗಿ ಬಂದು ಕಾರ್ಯವು ಮತ್ತೂ ವಿಸ್ತಾರಗೊಂಡಿತು. ೧೯೦೨ರ ನವೆಂಬರ್ ೨೩ರಂದು ಸೇವಾಶ್ರಮವನ್ನು ರಾಮಕೃಷ್ಣ ಮಿಷನ್ನಿಗೆ ಸೇರಿಸುವ ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ಇದರಿಂದಾಗಿ ಸಂಸ್ಥೆಯ ಹೆಸರು 'Ramakrishna Mission Home of Service' – 'ರಾಮಕೃಷ್ಣ ಮಿಷನ್ ಸೇವಾಶ್ರಮ' ಎಂದಾಯಿತು.

ಮಿಷನ್ನಿನ ಆಡಳಿತದಲ್ಲಿ ಕಾರ್ಯವು ಅಚ್ಚುಕಟ್ಟಾಗಿಯೂ ನಿಯಮಬದ್ಧವಾಗಿಯೂ ನಡೆದುಕೊಂಡು ಬಂತು. ರಾಮಕೃಷ್ಣ ಮಹಾಸಂಘದ ಅಂದಿನ ಪರಮಾಧ್ಯಕ್ಷರಾದ ಸ್ವಾಮಿ ಬ್ರಹ್ಮಾನಂದರ ಆದೇಶದಂತೆ ಸ್ವಂತ ಜಾಗಕ್ಕಾಗಿ ಧನಸಹಾಯವನ್ನು ಕೋರಲಾಯಿತು. ಲಕ್ಸಾ ಕ್ಷೇತ್ರದಲ್ಲಿ, ರಾಮಕೃಷ್ಣ ಅದ್ವೈತ ಆಶ್ರಮದ ಪಕ್ಕದಲ್ಲಿದ್ದ ಪಾಳುಬಿದ್ದ ಉದ್ಯಾನವನ್ನು ೧೯೦೬ರಲ್ಲಿ ಸೇವಾಶ್ರಮಕ್ಕಾಗಿ ಖರೀದಿಸಲಾಯಿತು. ಸ್ವಾಮಿ ವಿಜ್ಞಾನಾನಂದರು ಕಟ್ಟಡದ ನಿರ್ಮಾಣ ಕಾರ್ಯವನ್ನು ಕೈಗೊಂಡರು. ೧೯೦೯ರಲ್ಲಿ ಸೇವಾಶ್ರಮದ ನೋಂದಣೆಯುಂಟಾಯಿತು. ೧೯೧೦ರಲ್ಲಿ ಸ್ವಾಮಿ ಬ್ರಹ್ಮಾನಂದರು ನೂತನ ಕಟ್ಟಡವನ್ನು ಉದ್ಘಾಟಿಸಿದರು. ಪಾಳು ಬಿದ್ದಿದ್ದ ಹಳೆಯ ಉದ್ಯಾನದಲ್ಲಿ ನೂತನ ಸೇವಾಶ್ರಮವು ಅನಾಥ ಹಾಗೂ ಬಡ ರೋಗಿಗಳ ಸೇವಾಕಾರ್ಯದಲ್ಲಿ ತೊಡಗಿಸಿಕೊಂಡಿತು.

ಶ್ರೀರಾಮಕೃಷ್ಣರ ಲೀಲಾಸಂಗಿನಿ ಶ್ರೀಮಾತೆ ಶಾರದಾದೇವಿಯವರ ಕೃಪಾಶೀರ್ವಾದಗಳು ಸೇವಾಶ್ರಮಕ್ಕೆ ಲಭಿಸಿರುವುದು ಅತ್ಯಂತ ಪುಣ್ಯಕರ ಸಂಗತಿ. ೧೯೧೨ರಲ್ಲಿ ಶ್ರೀವಿಶ್ವನಾಥ – ಅನ್ನಪೂರ್ಣೆಯರ ಸನ್ನಿಧಿಯಾದ ಕಾಶಿಗೆ ಬಂದಾಗ, ಹತ್ತಿರದ 'ಲಕ್ಷ್ಮೀನಿವಾಸ'ದಲ್ಲಿ ತಂಗಿದ್ದ ಶ್ರೀಮಾತೆಯವರನ್ನು ಪಲ್ಲಕ್ಕಿಯಲ್ಲಿ ಸೇವಾಶ್ರಮಕ್ಕೆ ಕರೆತರಲಾಯಿತು. ಆಸ್ಪತ್ರೆಯ ವಾರ್ಡುಗಳಲ್ಲಿ ತಾವು ಕಣ್ಣಾರೆ ಕಂಡ ಸೇವಾಕಾರ್ಯದಿಂದ ಪ್ರಸನ್ನರಾದ ಅವರು, "ಇಲ್ಲಿ ಶ್ರೀರಾಮಕೃಷ್ಣರೇ ಸ್ವಯಂ ವಿರಾಜಮಾನರಾಗಿದ್ದಾರೆ. ಲಕ್ಷ್ಮೀದೇವಿಯು ಇಲ್ಲಿ ನೆಲೆಸಿರುವಳು... ನನಗೂ ಇಲ್ಲಿಯೇ ಇದ್ದುಬಿಡೋಣವೆನಿಸುತ್ತಿದೆ" ಎಂದಾಗ ಎಲ್ಲರಿಗೂ ತಮ್ಮ ಜೀವನ ಸಾರ್ಥಕವೆನಿಸಿತು. ಬಳಿಕ ಅವರು ಲಕ್ಷ್ಮೀನಿವಾಸಕ್ಕೆ ತೆರಳಿ ಹತ್ತು ರೂಪಾಯಿಗಳ ನೋಟೊಂದನ್ನು ಸೇವಾಶ್ರಮದ ಕಾರ್ಯಕ್ಕಾಗಿ ಕಳುಹಿಸಿಕೊಟ್ಟರು. ಶ್ರೀಮಾತೆಯವರ ಈ ಪವಿತ್ರ ಕೊಡುಗೆಯನ್ನು ಸೇವಾಶ್ರಮದ ಕಾರ್ಯಾಲಯದಲ್ಲಿ ಇಂದಿಗೂ ಕಾಣಬಹುದು. ಶ್ರೀಮಾತೆ ಶಾರದಾದೇವಿ, ಸ್ವಾಮಿ ವಿವೇಕಾನಂದ ಹಾಗೂ ಸ್ವಾಮಿ ಬ್ರಹ್ಮಾನಂದರಲ್ಲದೆ ಶ್ರೀರಾಮಕೃಷ್ಣರ ಸಾಕ್ಷಾತ್ ಶಿಷ್ಯರಾದ ಇತರ ಸಂನ್ಯಾಸಿಗಳಿಂದಲೂ ನಿರಂತರವಾಗಿ ಹರಿದುಬಂದ ಪ್ರೇಮಪ್ರವಾಹವು ಕಾರ್ಯತತ್ಪರ ಸೇವಕವೃಂದವನ್ನು ಆಧ್ಯಾತ್ಮಿಕ ಲಕ್ಷ್ಯದೆಡೆಗೆ ಮುನ್ನಡೆಸಿತು. ಉದಾರ ಜನತೆಯ ತನು–ಮನ–ಧನ ಸಹಾಯದಿಂದ ಕಾಲಕ್ರಮೇಣ ಆಶ್ರಮದ ಚಟುವಟಿಕೆಗಳು ಅಭಿವೃದ್ಧಿಗೊಂಡವು.

ಸಾಧುಗಳೂ, ಸೇವಾವ್ರತಿಗಳೂ, ಕಾರ್ಯಕರ್ತರೂ ಕಾರ್ಯನಿರತರಾಗಿರುವ ಈ ಸೇವಾಶ್ರಮದ ಇತಿಹಾಸದ ಪುಟಗಳಲ್ಲಿ ಬನ ಬಿಹಾರಿ ಬಾಬಾ (ಸ್ವಾಮಿ ಮುಕ್ತಾನಂದ) ಅವರ ಹೆಸರನ್ನು ಸ್ವರ್ಣಾಕ್ಷರಗಳಲ್ಲಿ ಬರೆಯಬೇಕಾಗುತ್ತದೆ. ಶ್ರೀರಾಮಕೃಷ್ಣರ ಸಾಕ್ಷಾತ್ ಶಿಷ್ಯರಾದ ಸ್ವಾಮಿ ಶಿವಾನಂದಜಿ ಅವರ ಶಿಷ್ಯರಾಗಿದ್ದ ಇವರು ತಮ್ಮ ಜೀವನದ ಅಂತ್ಯದವರೆಗೆ ಸತತ ೬೭ ವರ್ಷಗಳ ದೀರ್ಘಕಾಲ ರೋಗಿ ನಾರಾಯಣರ ಸೇವೆಯಲ್ಲಿಯೇ ಸಂಪೂರ್ಣ ಸೇವಾಭಾವದಿಂದ ಅನುಕ್ಷಣವೂ ನಿರತರಾಗಿ, ಸೇವಾವ್ರತಿಗಳಿಗೆ ಸೇವೆಯ ಆದರ್ಶವನ್ನು ಬಿಂಬಿಸಿದ ಮಹಾನ್‌ಪುರುಷರು. ಸೇವಾಶ್ರಮದ ಸಾಧು–ವೈದ್ಯರೂ, ಸೇವಕ–ಕಾರ್ಯಕರ್ತರೂ ಇವರನ್ನೆಂದೂ ಮರೆಯುವಂತಿಲ್ಲ. ಬಾಬಾರವರ ಅಮೃತಹಸ್ತದಿಂದ ಸೇವೆಪಡೆದ 'ನಾರಾಯಣರು' ಇಂದಿಗೂ ಅವರನ್ನು ಕೃತಜ್ಞತೆಯಿಂದ ನೆನೆದು ಧನ್ಯರಾಗುತ್ತಾರೆ. ಇವರು ೧೯೯೬ರಲ್ಲಿ ದೇಹತ್ಯಾಗ ಮಾಡಿದರು.

ಇಂದು ಸೇವಾಶ್ರಮದ ಆಸ್ಪತ್ರೆಯ ಹೊರರೋಗಿಗಳ ವಿಭಾಗದಲ್ಲಿ ವರ್ಷಕ್ಕೆ ಸುಮಾರು ಎರಡು ಲಕ್ಷ ಜನರು ವಿಶೇಷ ತಜ್ಞರಿಂದ ವೈದ್ಯಕೀಯ ಸಲಹೆಯನ್ನು ಪಡೆಯುತ್ತಾರೆ. ರೋಗನಿಧಾನ (Pathology), ತಪಾಸಣೆ (diagnostic), Physiotherapy ವಿಭಾಗಗಳಂತಹ ಆಧುನಿಕ ಸೌಲಭ್ಯಗಳು ಜನಸಾಮಾನ್ಯರಿಗೆ ಅತಿ ಸುಲಭ ದರಗಳಲ್ಲಿ ಲಭ್ಯವಿದೆ. ೨೩೦ ಹಾಸಿಗೆಗಳುಳ್ಳ ಒಳರೋಗಿಗಳ ವಿಭಾಗದಲ್ಲಿ ಅನಾಥ ಹಾಗೂ ಬಡ ರೋಗಿಗಳಿಗೆ ಉಚಿತ ಹಾಗೂ ರಿಯಾಯಿತಿ ದರಗಳಲ್ಲಿ ಉತ್ತಮ ಸೇವೆಯನ್ನು ನೀಡಲಾಗುತ್ತಿದೆ. ಆಸ್ಪತ್ರೆಯ ಔಷಧಾಲಯವು ಉಚಿತವಾಗಿ ಅಥವಾ ಅಲ್ಪ ದರದಲ್ಲಿ ಔಷಧಿಗಳನ್ನು ವಿತರಿಸುತ್ತದೆ. ಮೋಕ್ಷನಗರಿ ಕಾಶಿಯಲ್ಲಿ ತಮ್ಮ ಅಂತಿಮ ದಿನಗಳನ್ನು ಕಳೆಯಬೇಕೆಂದು ಇಚ್ಛಿಸುವ ಪುಣ್ಯಾತ್ಮರಿಗೆ ಇಲ್ಲಿನ ವೃದ್ಧಾಶ್ರಮದಲ್ಲಿ ಆಶ್ರಯ ನೀಡಲಾಗುತ್ತದೆ. ಈ ಚಟುವಟಿಕೆಗಳು ಮಾತ್ರವಲ್ಲದೆ ಪ್ರತಿ ಭಾನುವಾರದಂದು ಗ್ರಾಮೀಣ ಆರೋಗ್ಯಸೇವೆಗಾಗಿ ಮೊಬೈಲ್ ಡಿಸ್ಪೆನ್ಸರಿ ಕಾರ್ಯನಿರತವಾಗುತ್ತದೆ. ಹಾಗೆಯೇ, ಹಳ್ಳಿಗಳ ಮತ್ತು ನಗರಪ್ರದೇಶದ ಕೊಳಚೆಗೇರಿಗಳ ಅಭ್ಯುದಯಕ್ಕಾಗಿ ಆರೋಗ್ಯ ಶಿಕ್ಷಣ ಕಾರ್ಯಕ್ರಮವನ್ನೂ ಹಮ್ಮಿಕೊಳ್ಳಲಾಗಿದೆ. ನಿರ್ಗತಿಕ ವಿಧವೆಯರಿಗೆ ಮಾಸಿಕ ನಗದು ಸಹಾಯವನ್ನೂ ಆಶ್ರಮವು ನೀಡುತ್ತದೆ. ಸೇವಾಶ್ರಮದ ಕಾರ್ಯಕರ್ತರ ಮಕ್ಕಳಿಗಾಗಿ ಅನೌಪಚಾರಿಕ ತರಗತಿಗಳನ್ನೂ ಹಾಗೂ ಹತ್ತಿರದ ಬಾಲಕ–ಬಾಲಕಿ, ಕಿಶೋರ ಹಾಗೂ ಯುವಕರಿಗೆ ಮೌಲ್ಯಶಿಕ್ಷಣ ತರಗತಿಗಳನ್ನೂ ಇತ್ತೀಚೆಗೆ ಪ್ರಾರಂಭಿಸಲಾಗಿದೆ.

ಚಿತ್ತಶುದ್ಧಿಯ ಸಾಧನೆಗಾಗಿ ನಿಃಸ್ವಾರ್ಥ ಸೇವೆಯನ್ನು ಸಲ್ಲಿಸುತ್ತ ಶ್ರೀರಾಮಕೃಷ್ಣ – ಸ್ವಾಮಿ ವಿವೇಕಾನಂದರ ಉಪದೇಶಾನುಸಾರ ಜಾತಿ, ಮತ, ಲಿಂಗಗಳ ಯಾವ ಭೇದಭಾವವೂ ಇಲ್ಲದೆ ಸೇವಾಶುಶ್ರೂಷೆಯನ್ನೊದಗಿಸಿ, ತಪ್ತಜೀವಿಗಳ ದುಃಖವನ್ನು ದೂರಗೊಳಿಸುವ ಪ್ರಯತ್ನವನ್ನು ಮಾಡುತ್ತಿರುವ ವಾರಾಣಸಿಯ ರಾಮಕೃಷ್ಣ ಮಿಷನ್ ಸೇವಾಶ್ರಮವು ಒಂದು ಅಪೂರ್ವ ಸಂಸ್ಥೆಯೇ ಸರಿ!



# ರಾಮಕೃಷ್ಣ ಮಹಾಸಂಘದ




ಡಾ. ಇ. ವಸಂತ ಕುಮಾರ್

**ರಾಮಕೃಷ್ಣ ಮಹಾಸಂಘವು ವಿಕೋಪಗಳಲ್ಲಿ ತಾನು ಮಾಡುತ್ತಿರುವ ಅನುಪಮ ಪರಿಹಾರಕಾರ್ಯಕ್ಕೆ ಹೆಸರುವಾಸಿಯಾಗಿದೆ. ಈ ಪರಿಹಾರ ಕಾರ್ಯದ ದೀರ್ಘ ಇತಿಹಾಸ ಮತ್ತು ವೈಶಿಷ್ಟ್ಯಗಳನ್ನು ಎಳೆಎಳೆಯಾಗಿ ನಮ್ಮ ಮುಂದೆ ಬಿಚ್ಚಿಟ್ಟಿರುವುದನ್ನು ಈ ಲೇಖನದಲ್ಲಿ ಕಾಣುತ್ತೇವೆ. ಲೇಖಕರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು. ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಯದಲ್ಲಿ ಸಂಖ್ಯಾಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಇವರು ಈ ಪತ್ರಿಕೆಗೆ ಹಲವಾರು ಲೇಖನಗಳನ್ನು ಬರೆದುಕೊಟ್ಟಿದ್ದಾರೆ.**

ಸ್ವಾಮಿ ವಿವೇಕಾನಂದರು ಅಮೆರಿಕಾದಿಂದ ಭಾರತಕ್ಕೆ ಹಿಂತಿರುಗಿದ ಕೂಡಲೇ ತಡ ಮಾಡದೆ ರಾಮಕೃಷ್ಣ ಸಂಘವನ್ನು ಮೇ ೧, ೧೮೯೭ರಲ್ಲಿ ಸ್ಥಾಪಿಸಿದರು. ಸಂಘಕ್ಕೆ 'ಸ್ವಂತ ಮೋಕ್ಷ' ಮತ್ತು 'ಜಗತ್ತಿನ ಹಿತ' ಎಂಬ ಎರಡು ಧ್ಯೇಯಗಳನ್ನು ವಿಧಿಸಿದರು. ಎರಡನೆಯದು ಮೊದಲನೆಯದಕ್ಕೆ ಪೋಷಕವೂ ಪೂರಕವೂ ಆದುದು. ಮೊದಲನೆಯದು ಇಲ್ಲದಿದ್ದರೆ ಎರಡನೆಯದಕ್ಕೆ ಬೆಲೆಯಿಲ್ಲ. ಸಂಘಸ್ಥಾಪನೆ ಮತ್ತು ಈ ಅವಳಿ ಆದರ್ಶಗಳ ಬೋಧನೆ – ಇವೆರಡೂ ಜಗತ್ತಿಗೆ ಸ್ವಾಮಿ ವಿವೇಕಾನಂದರ ದೊಡ್ಡ ಕೊಡುಗೆಗಳು ಎಂದು ಹೇಳಬಹುದು. ರಾಮಕೃಷ್ಣ ಸಂಘ ಈಗಾಗಲೇ ಒಂದು ಶತಮಾನಕ್ಕೂ ಹಳೆಯದಾಗಿದೆ. ಈ ಸಂಘದ ಪರಿಹಾರ ಕಾರ್ಯಗಳತ್ತ ಗಮನಹರಿಸಿದರೆ ಅದೊಂದು ಸುದೀರ್ಘ ಚರಿತ್ರೆಯಾಗುವುದು. ಏಕೆಂದರೆ ಅದರ ಉಗಮವು ಸಂಘದಷ್ಟೇ ಅಥವಾ ಒಂದು ದೃಷ್ಟಿಯಿಂದ ಅದಕ್ಕಿಂತ ಹಳೆಯದು. ಇವನ್ನೆಲ್ಲ ಕ್ರೋಡೀಕರಿಸುವ ಮಹತ್‌ಕಾರ್ಯ, ಸ್ವಾಮಿ ವಿವೇಕಾನಂದರ ೧೫೦ನೆಯ ಜನ್ಮೋತ್ಸವದ ಅಂಗವಾಗಿ ಈಗಾಗಲೇ ಪ್ರಾರಂಭವಾಗಿದೆ. ಅದು ಓದುಗರ ಕೈ ಸೇರುವುದಕ್ಕೆ ಇನ್ನೂ ಒಂದು ವರ್ಷ ಕಾಲ ಬೇಕಾಗಬಹುದು.

ರಾಮಕೃಷ್ಣಸಂಘ ಉದ್ಘಾಟನೆಯಾದ ಎರಡು ವಾರಗಳಲ್ಲೇ ಮೊಟ್ಟಮೊದಲ ಅಧಿಕೃತ ಪರಿಹಾರಕಾರ್ಯ ಅನಿರೀಕ್ಷಿತವಾಗಿ ಪ್ರಾರಂಭವಾಯಿತು! ಆ ಸಮಯದಲ್ಲಿ ಮಠ ಆಲಂಬಜ಼ಾರ್‌ನಲ್ಲಿ ಇತ್ತು. ಸ್ವಾಮಿ ವಿವೇಕಾನಂದರು ಡಾರ್ಜಿಲಿಂಗ್‌ಗೆ ಹೋಗಿದ್ದರು. ಶ್ರೀರಾಮಕೃಷ್ಣರ ಪ್ರತ್ಯಕ್ಷ ಶಿಷ್ಯರೂ ಸ್ವಾಮಿ ವಿವೇಕಾನಂದರ ಗುರುಭಾಯಿಗಳೂ ಆಗಿದ್ದ ಸ್ವಾಮಿ ಅಖಂಡಾನಂದರು ಪರಿವ್ರಾಜಕರಾಗಿ, ನವದ್ವೀಪ, ಮುರ್ಷಿದಾಬಾದ್ ಮುಂತಾದ ಉತ್ತರ ಬಂಗಾಳದ ಸ್ಥಳಗಳನ್ನು ನೋಡಲು ಆಲಂಬಜ಼ಾರ್ ಮಠದಿಂದ ಹೊರಟರು. ಆದರೆ ಆ ಸಮಯದಲ್ಲಿ ನಾಡಿಯಾ ಮತ್ತು ಮುರ್ಷಿದಾಬಾದ್ ಜಿಲ್ಲೆಗಳಲ್ಲಿ ಕ್ಷಾಮ ತಲೆದೋರಿತ್ತು. ಜನರು ದಾರಿದ್ರ್ಯದಿಂದ ನಿಸ್ಸಹಾಯಕರಾಗಿ ಬಳಲುತ್ತಿದ್ದರು. ಇದನ್ನು ಕಂಡ ಸ್ವಾಮಿ ಅಖಂಡಾನಂದರಿಗೆ ಮುಂದೆ ಸಾಗಲು ಮನಸ್ಸಾಗದೆ ಮಹುಲ ಎಂಬ ಗ್ರಾಮದಲ್ಲಿ ನಿಂತು ಕ್ಷಾಮವಿದ್ದ 'ಭಬ್ದ' ಎಂಬ ಗ್ರಾಮದ ಜನರಿಗೆ ನೆರವಾಗಲು ಮನಸ್ಸು ಮಾಡಿದರು. ಆದರೆ ಅವರ ಕೈಯಲ್ಲಿ ಬಿಡಿಗಾಸೂ ಇರಲಿಲ್ಲ. ಬಡವರಿಗೆ, ನೊಂದವರಿಗೆ ಸೇವೆಮಾಡಲು ತಮಗೆ ಅನುವಾಗುವಂತೆ ಶ್ರೀರಾಮಕೃಷ್ಣರಿಗೆ ಕಣ್ಣೀರಿಡುತ್ತ ನಿತ್ಯವೂ ಪ್ರಾರ್ಥಿಸುತ್ತಿದ್ದರು. ಅಲ್ಲಿನ ಜನರ ಸ್ಥಿತಿಯನ್ನು ವಿವರಿಸಿ ಆಲಂಬಜ಼ಾರಿನಲ್ಲಿದ್ದ ಸ್ವಾಮಿ ಪ್ರೇಮಾನಂದರಿಗೆ ಮೂರು ಪತ್ರಗಳನ್ನು ಬರೆದರು. ಈ ವಿಷಯವನ್ನು ತಿಳಿದ, ಮದರಾಸಿನಲ್ಲಿದ್ದ ಸ್ವಾಮಿ ರಾಮಕೃಷ್ಣಾನಂದರು, "ನೀವು, ಕಾಸಿಲ್ಲದೆ ಬರಿಗೈಯಲ್ಲಿರುವ ಸಂನ್ಯಾಸಿಗಳು. ಸಾವಿರಾರು ಜನರಿಗೆ ಆಹಾರ ಒದಗಿಸಲು ಸಾಧ್ಯವೆ? ಮಠಕ್ಕೆ ಹಿಂದಿರುಗಿ" ಎಂದು ಬರೆದರು. ಸ್ವಾಮಿ ಬ್ರಹ್ಮಾನಂದರೂ ಹಾಗೆಯೇ

# ಪರಿಹಾರ ಕಾರ್ಯಗಳು

ಹೇಳಿದರು. ಆದರೆ ಜನರ ಕಷ್ಟಗಳಿಂದ ಮನನೊಂದಿದ್ದ ಸ್ವಾಮಿ ಅಖಂಡಾನಂದರು, ಜನರಿಗೆ ಏನಾದರೂ ಪರಿಹಾರದ ವ್ಯವಸ್ಥೆ ಮಾಡುವವರೆಗೂ ಆ ಸ್ಥಳವನ್ನು ಬಿಟ್ಟು ಕದಲುವುದಿಲ್ಲವೆಂದು ನಿರ್ಧರಿಸಿದರು. ಡಾರ್ಜಿಲಿಂಗ್‌ನಿಂದ ಮಠಕ್ಕೆ ಹಿಂತಿರುಗಿದ ಸ್ವಾಮಿ ವಿವೇಕಾನಂದರು, ಸ್ವಾಮಿ ಅಖಂಡಾನಂದರ ಮೂರು ಪತ್ರಗಳನ್ನು ಓದಿ ಆತಂಕಗೊಂಡು, ಕೂಡಲೆ ೧೫೦ ರೂಪಾಯಿಗಳನ್ನು ಮತ್ತು ಇಬ್ಬರು ಸಂನ್ಯಾಸಿಗಳನ್ನು ಕಳುಹಿಸಿ ಪರಿಹಾರ ಕಾರ್ಯವನ್ನು ತಡವಿಲ್ಲದೆ ಪ್ರಾರಂಭಿಸಬೇಕೆಂಬ ಸಂದೇಶವನ್ನು ರವಾನಿಸಿದರು. ಹೀಗೆ, ಮಹುಲ ಗ್ರಾಮದ ೧೮ ಕ್ಷಾಮಪೀಡಿತ ಸಂಸಾರಗಳಿಗೆ ಅಕ್ಕಿ ವಿತರಿಸುವ ಮೂಲಕ, ರಾಮಕೃಷ್ಣಸಂಘದ ಮೊದಲ ಪರಿಹಾರ ಕಾರ್ಯ ೧೮೯೭ರ ಮೇ ೧೫ರಂದು ಪ್ರಾರಂಭವಾಯಿತು. ಇದೊಂದು ಚಾರಿತ್ರಿಕ ಘಟನೆ. ಇದರೊಂದಿಗೆ ರಾಮಕೃಷ್ಣ ಸಂಘದ ಇತಿಹಾಸದಲ್ಲಿ ಹೊಸ ಅಧ್ಯಾಯ ಪ್ರಾರಂಭವಾದಂತಾಯಿತು.

ಮುರ್ಷಿದಾಬಾದ್ ಕ್ಷಾಮನಿವಾರಣಾಕಾರ್ಯದ ಅನಂತರ ಮಹಾಸಂಘದ ಮುಖ್ಯ ಪರಿಹಾರಕಾರ್ಯ ನಡೆದುದು ೧೮೯೮ರ ಕಲ್ಕತ್ತೆಯ ಪ್ಲೇಗ್ ಪಿಡುಗಿನ ಸಮಯದಲ್ಲಿ. ಆಗ ಜನರು ಭಯಭೀತರಾಗಿ ಕಲ್ಕತ್ತೆಯನ್ನು ಬಿಟ್ಟುಹೋಗುತ್ತಿದ್ದರು. ಪ್ಲೇಗ್ ಸಾಂಕ್ರಾಮಿಕ ಜಾಡ್ಯ. ಆಗಿನ ಕಾಲದಲ್ಲಿ ಅದಕ್ಕೆ ನಿರೋಧಕ ಚುಚ್ಚುಮದ್ದು ಇತ್ತು; ಆದರೆ ಔಷಧವಿರಲಿಲ್ಲ. ಬ್ರಿಟಿಷ್ ಸರ್ಕಾರ ಚುಚ್ಚುಮದ್ದನ್ನು ಕೊಡುವ ವ್ಯವಸ್ಥೆ ಮಾಡಿದ್ದರೂ, ಆಮೂಲಕ ಸರ್ಕಾರ ಜನರನ್ನು ಕೊಲ್ಲುತ್ತಿದೆ ಎಂಬ ವದಂತಿ ಹಬ್ಬಿದುದರ ಪರಿಣಾಮವಾಗಿ, ಜನರು ಕಂಗಾಲಾಗಿ ಮನೆ ಬಿಟ್ಟು ಓಡಿಹೋಗುತ್ತಿದ್ದರು. ಆಗ ರಾಮಕೃಷ್ಣ ಮಠ ಆಲಂಬಜ಼ಾರಿನಿಂದ ಸ್ಥಳಾಂತರಗೊಂಡು ನೀಲಾಂಬರಬಾಬು ತೋಟದ ಮನೆಯಲ್ಲಿತ್ತು. ಸ್ವಾಮಿ ವಿವೇಕಾನಂದರು ಮಠದ ಸಂನ್ಯಾಸಿಗಳನ್ನು ಸಂಬೋಧಿಸಿ, "ನಾವೆಲ್ಲರೂ ದೇವರ ಹೆಸರಿನಲ್ಲಿ ಇಲ್ಲಿ ಸೇರಿದ್ದೇವೆ. ನಮ್ಮ ಪ್ರಾಣಾಪಾಯವನ್ನು ಲೆಕ್ಕಿಸದೆ ಪ್ಲೇಗ್ ರೋಗಿಗಳಿಗೆ ಶುಶ್ರೂಷೆ ಮಾಡಬೇಕಾಗಿದೆ. ಆವಶ್ಯಕತೆ ಉಂಟಾದರೆ ಮಠಕ್ಕಾಗಿ ಬೇಲೂರಿನಲ್ಲಿ ತೆಗೆದುಕೊಂಡಿರುವ ನಿವೇಶನವನ್ನು ಮಾರುವುದಕ್ಕೆ ಅಥವಾ ಪ್ಲೇಗ್‌ನಿಂದ ನರಳುತ್ತಿರುವವರಿಗೆ ಔಷಧಿ, ಉಪಚಾರ ಮಾಡುವುದಕ್ಕೆ ನಮ್ಮ ಜೀವನವನ್ನೇ ಕೊಟ್ಟುಬಿಡೋಣ" ಎಂದು ಹೇಳಿದರು. ಭಯದ ವಾತಾವರಣವನ್ನು ಹತೋಟಿಗೆ ತರುವುದಕ್ಕಾಗಿ ಸ್ವಾಮೀಜಿಯವರು ಬಂಗಾಳಿ ಮತ್ತು ಹಿಂದಿಯಲ್ಲಿ ಒಂದು ಕರಪತ್ರವನ್ನು ಮುದ್ರಿಸಿ ಕಲ್ಕತ್ತೆಯ ಜನರಿಗೆ ಹಂಚಿದರು. ಅದರಲ್ಲಿ ಹೀಗೆ ಬರೆದಿತ್ತು: "ಹೆದರದಿರಿ. ಗಾಬರಿಯಾಗಬೇಕಾದ ಆವಶ್ಯಕತೆಯಿಲ್ಲ. ಗಾಳಿಸಮಾಚಾರಕ್ಕೆ ಕಿವಿಗೊಡಬೇಡಿ. ಬ್ರಿಟಿಷ್ ಸರ್ಕಾರ ಬಲವಂತವಾಗಿ ಚುಚ್ಚುಮದ್ದನ್ನು ಕೊಡುತ್ತಿಲ್ಲ. ಶ್ರೀಮಂತರು ಓಡಿಹೋಗಲಿ. ನಾವು ಬಡವರು. ನಮಗೆ ಬಡವರ ಬವಣೆ ಅರ್ಥವಾಗುತ್ತದೆ. ನಿಮಗೆ ಸಹಾಯ ಮಾಡುವವರು ಯಾರೂ ಇಲ್ಲದಿದ್ದರೆ, ಕೂಡಲೆ ಶ್ರೀರಾಮಕೃಷ್ಣರ ಸೇವಕರಾದ ಬೇಲೂರು ಮಠದಲ್ಲಿರುವ ನಮಗೆ ತಿಳಿಸಿ. ಭಗವತಿಯ ಕೃಪೆಯಿಂದ ನಿಮಗೆ ಸಾಧ್ಯವಾದ ನೆರವನ್ನು ನೀಡುತ್ತೇವೆ."

ಅದೃಷ್ಟವಶಾತ್ ಪಿಡುಗು ಬೇಗನೆ ಇಳಿಮುಖವಾಯಿತು. ಯಾವ ಪರಿಹಾರಕಾರ್ಯವನ್ನೂ ಮಾಡಬೇಕಾಗಿ ಬರಲಿಲ್ಲ. ಪ್ಲೇಗ್ ಮುಂದಿನ ವರ್ಷ ೧೮೯೯ರಲ್ಲಿ ಮತ್ತೆ ತಲೆದೋರಿತು. ಬಹುಸಂಖ್ಯೆಯಲ್ಲಿ ಜನ ಸಾವನ್ನಪ್ಪಿದರು. ಮತ್ತೆ ಭೀತಿ ಆವರಿಸಿತು. ಅಂದಿನ ವರ್ಷದ ಮಾರ್ಚ್ ೩೧ರಂದು ರಾಮಕೃಷ್ಣ ಮಿಷನ್ ಸ್ವಾಮೀಜಿಯವರ ನೇತೃತ್ವದಲ್ಲಿ ತಡವಿಲ್ಲದೆ ಪ್ಲೇಗ್ ನಿವಾರಣೆಯ ಕೆಲಸಕ್ಕೆ ಕೈಹಾಕಿತು. ಸ್ವಾಮೀಜಿಯವರೇ ಒಂದು ಬಡ ಮನೆಯಲ್ಲಿ ವಾಸವಿದ್ದು ಜನರಿಗೆ ಧೈರ್ಯ ನೀಡಿ ಸೇವಾಕಾರ್ಯ ಮಾಡುವವರನ್ನು ಹುರಿದುಂಬಿಸಿದರು. ಈ ಕಾರ್ಯದ ನಿರ್ವಹಣೆಯ ಸಂಪೂರ್ಣ ಜವಾಬ್ದಾರಿಯನ್ನು ಸೋದರಿ ನಿವೇದಿತಾಗೆ ವಹಿಸಲಾಯಿತು. ಸ್ವಾಮಿ ಸದಾನಂದರು ಈ ಕೆಲಸಕ್ಕೆ ಹೆಗಲು ಕೊಟ್ಟರು. ಸ್ವಾಮಿ ಶಿವಾನಂದರು, ನಿತ್ಯಾನಂದರು ಮತ್ತು ಆತ್ಮಾನಂದರು ಸಹಾಯಕರಾಗಿ ದುಡಿದರು. ಭಗಿನಿ ನಿವೇದಿತಾ ಮನೆಗಳನ್ನು, ಗಲ್ಲಿಗಳನ್ನು ಗುಡಿಸಿ ಇತರರಿಗೆ ಉತ್ಕೃಷ್ಟ ಮಾದರಿಯಾದರು.

ಮಠದ ಸಾಧುಗಳು ಮತ್ತು ಸ್ವಯಂಸೇವಕರು ಪ್ಲೇಗ್ ನಿವಾರಣೆಗೆ ಹಗಲು ರಾತ್ರಿ ಶ್ರಮಿಸಿದರು. ದುರ್ವಾಸನೆಯಿಂದ ಕೂಡಿದ ಬಚ್ಚಲುಗಳನ್ನು, ಮಲಮೂತ್ರದ ಕೋಣೆಗಳನ್ನು ಸ್ವಚ್ಛಗೊಳಿಸಿ ಕ್ರಿಮಿನಾಶಕಗಳನ್ನು ಸಿಂಪಡಿಸಿದರು. "ಕಲ್ಕತ್ತೆಯ ಅತ್ಯಂತ ಕೊಳಕು ರಸ್ತೆಗಳಲ್ಲಿ ಮತ್ತು ಕೊಳಚೆ ನಿವಾಸಗಳು ಇರುವೆಡೆಯಲ್ಲೆಲ್ಲ ರಾಮಕೃಷ್ಣ ಮಿಷನ್ನಿನ ಸ್ವಯಂಸೇವಕರನ್ನು ನೋಡಬಹುದಾಗಿತ್ತು. ಪ್ಲೇಗ್ ಇರುವೆಡೆಯಲ್ಲಿ ಶುಚಿಗೊಳಿಸುತ್ತ, ಜನರನ್ನು ಹುರಿದುಂಬಿಸುತ್ತ, ಅವರ ಕಷ್ಟಗಳಿಗೆ ಸಮಾಧಾನ ನೀಡುತ್ತ, ನೈರ್ಮಲ್ಯದ ತಿಳಿವಳಿಕೆ ಕೊಡುತ್ತ ಅವರೆಲ್ಲ ಕೆಲಸ ಮಾಡುತ್ತಿದ್ದರು. ಇಷ್ಟನ್ನೆಲ್ಲ ಹೆಚ್ಚು ಹಣ ಖರ್ಚುಮಾಡದೆ ಮಾಡಿದರು" ಎಂದು ಏಪ್ರಿಲ್ ೧೯೦೦ರ ಒಂದು ದಿನ 'ಇಂಡಿಯನ್ ಮಿರರ್' ಪತ್ರಿಕೆ ವರದಿ ಮಾಡಿತು. ಪಿಡುಗು ಇಳಿಮುಖವಾದರೂ ೧೯೦೦ರಲ್ಲಿ ಅದು ಮತ್ತೆ ಹರಡಿತು. ರೋಗ ಸಂಪೂರ್ಣವಾಗಿ ನಿರ್ಮೂಲನವಾಗುವವರೆಗೂ ರಾಮಕೃಷ್ಣ ಮಿಷನ್ ನಿವಾರಣಾಕಾರ್ಯವನ್ನು ಮುಂದುವರೆಸಿತು. ಇದಕ್ಕಾಗಿ ದುಡಿದವರ ನಿಷ್ಠೆ ಮತ್ತು ತ್ಯಾಗ ಮುಂದಿನವರಿಗೆ ಸ್ಫೂರ್ತಿಯ ಆಗರವಾಯಿತು.



ನಂತರದ ೧೦೦ ವರ್ಷಗಳಲ್ಲಿ ರಾಮಕೃಷ್ಣ ಮಿಷನ್ ೧೩೪ ಪರಿಹಾರ ಕಾರ್ಯಗಳನ್ನು ದೇಶದ ಎಲ್ಲ ರಾಜ್ಯಗಳಲ್ಲಿಯೂ ನಡೆಸಿದೆ. ಪರಿಹಾರಗಳ ವಿಧಾನ ಮತ್ತು ಖರ್ಚಿನ ವಿವರಗಳು ಅದು ಕಾಲಕಾಲಕ್ಕೆ ಹೊರಡಿಸಿರುವ ವರದಿಗಳಲ್ಲಿ ನೋಡಲು ಸಿಗುತ್ತವೆ. ಇವುಗಳಲ್ಲಿ ಪ್ರಮುಖವಾದ ಕೆಲವು ಪರಿಹಾರ ಕಾರ್ಯಗಳ ವಿವರಗಳನ್ನು ಸಂಕ್ಷೇಪವಾಗಿ ಇಲ್ಲಿ ಕೊಡಲಾಗಿದೆ. ಇವುಗಳಿಂದ, ಸಮಸ್ಯೆಯ ತೀವ್ರತೆ, ಪರಿಹಾರದ ಪ್ರಮಾಣ ಮತ್ತು ಸವಾಲುಗಳನ್ನು ನಾವು ಊಹಿಸಿಕೊಳ್ಳಲು ಸಹಾಯಕವಾಗುತ್ತದೆ.

**ಬಿಹಾರದ ಭೂಕಂಪ:** ಪ್ರಪಂಚದ ಎರಡು ಮಹಾಯುದ್ಧಗಳ (೧೯೧೪–೧೫) ಮಧ್ಯಕಾಲದಲ್ಲಿ ಭಾರತವು ವಿನಾಶಕಾರಿಯಾದ ಭೂಕಂಪದಿಂದ ಕಷ್ಟಕ್ಕೊಳಗಾಯಿತು. ಭೂಕಂಪದಿಂದ ಇಡೀ ಬಿಹಾರ್ ರಾಜ್ಯ ನಡುಗಿತು. ಅಸಂಖ್ಯ ಜನರು ಮತ್ತು ದನಕರುಗಳು ಮರಣಹೊಂದಿದುವು. ಸಹಸ್ರಗಟ್ಟಲೆ ಮನೆಗಳು ನೆಲಸಮವಾದುವು. ಅಪಾರ ಹಾನಿಯುಂಟಾಯಿತು. ಅಲ್ಲಿಗೆ ರಾಮಕೃಷ್ಣ ಮಿಷನ್ ಪರಿಹಾರ ಸಾಮಗ್ರಿಗಳೊಡನೆ ಧಾವಿಸಿತು. ನಂತರ ಜನರಿಗೆ ಬಿದ್ದುಹೋದ ಮನೆಗಳನ್ನು ಕಟ್ಟಿಕೊಳ್ಳಲು ಸಹಾಯ ಮಾಡಲಾಯಿತು. ಆಗ ಮಿಷನ್ನಿನ ಕಾರ್ಯದರ್ಶಿಗಳಾಗಿದ್ದ ಸ್ವಾಮಿ ವಿರಜಾನಂದರು ೧೯೩೪, ಜೂನ್ ೧೭ರ ವರದಿಯಲ್ಲಿ ಹೀಗೆ ಬರೆದಿದ್ದಾರೆ:

"ಅವಶ್ಯಕ ಪರಿಹಾರಕಾರ್ಯಗಳನ್ನು ಮಾಡಿದ ನಂತರ ಮುಜಾಫರ್‌ಪುರ್ ಜಿಲ್ಲೆಯ ಸೀತಾಮಾರಿ, ಗಾಂಗೇಯ ಮತ್ತು ಪಪ್ರಿ ಹಾಗೂ ದರ್ಭಾಂಗ ಜಿಲ್ಲೆಯ ಜಯನಗರದಲ್ಲಿರುವ ಪರಿಹಾರ ಕೇಂದ್ರಗಳನ್ನು ಮುಚ್ಚಲಾಗಿದೆ. ಇನ್ನು ಏಳು ಜಿಲ್ಲೆಗಳಲ್ಲಿ ಪರಿಹಾರಕಾರ್ಯ ಮುಂದುವರೆದಿದೆ. ಮಧ್ಯಮವರ್ಗದ ಕುಟುಂಬಗಳಿಗೆ ಸಾಕಷ್ಟು ಭದ್ರವಾದ ಮನೆಗಳನ್ನು ಕಟ್ಟಿಕೊಡುವುದು ಮತ್ತು ಅದಕ್ಕೆ ಬೇಕಾದ ಸಾಮಗ್ರಿಯನ್ನು ಒದಗಿಸುವುದು, ಭಗ್ನವಾದ ಮನೆಗಳ ದುರಸ್ತಿ, ಹಾಳಾದ ಬಾವಿಗಳನ್ನು ಸರಿಪಡಿಸುವುದು, ಹೊಸ ಬಾವಿಗಳನ್ನು ತೋಡುವುದು – ಇವಕ್ಕೆ ಪ್ರಾಧಾನ್ಯತೆ ಕೊಡಲಾಗುತ್ತಿದೆ. ಚಂಪಾರಣ್ ಜಿಲ್ಲೆಯಲ್ಲಿ ಮಾತ್ರವೇ ಅಕ್ಕಿಯ ವಿತರಣೆ ನಡೆಯುತ್ತಿದೆ. ಮುಜಾಫರ್‌ಪುರ್‌ನಲ್ಲಿ ೮೭ ಸಂಪೂರ್ಣವಾದ ಸ್ವತಂತ್ರ ಮನೆಗಳುಳ್ಳ 'ರಾಮಕೃಷ್ಣನಗರ' ಎಂಬ ಕಾಲೊನಿ ರೂಪುಗೊಂಡಿದೆ. ಹಳೆಯ ಮನೆಗಳಿದ್ದ ಸ್ಥಳದಲ್ಲಿಯೇ ೭೬ ಗುಡಿಸಲುಗಳು ನಿರ್ಮಾಣವಾಗಿವೆ. ಇನ್ನೂ ೧೫ ಗುಡಿಸಲುಗಳನ್ನು ಕಟ್ಟಲಾಗುತ್ತಿದೆ. ४೦ ಗುಡಿಸಲುಗಳನ್ನು ಕಟ್ಟಬೇಕಾಗಿದೆ. ३೬ ಗುಡಿಸಲುಗಳನ್ನು ಕಟ್ಟಲು ಬೇಕಾದ ಸಾಮಗ್ರಿ ಮತ್ತು ಹಣವನ್ನು ಒದಗಿಸಲಾಗಿದೆ... ಪರಿಹಾರಕಾರ್ಯವನ್ನು ಇನ್ನೂ ಸ್ವಲ್ಪ ಕಾಲ ಮುಂದುವರಿಸಬೇಕಾಗಿದೆ. ಮಳೆ ಪ್ರಾರಂಭ ವಾಗಿರುವುದರಿಂದ ನಿರ್ಮಾಣಕಾರ್ಯವನ್ನು ಬೇಗನೆ ಮುಗಿಸಲು ಪ್ರಯತ್ನಮಾಡಲಾಗುತ್ತಿದೆ. ದಾನಿಗಳ ಉದಾರ ಕೊಡುಗೆಯಿಂದಾಗಿ ಇದುವರೆಗೆ ಇಷ್ಟು ಕಾರ್ಯವನ್ನು ಮಾಡಲು ಸಾಧ್ಯವಾಗಿದೆ."

ಒಂದು ತಿಂಗಳಿನ ನಂತರ ಸ್ವಾಮಿ ವಿರಜಾನಂದರು ಇನ್ನೊಂದು ವರದಿಯನ್ನು ಕೊಟ್ಟರು: "ಬಿಹಾರದ ಪರಿಹಾರ ಕಾರ್ಯ ಇನ್ನೇನು ಮುಗಿಯಲಿದೆ. ಮುಜಾಫರ್‌ಪುರ್‌ನ ಕೆಲವು ಕೇಂದ್ರಗಳ ಹೊರತಾಗಿ ಮಿಕ್ಕೆಲ್ಲ ಕೇಂದ್ರಗಳನ್ನೂ ಮುಚ್ಚಲಾಗಿದೆ. ಇನ್ನೊಂದು ತಿಂಗಳಲ್ಲಿ ಎಲ್ಲ ಕಾರ್ಯಗಳೂ

ಮುಗಿಯುವುವು. ಭೂಕಂಪ ಪರಿಹಾರಕಾರ್ಯಕ್ಕೆ ಇದುವರೆಗೆ ೧,೧೨,೭೨೧ ರೂಪಾಯಿಗಳು ದೇಣಿಗೆಯಾಗಿ ಬಂದಿವೆ. ೧,೧೦,೦೬೭ ರೂಪಾಯಿಗಳು ಖರ್ಚಾಗಿವೆ. ಉಳಿದ ೨,೬೫೪ ರೂಪಾಯಿಗಳಲ್ಲಿ ಉಳಿದ ಕೆಲಸಗಳನ್ನು ಮುಗಿಸಲಾಗುವುದು."

ಮೇಲಿನ ವರದಿಯಿಂದ ಪರಿಹಾರಕಾರ್ಯದ ಪ್ರಮಾಣ ಮತ್ತು ವಿಸ್ತಾರವಲ್ಲದೆ, ಸಾರ್ವಜನಿಕರಿಗೆ ನಿಖರವಾದ ಮಾಹಿತಿಯನ್ನು ಒದಗಿಸಲು ತೆಗೆದುಕೊಂಡ ಶ್ರಮವನ್ನೂ ಗಮನಿಸಲು ನಮಗೆ ಸಾಧ್ಯವಾಗುವುದು.

**ಪೂರ್ವಬಂಗಾಳದ ಹಿಂಸಾಚಾರ:** ಪೂರ್ವಬಂಗಾಳದ ನೌಖಾಲಿ ಮತ್ತು ತಿಪ್ಪೆರ ಜಿಲ್ಲೆಗಳಲ್ಲಿ ಕೋಮು ಹಿಂಸಾಚಾರ ೧೯೪೬ರಲ್ಲಿ ಪ್ರಾರಂಭವಾಯಿತು. ಸುದ್ದಿ ತಲಪುತ್ತಿದ್ದಂತೆ ರಾಮಕೃಷ್ಣ ಮಿಷನ್ನಿನ ಸಾಧುಗಳ ತಂಡವೊಂದು ಅಲ್ಲಿಗೆ ಹೊರಟಿತು. ಚಾಂದ್‌ಪುರ್‌ನಲ್ಲಿ ಸೇವಾಕೇಂದ್ರವನ್ನು ಸ್ಥಾಪಿಸಿ ಅಲ್ಲಿಂದ ಪ್ರತಿನಿತ್ಯ ಸುಮಾರು ೨,೦೦೦ ಜನರಿಗೆ ಆಹಾರ ಸಾಮಗ್ರಿಗಳನ್ನು ಒದಗಿಸಲಾಯಿತು. ಸರಕಾರ ನಡೆಸುತ್ತಿದ್ದ ಎರಡು ಕೇಂದ್ರಗಳ ಜವಾಬ್ದಾರಿಯನ್ನೂ ರಾಮಕೃಷ್ಣ ಮಿಷನ್ ವಹಿಸಿಕೊಂಡು ಪ್ರತಿನಿತ್ಯ ೩,೦೦೦ ಜನರಿಗೆ ಆಹಾರ ಒದಗಿಸಿತು. ಮಿಷನ್ನಿನ ಸೇವೆ ೧೨೦ ಗ್ರಾಮಗಳಲ್ಲಿ ಎರಡು ವರ್ಷಗಳಿಗೂ ಮೀರಿ ನಡೆಯಿತು. ಮಿಷನ್ನಿನ ಕಡೆಯಿಂದ ಆರ್ಥಿಕ ಸಹಾಯ, ಶಿಕ್ಷಣ, ಔಷಧಿ, ವೈದ್ಯಕೀಯ ಚಿಕಿತ್ಸೆ, ಪುನರ್ವಸತಿ, ಗೃಹನಿರ್ಮಾಣ, ನೊಂದವರಿಗೆ ಆಧ್ಯಾತ್ಮಿಕ ಸಾಂತ್ವನ ಮುಂತಾದ ನೆರವನ್ನು ನೀಡಲಾಯಿತು. ಈ ಸೇವಾಕಾರ್ಯಕ್ಕೆ ತಗಲಿದ ವೆಚ್ಚ ೩, ೨೫, ೫೦೦ ರೂಪಾಯಿಗಳು.

**ಕುರುಕ್ಷೇತ್ರದ ವಲಸಿಗರು:** ೧೯೪೭ರಲ್ಲಿ ಭಾರತದಿಂದ ಪಾಕಿಸ್ತಾನ ಬೇರೆಯಾದಾಗ ಪಂಜಾಬ್ ಪ್ರಾಂತ್ಯವೂ ಇಬ್ಭಾಗವಾಯಿತು. ಪಾಕಿಸ್ತಾನದ ಕಡೆಯಿಂದ ಜನರು ತಂಡೋಪತಂಡವಾಗಿ ಭಾರತಕ್ಕೆ ಬಂದರು. ಹಿಂದೆ ರಾಮಕೃಷ್ಣ ಮಿಷನ್ನಿನ ಸೇವಾಕಾರ್ಯವನ್ನು ಮೆಚ್ಚಿಕೊಂಡಿದ್ದ ಭಾರತ ಸರ್ಕಾರ, ಈ ಬಾರಿಯೂ ಅದರ ಸಹಾಯವನ್ನು ಕೋರಿತು. ಈ ಕಾರ್ಯ ಅಕ್ಟೋಬರ್ ೧೯೪೭ ರಲ್ಲಿ ಪ್ರಾರಂಭವಾಗಿ ಎಂಟು ತಿಂಗಳ ಕಾಲ ನಡೆಯಿತು. ಭಾರತ ಸರ್ಕಾರ ೨೦,೦೦೦ ಕಂಬಳಿಗಳನ್ನು ಆವಶ್ಯಕತೆ ಇರುವ ವಲಸಿಗರಿಗೆ ವಿತರಿಸಬೇಕಾಗಿತ್ತು. ಈ ಕೆಲಸವನ್ನು ಮಾಡುವುದಕ್ಕಾಗಿ ಕಾರ್ಯಕರ್ತರು ಮಧ್ಯರಾತ್ರಿಯಲ್ಲಿ ಗುಡಾರದಿಂದ ಗುಡಾರಕ್ಕೆ ಹೋಗಿ, ಬೆಚ್ಚನೆಯ ಹೊದಿಕೆ ಇಲ್ಲದವರನ್ನು ಗುರುತಿಸಿ, ಅವರಿಗೆಲ್ಲ ಗುರುತಿನ ಚೀಟಿ ಕೊಟ್ಟರು. ಈ ಚೀಟಿ ಇರುವವರಿಗೆ ಮರುದಿನ ಸರ್ಕಾರಿ ಮಳಿಗೆಯಲ್ಲಿ ಬೆಚ್ಚನೆಯ ಕಂಬಳಿ ಕೊಡಲಾಯಿತು. ಇದರ ಜತೆಗೆ ಮಿಷನ್ನಿನವರು ಒಂದು ಪೌಂಡು ಹಣ್ಣಿನ ರಸ ಇರುವ ೪,೦೮,೦೯೬ ಟಿನ್‌ಗಳು, ೫೧,೬೦೦ ಬಹುಪೋಷಕಾಂಶ ಮಾತ್ರೆಗಳು, ೧೩,೯೮೮ ಉಡುಪುಗಳು, ೨೩,೦೩ ಕಂಬಳಿಗಳು, ಮತ್ತು ೭,೮೨೦ ಪಾತ್ರೆಗಳನ್ನು ವಿತರಿಸಿದರು. ಇವುಗಳಲ್ಲಿ ಬಹುಭಾಗ ಸರ್ಕಾರದವರು ಕೊಟ್ಟಿದ್ದಾಗಿತ್ತು. ಇದರ ಜತೆಗೆ ಮಿಷನ್ನಿನವರು ಒಂದು ಹಾಲಿನ ಕ್ಯಾಂಟೀನ್ ಮತ್ತು ನಾಲ್ಕು ಹೊಸ ಚಿಕಿತ್ಸಾಲಯಗಳನ್ನು ತೆರೆದರು. ನಿತ್ಯವೂ ಸರಾಸರಿ ೨೭೫ ರೋಗಿಗಳು, ಸಾಮಾನ್ಯವಾಗಿ ಅತಿಸಾರದ ಕಾಯಿಲೆಗೆ ಇಲ್ಲಿ ಔಷಧಿ ಪಡೆಯುತ್ತಿದ್ದರು.

**ಪೂರ್ವ ಪಾಕಿಸ್ತಾನದ ನಿರಾಶ್ರಿತರು:** ೧೯೪೭ರಲ್ಲಿ ಪೂರ್ವ ಪಾಕಿಸ್ತಾನದಿಂದ ನಿರಾಶ್ರಿತರು ಪಶ್ಚಿಮ ಬಂಗಾಳಕ್ಕೆ ಬರಲಾರಂಭಿಸಿದರು. ರಾಮಕೃಷ್ಣ ಮಿಷನ್ ಸಣ್ಣ ಪ್ರಮಾಣದಲ್ಲಿ ಇವರ ಕ್ಷೇಮ ನೋಡಿಕೊಳ್ಳುವ ಕೆಲಸವನ್ನು ಪ್ರಾರಂಭಿಸಿತು. ತಂದೆತಾಯಿಗಳಿಂದ ಬೇರೆಯಾದ ಬಾಲಕಬಾಲಕಿಯರನ್ನು ಮಿಷನ್ನಿನ ಕೆಲವು ಸಂಸ್ಥೆಗಳಲ್ಲಿ ಇರಿಸಲಾಯಿತು. ಅಗರ್ತಲಾದಲ್ಲಿ ಕ್ರಮೇಣ ಒಂದು ನಿರಾಶ್ರಿತರ ಕಾಲೊನಿ ನಿರ್ಮಿಸಲಾಯಿತು. ೧೯೪೯ರಲ್ಲಿ ಅಸ್ಸಾಂನ ಲುಂಡಿಂಗ್‌ನಲ್ಲಿ ಒಂದು ಪರಿಹಾರ ಕೇಂದ್ರವನ್ನೂ ತೆರೆಯಲಾಯಿತು. ೧೯೪೮ರ ಮೇ ತಿಂಗಳಿನಲ್ಲಿ ಪಶ್ಚಿಮ ಬಂಗಾಳದ ಸರ್ಕಾರದ ಕೋರಿಕೆಯ ಮೇರೆಗೆ ಪೂರ್ವಬಂಗಾಳದ ವಲಸಿಗರಿಗೆ, ಕಲ್ಕತ್ತೆಯ ಕೈಗಾರಿಕಾ ಪ್ರದೇಶದಲ್ಲಿ ತುರ್ತುಪರಿಹಾರ ನೀಡುವ ಕಾರ್ಯವನ್ನು ಕೈಗೊಳ್ಳಲಾಯಿತು. ಸರ್ಕಾರ ಕೊಟ್ಟ ಆಹಾರಧಾನ್ಯ, ಹಣ ಮತ್ತು ಬಟ್ಟೆಯನ್ನು ಮಿಷನ್ನಿನ ಶಾರದಾಪೀಠ, ಬೇಲೂರು, ಮತ್ತು ರಾಹರಾದ ಬಾಲಕರ ವಸತಿಗೃಹ – ಈ ಎರಡು ಕೇಂದ್ರಗಳ ಮೂಲಕ ವಿತರಿಸಲಾಯಿತು. ಈ ಕಾರ್ಯವನ್ನು ಮಾರ್ಚ್ ೧೯೪೯ರವರೆಗೂ ಮುಂದುವರೆಸಲಾಯಿತು.

ಕೋಮು ಹಿಂಸಾಚಾರ ಮತ್ತೆ ಮುಂದುವರೆದ ಕಾರಣ ಪಶ್ಚಿಮ ಬಂಗಾಳದ ಐದಾರು ಜಿಲ್ಲೆಗಳಲ್ಲಿ ಪರಿಹಾರ ಕೇಂದ್ರಗಳನ್ನು ತೆರೆದು ಸಾವಿರಾರು ವಲಸಿಗರಿಗೆ ವಸತಿ, ಆಹಾರ ಮತ್ತು ಬಟ್ಟೆಯನ್ನು ಕೊಡಲಾಯಿತು. ಢಾಕಾ ಮತ್ತು ನಾರಾಯಣ ಗಂಜ್‌ನ ರಾಮಕೃಷ್ಣ ಮಿಷನ್ ಕೇಂದ್ರಗಳಲ್ಲಿ ೩೦೦ ವಲಸಿಗರಿಗೆ ಅನೇಕ ದಿನಗಳವರೆಗೆ ಆಹಾರ ಮತ್ತು ವಸತಿಯನ್ನು ಒದಗಿಸಲಾಯಿತು. ೧೯೫೦ರ ಜೂನ್ ತಿಂಗಳಿನಲ್ಲಿ ಭಾರಿ ಸಂಖ್ಯೆಯಲ್ಲಿ ವಲಸಿಗರು ಕಲ್ಕತ್ತೆಯ ಸಿಯಾಲ್ದಾ ರೈಲು ನಿಲ್ದಾಣದಲ್ಲಿ ಬೀಡುಬಿಟ್ಟರು. ಅಂಥ ಸುಮಾರು ೧೨,೦೦೦ ಜನರಿಗೆ ಮೂರು ತಿಂಗಳ ಕಾಲ ಪ್ರತಿನಿತ್ಯ ಅಡುಗೆ ಮಾಡಿ ಊಟ ಬಡಿಸಲಾಯಿತು. ನಂತರ ವಲಸಿಗರಿಗೆ ವ್ಯವಸ್ಥಿತ ರೀತಿಯಲ್ಲಿ ವಸತಿ ಕಲ್ಪಿಸುವ ಪ್ರಯತ್ನವನ್ನು ರಾಮಕೃಷ್ಣ ಮಿಷನ್ ಕೈಗೆತ್ತಿಕೊಂಡಿತು. ಸುಮಾರು ೪೦೦ ಸಂಸಾರಗಳಿಗೆ ಅಗರ್ತಲ, ಸೋನೆಬಿಲ್, ಮಾಲ್ಡ, ಸಿಮುರಲಿ ಮತ್ತು ಬಂಡಿಪುರ್‌ನಲ್ಲಿ ವಸತಿ ಕಲ್ಪಿಸಲಾಯಿತು. ೧೯೫೩ರ ವೇಳೆಗೆ ಇದರ ಸಂಖ್ಯೆ ೧,೫೮೩ಕ್ಕೆ ಏರಿತು.

**ಬರ್ಮಾದಿಂದ ಹೊರಬಿದ್ದವರಿಗೆ ಪರಿಹಾರ:** ರಾಮಕೃಷ್ಣ ಮಿಷನ್ನಿನ ಮತ್ತೊಂದು ಗಮನಾರ್ಹ ಪರಿಹಾರಕಾರ್ಯವೆಂದರೆ, ಎರಡನೆ ಮಹಾಯುದ್ಧದ ನಂತರ ಬರ್ಮಾದಿಂದ ಹೊರಬಂದವರಿಗೆ ಡಿಮಾಪುರದಲ್ಲಿ ನೀಡಿದ ನೆರವು. ದೇಶದ ವಿಭಜನೆಯಾದ

ನಂತರ ಬರ್ಮಾದಲ್ಲಿ ನೆಲೆಸಿದ್ದ ಭಾರತೀಯರು ಅಲ್ಲಿನ ದುಃಸ್ಥಿತಿಯಲ್ಲಿ ಇರಲಾರದೆ ಭಾರಿ ಸಂಖ್ಯೆಯಲ್ಲಿ ಕಾಲ್ನಡಿಗೆಯಲ್ಲಿ ಭಾರತಕ್ಕೆ ಡಿಮಾಪುರದ ಮೂಲಕ ಬಂದರು. ಅವರ ಸ್ಥಿತಿ ಶೋಚನೀಯವಾಗಿತ್ತು. ಆಗ ಷಿಲಾಂಗ್‌ನ ರಾಮಕೃಷ್ಣ ಮಿಷನ್ನಿನ ಅಧ್ಯಕ್ಷರಾಗಿದ್ದ ಸ್ವಾಮಿ ಭೂತೇಶಾನಂದಜಿ ಈ ಪರಿಹಾರ ಕಾರ್ಯದ ಹೊಣೆ ಹೊತ್ತರು. ಈ ಬಗ್ಗೆ ಅವರು ನಂತರದಲ್ಲಿ ನೀಡಿದ ವಿವರಣೆ ಹೀಗಿತ್ತು:

"ಸರ್ಕಾರದ ಕೋರಿಕೆಯ ಮೇರೆಗೆ ಡಿಮಾಪುರದಲ್ಲಿ, ಬರ್ಮಾದಿಂದ ದೂಡಲ್ಪಟ್ಟವರಿಗಾಗಿ ಒಂದು ಕ್ಯಾಂಪನ್ನು ೧೯೪೪ರಲ್ಲಿ ತೆರೆಯಲಾಯಿತು. ತಕ್ಷಣ ನಾವು ಮಾಡಬೇಕಾಗಿದ್ದುದೆಂದರೆ, ವಲಸೆ ಬರುತ್ತಿದ್ದವರನ್ನು ಸ್ವಾಗತಿಸಿ, ಆಹಾರ ಕೊಟ್ಟು, ಸೋಂಕು ಇರುವವರಿಗೆ ಔಷಧಿ ಕೊಟ್ಟು, ಕಾಯಿಲೆ ಇರುವ ಮಕ್ಕಳಿಗೆ ಹಾಲನ್ನು ಕೊಟ್ಟು, ನಂತರ ಅವರನ್ನು ಬೇರೆ ಸ್ಥಳಕ್ಕೆ ಕರೆದೊಯ್ಯಲು ವ್ಯವಸ್ಥೆ ಮಾಡುವುದಾಗಿತ್ತು. ಪರಿಹಾರಕಾರ್ಯಕ್ಕೆ ಬೇಕಾದುದನ್ನು ಬಹುಮಟ್ಟಿಗೆ ಸರ್ಕಾರ ಕೊಟ್ಟಿತ್ತು; ಅದರ ನಿರ್ವಹಣೆಯನ್ನು ಮಿಷನ್ ಮಾಡಿತು. ಆದರೆ ಇದನ್ನು ಮಾಡುವುದು ಬಹಳ ಕಷ್ಟವಾದುದಾಗಿತ್ತು, ಏಕೆಂದರೆ, ಸ್ಥಳವೆಲ್ಲ ಮಣ್ಣು, ಕೆಸರಿನಿಂದ ಕೂಡಿತ್ತು. ಇದರ ಜೊತೆಗೆ ಮರಣ ಸನ್ನಿಹಿತವಾಗಿರುವ ರೋಗಿಗಳ ಆರ್ತನಾದ ಬೇರೆ. ಅಲ್ಲದೆ, ಆಹಾರ, ವಸತಿ, ಕುಡಿಯುವ ನೀರು, ಬಟ್ಟೆ ಮತ್ತು ಇತರ ನಿತ್ಯೋಪಯೋಗಿ ವಸ್ತುಗಳಿಲ್ಲದೆ ನಿರಾಶರಾಗಿ ಹತಾಶರಾಗಿದ್ದ ಜನರ ಗದ್ದಲ ಕೂಡ ಅತಿ ಹೆಚ್ಚಾಗಿತ್ತು. ಅಲ್ಲದೆ, ಶತ್ರುಸೈನ್ಯದವರು ಆಗಾಗ್ಗೆ ಬಾಂಬ್ ಹಾಕುತ್ತಿದ್ದುದರಿಂದ, ದಿಗಿಲು, ಭಯ, ಆತಂಕ ಕ್ಯಾಂಪ್‌ನಲ್ಲಿ ಉಂಟಾಗುತ್ತಿದ್ದವು. ಬಹುಶಃ ರಾಮಕೃಷ್ಣ ಮಿಷನ್ನಿನ ಪರಿಹಾರಕಾರ್ಯದ ಚರಿತ್ರೆಯಲ್ಲಿಯೇ ಯುದ್ಧಕಾಲದ ಈ ಪರಿಹಾರಕಾರ್ಯವು ಅತ್ಯಂತ ಕಷ್ಟಕರವಾಗಿತ್ತೆಂದು ತೋರುತ್ತದೆ."

**ಬಾಂಗ್ಲಾ ದೇಶದ ವಲಸಿಗರಿಗೆ ಪರಿಹಾರ, ೧೯೭೧:** ಪೂರ್ವ ಪಾಕಿಸ್ತಾನ ಬಾಂಗ್ಲಾದೇಶವಾದ ಸಂದರ್ಭದಲ್ಲಿ, ಪಾಕಿಸ್ತಾನದ ಸೈನ್ಯ ಆ ದೇಶದ ಆಡಳಿತವನ್ನು ಕೈಗೆ ತೆಗೆದುಕೊಂಡಿತು. ಆಗ ಜನರು ಕಷ್ಟಪಟ್ಟುದನ್ನು ಹಿಂದೆ ಎಂದೂ ಎಲ್ಲಿಯೂ ಕಾಣಲಾರೆವು. ಒಂದು ಕೋಟಿ ಜನರು ಪ್ರವಾಹದಂತೆ ಭಾರತದ ಗಡಿಯೊಳಗೆ ನುಗ್ಗಿದರು. ಹಿಂಸಾಚಾರ, ಮಾನಹಾನಿ, ಹತ್ಯೆ, ನಿರಾಹಾರ, ದಣಿವು, ಗುಂಡೇಟಿನ ಗಾಯ – ಇವುಗಳಿಂದ ಭಯಭೀತರಾಗಿ ನೊಂದ ಜನ, ವೃದ್ಧರು ಮತ್ತು ಮಕ್ಕಳು ಮುಂದುಗಾಣದೆ ಖಾಲಿ ಸ್ಥಳಗಳು ಇದ್ದ ಕಡೆಯಲ್ಲೆಲ್ಲ ಬೀಡುಬಿಟ್ಟರು. ಯಾವ ಸರ್ಕಾರವೂ ಈ ಪ್ರಮಾಣದ ಹೊರೆ ಹೊರಲಾಗದು. ಆದಕಾರಣ ಅನೇಕ ಸಂಸ್ಥೆಗಳು ಪರಿಹಾರ ಸಾಮಗ್ರಿಯೊಡನೆ ಸ್ಥಳಕ್ಕೆ ಬಂದುವು. ರಾಮಕೃಷ್ಣ ಮಿಷನ್ ಕೂಡ ಬಿಹಾರಿನ ಕಟಿಹಾರ್ ಆಶ್ರಮದ ಮೂಲಕ ಆಹಾರ ಮತ್ತು ಅವಶ್ಯಕ ಸಾಮಗ್ರಿಗಳನ್ನು ನೀಡಲು ೧೯೭೧ರ ಏಪ್ರಿಲ್‌ನಲ್ಲಿ ಮೊದಲ ಕ್ಯಾಂಪ್ ತೆರೆಯಿತು. ಸರ್ಕಾರ ತನ್ನ ಸ್ಥಳೀಯ ಅಧಿಕಾರಿಗಳ ಮೂಲಕ ಪರಿಹಾರವನ್ನು ಕೊಡಲು ಆಗಲೇ ಪ್ರಾರಂಭಿಸಿತ್ತು.

ಆದರೆ ನೊಂದ ಜನರಿಗೆ ಮಾನವೀಯ ಅನುಕಂಪ ಬೇಕಾಗಿತ್ತು. ರಾಮಕೃಷ್ಣ ಮಿಷನ್ ಪಂಥಮುಕ್ತ ರಾಜಕೀಯರಹಿತ ಸಂಸ್ಥೆಯಾದುದರಿಂದ ಅದರ ಕಾರ್ಯಕರ್ತರಿಗೆ ಒಂದು ಸಹಜವಾದ ಅನುಕೂಲವಿತ್ತು. ಇದರಿಂದ ಸರ್ಕಾರದ ಅಧಿಕಾರಿಗಳು ಹೆಚ್ಚಾಗಿ ರಾಮಕೃಷ್ಣ ಮಿಷನ್ನನ್ನು ಅವಲಂಬಿಸಿದರು. ಕೂಡಲೆ ರಾಮಕೃಷ್ಣ ಮಿಷನ್ ಭಾರತದ ಗಡಿಯಲ್ಲಿ ತ್ರಿಪುರ, ಮೇಘಾಲಯದಿಂದ ಪಶ್ಚಿಮ ಬಂಗಾಳದವರೆಗೆ ಅನೇಕ ಪರಿಹಾರ ಕೇಂದ್ರಗಳನ್ನು ತೆರೆದು, ಒಟ್ಟು ೨,೨೦,೦೦೦ ಜನರಿಗೆ ಆಹಾರ, ಬಟ್ಟೆ, ಔಷಧಿ ಮುಂತಾದುವನ್ನು ಒದಗಿಸಿತು. ಸರ್ಕಾರ ಸ್ವಲ್ಪಮಟ್ಟಿಗೆ ಹಣ ಮತ್ತು ಸಾಮಗ್ರಿಗಳನ್ನು ನೀಡಿತು. ಉಳಿದ ಭಾಗವನ್ನು ಮಿಷನ್ ಒದಗಿಸಿತು.

ಬೇಯಿಸಿದ ಆಹಾರವನ್ನು ಕೊಟ್ಟರೆ ಸೋಂಕು ಉಂಟಾಗುತ್ತಿತ್ತು. ಆದುದರಿಂದ ಆಹಾರಧಾನ್ಯ, ಸೊಪ್ಪು, ತರಕಾರಿಯನ್ನು ವಾರಕ್ಕೊಮ್ಮೆ, ಕೆಲವು ವೇಳೆ ವಾರಕ್ಕೆ ಎರಡು ಬಾರಿ ಕೊಡಲಾಗುತ್ತಿತ್ತು. ಅಲ್ಲದೆ ಮಕ್ಕಳಿಗೆ ಮತ್ತು ಪ್ರೌಢರಿಗೆ ಹಾಲನ್ನು ನಿತ್ಯವೂ ಬೆಳಗ್ಗೆ ನೀಡಲಾಯಿತು. ಕೆಲವರಿಗೆ ಸಿಗದೆ ಇರುವುದು ಅಥವಾ ಹೆಚ್ಚು ಬಾರಿ ಸಿಗುವುದನ್ನು ತಪ್ಪಿಸಲು, ಕುಟುಂಬಗಳ ಪಟ್ಟಿಯನ್ನು ವ್ಯವಸ್ಥಿತವಾಗಿ ಮಾಡಲಾಗಿತ್ತು. ಪ್ರತಿಯೊಬ್ಬ ಕುಟುಂಬದ ಯಜಮಾನರಿಗೆ ಗುರುತಿನ ಚೀಟಿಯನ್ನು ಕೊಡಲಾಗಿತ್ತು. ಆಹಾರವಲ್ಲದೆ, ಬಟ್ಟೆ, ಕಂಬಳಿ, ಪಾತ್ರೆ, ಪಾದರಕ್ಷೆ, ಸೋಪು, ಸೊಳ್ಳೆಪರದೆ, ಹಾಸಿಗೆ, ಪಠ್ಯಪುಸ್ತಕಗಳು, ಕಾಗದ, ಲೇಖನಸಾಮಗ್ರಿ, ಉಪಕರಣಗಳು ಮುಂತಾದುವನ್ನೂ ಒದಗಿಸಲಾಯಿತು. ಅನೇಕರಿಗೆ ಮನೆಯನ್ನು ಕಟ್ಟಲು ನೆರವು ನೀಡಲಾಯಿತು. ಅವರಿಗೆಲ್ಲ ಬೊಂಬು, ಮೊಳೆ, ಛಾವಣಿಯ ತಗಡು ಮುಂತಾದ ಕಟ್ಟಡದ ಸಾಮಗ್ರಿಗಳನ್ನು ಕೊಡಲಾಯಿತು. ಇದರಿಂದ ಆಯಾ ಕುಟುಂಬದವರೇ ಮನೆ ಕಟ್ಟಿಕೊಂಡರು.

೧೯೭೩ರ ಡಿಸೆಂಬರ್ ವೇಳೆಗೆ ೧೪೬೬ ಮನೆಗಳು ಮತ್ತು ಯೋಗ್ಯವಾದ ಕುಡಿಯುವ ನೀರಿಗಾಗಿ ೨೪೮ ಕೊಳವೆ ಬಾವಿಗಳು ನಿರ್ಮಾಣವಾಗಿದ್ದುವು. ರಾಮಕೃಷ್ಣ ಮಿಷನ್ ಬಾಂಗ್ಲಾದೇಶದಲ್ಲಿಯೇ ಒಂದು ಕೋಟಿ ರೂಪಾಯಿಗೂ ಹೆಚ್ಚು ಹಣವನ್ನು ಪರಿಹಾರಕ್ಕಾಗಿ ಖರ್ಚುಮಾಡಿತು. ವಲಸಿಗ ಮಕ್ಕಳಿಗೆ ಶಾಲೆಗಳು ಮತ್ತು ಕ್ರೀಡಾವಿಹಾರದ ವ್ಯವಸ್ಥೆಯನ್ನೂ ಮಾಡಲಾಯಿತು. ಒಟ್ಟಿನಲ್ಲಿ ಕಂಗಾಲಾಗಿದ್ದ ಜನ ಎಂದಿನಂತಾದರು. ಹೊಸದಾಗಿ ಸ್ವಾತಂತ್ರ್ಯ ಪಡೆದು ನಿರ್ಮಾಣವಾದ ಬಾಂಗ್ಲಾದೇಶದ ಸರ್ಕಾರದ ಕರೆಯ ಮೇರೆಗೆ ವಲಸಿಗರು ಕ್ರಮೇಣ ತಮ್ಮ ಸ್ವದೇಶಕ್ಕೆ ಹಿಂತಿರುಗಿದರು.

(ಮುಂದುವರೆಯುವುದು)

# ತ್ಯಾಗ ಹಾಗೂ ಸೇವೆಯನ್ನು ಕುರಿತಂತೆ
# ಸ್ವಾಮಿ ವಿವೇಕಾನಂದರ ಸಂದೇಶ



ಡಾ. ಆರ್. ಬಾಲಸುಬ್ರಹ್ಮಣ್ಯಂ



**ಸ್ವಾಮಿ ವಿವೇಕಾನಂದರು ನಾಡಿನ ಜನತೆಗೆ ನೀಡಿದ 'ಸೇವೆ – ತ್ಯಾಗ'ಗಳ ಸಂದೇಶವು ಭಾರತದ ಇಂದಿನ ಪರಿಸ್ಥಿತಿಗೆ ಎಷ್ಟು ಆವಶ್ಯಕ? ಸ್ವಾರ್ಥದ ಪರಿಧಿಯಿಂದ ಹೊರಬಂದು, ಆಧ್ಯಾತ್ಮಿಕ ನಿಲುವಿನಿಂದ ಸೇವೆಯ ವ್ರತವನ್ನು ಕೈಗೊಳ್ಳುವುದೇ ಇಂದಿನ ಆವಶ್ಯಕತೆ. ಈ ಅಂಶವನ್ನು ತಮ್ಮ ಸ್ವಂತ ಅನುಭವದ ಹಿನ್ನೆಲೆಯಲ್ಲಿ ವಿವರಿಸಿರುವ ಲೇಖಕರು ಮೈಸೂರು ಜಿಲ್ಲೆಯ ಸ್ವಾಮಿ ವಿವೇಕಾನಂದ ಯೂತ್ ಮೂವ್‌ಮೆಂಟ್‌ನ ಸಂಸ್ಥಾಪಕರು ಹಾಗೂ ವಿವೇಕಾನಂದ ಪೀಠ, ಮೈಸೂರು ವಿಶ್ವವಿದ್ಯಾಲಯದ ಪೂರ್ವ ಪ್ರಾಧ್ಯಾಪಕರು.**

ಭಾರತ ಬಹಳ ವೈವಿಧ್ಯ–ವೈಪರೀತ್ಯಗಳಿರುವ ದೇಶ. ಅಗಾಧ ಸಂಪತ್ತು ಒಂದೆಡೆ ಇದ್ದರೆ, ಒಪ್ಪತ್ತು ಊಟಕ್ಕೂ ಕಷ್ಟಪಡುವವರು ನಮ್ಮ ನಡುವೆಯೇ ಇದ್ದಾರೆ. ದೂರಸಂಪರ್ಕ, ಮಾಹಿತಿ–ತಂತ್ರಜ್ಞಾನ, ಬಾಹ್ಯಾಕಾಶ ಮುಂತಾದ ಕ್ಷೇತ್ರಗಳಲ್ಲಿ ನಮ್ಮ ಸಾಧನೆ ಹೆಮ್ಮೆಪಡುವಂಥದ್ದಾಗಿದ್ದರೂ, ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಕೇವಲ ಶೇ.೩೦ರಷ್ಟು ಜನರು ಶೌಚದ ವ್ಯವಸ್ಥೆಯನ್ನು ಹಾಗೂ ಕೇವಲ ಶೇ.೪೦ರಷ್ಟು ಜನರು ಶುದ್ಧ ಕುಡಿಯುವ ನೀರಿನ ಸೌಲಭ್ಯವನ್ನು ಹೊಂದಿದ್ದಾರೆಂಬ ಸಂಗತಿ ನೋವುಂಟುಮಾಡದಿರದು. ಇವತ್ತಿಗೂ ಶೇ. ೪೨ರಷ್ಟು ಮಕ್ಕಳು ಶಿಕ್ಷಣದಿಂದ ವಂಚಿತರಾಗಿ ತಮ್ಮ ಕುಟುಂಬಗಳ ಅಗತ್ಯತೆಗಳನ್ನು ಪೂರೈಸಲು ಹೊಲ–ಕಾರ್ಖಾನೆಗಳಲ್ಲಿ ದುಡಿಯುವ ಅನಿವಾರ್ಯತೆ ಹೊಂದಿದ್ದಾರೆ. ಜಗತ್ತಿನ ಎಲ್ಲೆಡೆ ತಾಂತ್ರಿಕ ಹಾಗೂ ತಂತ್ರಾಂಶ ಸಂಬಂಧಿತ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಸಾಮರ್ಥ್ಯ ಹೊಂದಿರುವ ನಾವು ನಮ್ಮದೇ ದೇಶದ ಬಡತನವನ್ನು ನಿವಾರಿಸಲು ಹೆಣಗುತ್ತಿದ್ದೇವೆ. ಕ್ರೀಡೆ, ಸಂಗೀತ–ಸಾಹಿತ್ಯ, ತಾಂತ್ರಿಕತೆ, ಹಣಗಳಿಕೆ – ಈ ಎಲ್ಲಾ ಕ್ಷೇತ್ರಗಳಲ್ಲಿ ನಮ್ಮಲ್ಲಿ ಯುವಸಾಧಕರಿದ್ದರೂ, ರಾಜಕೀಯ ಹಾಗೂ ಸಾಮಾಜಿಕ ವಲಯದಲ್ಲಿ ನಾಯಕತ್ವದ ಕೊರತೆ ಎದ್ದುಕಾಣುತ್ತದೆ. ನಮ್ಮ ದೇಶದ ಜಟಿಲ ಸಾಮಾಜಿಕ–ಆರ್ಥಿಕ–ರಾಜಕೀಯ ಸಮಸ್ಯೆಗಳಿಗೆ ಪರಿಹಾರ ಹುಡುಕುವುದು ಸವಾಲೇ ಸರಿ. ಈ ಸವಾಲನ್ನು ಮೆಟ್ಟಿನಿಲ್ಲಲು ನಮ್ಮಲ್ಲಿ ಹೊಸ ದೃಷ್ಟಿಕೋನ, ಚೈತನ್ಯ, ದೂರದರ್ಶಿತ್ವ ಹಾಗೂ ಅಸಾಧಾರಣ ಪ್ರಯತ್ನಗಳ ಆವಶ್ಯಕತೆ ಇದೆ. ಈ ಕೆಲಸವನ್ನು ಕೈಗೆತ್ತಿಕೊಳ್ಳಬಲ್ಲ ಜನರೆಲ್ಲಿದ್ದಾರೆ? ಅವರನ್ನು ಪ್ರೇರೇಪಿಸಬಲ್ಲ ವ್ಯಕ್ತಿ ಯಾರಿದ್ದಾರೆ?

ದೇಶದ ಸಮಸ್ಯೆಗಳನ್ನು ಅರಿತುಕೊಂಡಿರುವಂತಹ ಮತ್ತು ಅವುಗಳ ನಿವಾರಣೆಗೆ ತಮ್ಮ ವೈಯಕ್ತಿಕ ಸಂತೋಷವನ್ನು ಬದಿಗೊತ್ತಿ ಅಹರ್ನಿಶಿ ದುಡಿಯುವಂತಹ ಸದೃಢ ಮನಸ್ಸಿನ ಉತ್ಸಾಹಿ ಯುವಕರು ಇಂದು ಭಾರತಕ್ಕೆ ಬೇಕಿದ್ದಾರೆ. ಅದರ ಜೊತೆಗೆ ಅವರಿಗೆ ಮಾದರಿಯಾಗಬಲ್ಲ, ಸಿದ್ಧಾಂತಕ್ಕೆ ಬದ್ಧವಾಗಿರುವ, ಆದರೆ ವಾಸ್ತವಿಕತೆಗೆ ಹತ್ತಿರವಾಗಿರುವ ಆದರ್ಶಪ್ರಾಯ ವ್ಯಕ್ತಿಯ ಆವಶ್ಯಕತೆಯೂ ತುಂಬಾ ಇದೆ. ಈ ಕೊರತೆಯನ್ನು 'ಸೇವೆ' ಮತ್ತು 'ತ್ಯಾಗ'ದ ಪ್ರವಾದಿಯಾಗಿರುವ ಸ್ವಾಮಿ ವಿವೇಕಾನಂದರಲ್ಲದೆ ಮತ್ತಾರು ತುಂಬಲು ಸಾಧ್ಯ?

ಸ್ವಾಮಿ ವಿವೇಕಾನಂದರು "ಅನಾಥ ಮಗುವಿಗೆ ತುತ್ತು ಅನ್ನವನ್ನೂ ಕೊಡದ ಮತ್ತು ವಿಧವೆಯ ಕಣ್ಣೀರನ್ನು ಒರೆಸದ ದೇವರು ಅಥವಾ ಧರ್ಮದಲ್ಲಿ ನನಗೆ ನಂಬಿಕೆ ಇಲ್ಲ" ಎಂದು ಸಾರಿದ್ದರು. ಮತ್ತೊಂದೆಡೆ, "ಪೂರ್ತಿ ಹಸಿದುಕೊಂಡಿರುವುದಕ್ಕಿಂತ ಅರೆಹೊಟ್ಟೆ ಊಟವೇ ಮೇಲು" ಎಂದು ನುಡಿದಿದ್ದರು. ಈ ರೀತಿಯ ಕಟೂಕ್ತಿಗಳು ಸಾಮಾನ್ಯ ಜನರೆಡೆಗೆ ಅವರಲ್ಲಿರುವ ಅಪರಿಮಿತ ಕಾಳಜಿ ಮತ್ತು ಧರ್ಮದೆಡೆಗೆ ಇರುವ ಅತ್ಯಂತ ಪ್ರಾಯೋಗಿಕವಾದ ದೃಷ್ಟಿಕೋನವನ್ನು ತೋರಿಸುತ್ತವೆ. ಅವರೊಬ್ಬ ಸಮಾಜವಾದಿ ಎಂಬುದನ್ನೂ ಪ್ರತಿಪಾದಿಸುತ್ತವೆ. ಬಡವ–ಬಲ್ಲಿದರ ನಡುವೆ ಇರುವ ಕಂದಕವನ್ನು ಮುಚ್ಚಲು ಸಾಧ್ಯವಿಲ್ಲ ಎಂಬ ವಾದವನ್ನು ಒಪ್ಪಲು ವಿವೇಕಾನಂದರು ತಯಾರಿರಲಿಲ್ಲ. ಅವರ ಕಾಲದಲ್ಲಿದ್ದ ಭಾರತಕ್ಕೂ ಇಂದಿನ ಭಾರತಕ್ಕೂ ಹೆಚ್ಚೇನೂ ವ್ಯತ್ಯಾಸವಿಲ್ಲ. ಇವತ್ತಿಗೆ ದೇಶದ ಶೇ.೮೫ರಷ್ಟು ಸಂಪತ್ತು ಮೇಲ್ಪಂಕ್ತಿಯ ಶೇ. ೨೦ರಷ್ಟು ಜನರ ಕೈಲಿದ್ದರೆ, ಕೆಳಸ್ತರದ ಶೇ. ೨೦ರಷ್ಟು ಜನ ಕೇವಲ ಶೇ.೧.೫ ರಷ್ಟು ಸಂಪತ್ತಿನ ಒಡೆಯರಾಗಿದ್ದಾರೆ. ಈ ತಾರತಮ್ಯವನ್ನು ಸರಿಪಡಿಸಲು ಸರ್ಕಾರ ಅಥವಾ ಸಮಾಜ ಏನು ಮಾಡಬಹುದು? ದಾನವೊಂದೇ ದಾರಿಯೇ ಅಥವಾ ಸಮಾನತೆಯನ್ನು ತರಲು ಹೊಸ ವಿಧಾನಗಳನ್ನು ಆವಿಷ್ಕರಿಸಬೇಕೇ?

ದೀನ-ದುರ್ಬಲರನ್ನು ಸಬಲೀಕರಿಸುವ ಮೂಲಕ ತಮ್ಮ ಗುರಿಯನ್ನು ತಾವೇ ಕಂಡುಕೊಳ್ಳುವಂತೆ ಮಾಡುವುದೇ ಸರಿಯಾದ ಮಾರ್ಗ ಎಂದು ಸ್ವಾಮಿ ವಿವೇಕಾನಂದರು ಬಲವಾಗಿ ನಂಬಿದ್ದರು. ತಮ್ಮ ಆತ್ಮಗೌರವಕ್ಕೆ ಧಕ್ಕೆ ಆಗದಂತೆ, ತಮ್ಮ ಏಳ್ಗೆಯನ್ನು ತಾವೇ ಮಾಡಿಕೊಳ್ಳಲು ಪೂರಕ ಪರಿಸರವೊಂದನ್ನು ಬಡವರಿಗಾಗಿ ಉಳ್ಳವರು ಸೃಷ್ಟಿಸಬೇಕೆಂದು ಅವರು ಬಯಸಿದರು. ಆ ಕಾಲದಲ್ಲಿದ್ದ ಸಾಮಾಜಿಕ ಮತ್ತು ಆರ್ಥಿಕ ಅಸಮತೋಲನದ ಬಗ್ಗೆ ಬಹಳ ಚಿಂತಿತರಾಗಿದ್ದರು. ಜನಸಾಮಾನ್ಯರನ್ನು ಅಲಕ್ಷಿಸಿರುವುದೇ ದೇಶದ ಅವನತಿಯ ಪ್ರಮುಖ ಕಾರಣ ಎಂದು ನಂಬಿದ್ದರು. ಅವರಿಗೆ ಒಳ್ಳೆಯ ಊಟ, ಶಿಕ್ಷಣ ಮತ್ತು ರಕ್ಷಣೆ ಸಿಗಬೇಕೆಂದು ಬಯಸಿದರು. "ದೇಶದ ಪುನರುತ್ಥಾನಕ್ಕೆ ಜನಸಾಮಾನ್ಯರಿಗೋಸ್ಕರ ಕೆಲಸಮಾಡಬೇಕು" ಎಂದು ಕರೆಕೊಟ್ಟರು. ಸಮಾನತೆಯೆಂಬುದು ಉಳ್ಳವರನ್ನು ಕೆಳಗೆಳೆಯುವುದರಿಂದಲ್ಲ, ಬಡವರನ್ನು ಮೇಲೆತ್ತುವುದರಿಂದ ಬರುತ್ತದೆ ಎಂದು ಹೇಳಿದರು. ಕೇವಲ ದಾನ-ಧರ್ಮಕಾರ್ಯಗಳನ್ನು ಮಾಡುವುದರಿಂದ ಮನುಷ್ಯನ ಸ್ವಪ್ರಯತ್ನಕ್ಕೆ ಪೆಟ್ಟು ಬೀಳುವುದೆಂದೂ, ಜನಸಾಮಾನ್ಯರ ಸಮಸ್ಯೆಗಳ ಪರಿಹಾರಕ್ಕೆ ಅದು ಸುಸ್ಥಿರ ಮಾರ್ಗವಲ್ಲವೆಂದೂ ಅವರು ಅರ್ಥಮಾಡಿಕೊಂಡಿದ್ದರು. ಧರ್ಮವನ್ನು ಬಡವರ ಉದ್ಧಾರಕ್ಕಾಗಿ ಬಳಸಿಕೊಳ್ಳಬೇಕೆಂದು ಹೇಳುವುದರ ಮೂಲಕ ತಮ್ಮ ದೂರದರ್ಶಿತ್ವವನ್ನು ಮೆರೆದರು. ಸ್ವಾಮೀಜಿ ಹೇಳಿರುವ ಈ ರೀತಿಯ ಪ್ರಾಯೋಗಿಕ ಮತ್ತು ಅಹಿಂಸಾತ್ಮಕ ಅಭಿವೃದ್ಧಿಯ ಪಥದಿಂದ, ಎಲ್ಲಾ ವರ್ಗದ ಜನರಲ್ಲಿ ಯಾವುದೇ ನಕಾರಾತ್ಮಕ ಭಾವನೆ ಉದ್ಭವಿಸುವುದಿಲ್ಲವೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಇವತ್ತಿಗೆ ನಮ್ಮ ದೇಶಕ್ಕೆ ಸ್ವಾಮೀಜಿಯಂತೆ ಯೋಚಿಸುವ ಮತ್ತು ಕೆಲಸ ಮಾಡುವ ನಾಯಕರು-ಚಿಂತಕರು ಬೇಕಾಗಿದ್ದಾರೆ.

ಕೈಯಲ್ಲಿರುವ ಸಮಸ್ಯೆಗಳ ಜಟಿಲತೆ ಮತ್ತು ಕ್ಲಿಷ್ಟತೆಯನ್ನು ಗಮನಿಸಿದರೆ, ಎಲ್ಲಿಂದ ಪ್ರಾರಂಭಿಸಬೇಕು, ಯಾವುದರ ಮೇಲೆ ಗಮನ ಕೇಂದ್ರೀಕರಿಸಬೇಕು ಮತ್ತು ಯಾರು ಮುಂದಾಳತ್ವ ವಹಿಸಬೇಕು ಎಂಬ ಪ್ರಶ್ನೆಗಳು ಉದ್ಭವಿಸದಿರದು. ಶೇ. ೮೦ರಷ್ಟು ಭಾರತೀಯರು ೪೦ ವರ್ಷ ವಯಸ್ಸಿನ ಕೆಳಗಿದ್ದಾರೆ ಎಂಬ ಸಂಗತಿಯನ್ನು ಗಮನದಲ್ಲಿಟ್ಟುಕೊಂಡರೆ, ಯುವಕರೇ ಈ ಕಾರ್ಯಕ್ಕೆ ಸೂಕ್ತ ಎಂಬುದು ವಿದಿತವಾಗುತ್ತದೆ. ಇವತ್ತಿನ ಯುವಜನತೆ ಅತ್ಯಂತ ಫಲಿತಾಂಶ-ಆಧಾರಿತರಾಗಿದ್ದು, ತಾವು ಮಾಡುವ ಪ್ರತಿಯೊಂದು ಕೆಲಸದ ಕಾರಣ-ಹಿನ್ನೆಲೆ-ಉಪಯೋಗಗಳನ್ನು ತಿಳಿಯಬಯಸುತ್ತಾರೆ. ಅಂಥವರಿಗೆ ಸ್ವಾಮೀಜಿಯ ಬಳಿ ಸರಳ ಸೂತ್ರವೊಂದಿತ್ತು. ಯಾರೇ ಆದರೂ ಮಾಡಬಹುದಾದ ಮೂರು ಹಂತದ ಸೇವೆಗಳನ್ನು ಅವರು ಸರಳವಾಗಿ ವಿವರಿಸಿದ್ದಾರೆ. ಮೊದಲನೆಯದು **ದೈಹಿಕ ಸೇವೆ** – ಮನುಷ್ಯನ ದೇಹದ ಬಗ್ಗೆ ಕಾಳಜಿ ವಹಿಸಿ, ದೈಹಿಕ ನೋವು-ನರಳಾಟಗಳನ್ನು ನಿವಾರಿಸುವಂತಹ ಕೆಲಸಗಳನ್ನು ಮಾಡುವುದು. ಆಸ್ಪತ್ರೆ, ಅನಾಥಾಲಯ, ವೃದ್ಧಾಶ್ರಮ, ಆದಾಯ ಗಳಿಕೆ ಕಾರ್ಯಕ್ರಮಗಳನ್ನು ನಡೆಸುವುದು – ಇವೆಲ್ಲಾ ಈ ವರ್ಗಕ್ಕೆ ಸೇರುತ್ತವೆ. ಮುಂದಿನ ಹಂತ **ಬೌದ್ಧಿಕ ಸೇವೆ.** ಶಾಲಾ-ಕಾಲೇಜುಗಳನ್ನು ನಡೆಸುವುದು, ಜಾಗೃತಿ-ಸಬಲೀಕರಣ ಕಾರ್ಯಕ್ರಮಗಳನ್ನು ಮಾಡುವುದು ಇತ್ಯಾದಿ ಇದರ ಅಡಿ ಬರುತ್ತವೆ. ಮುಂದಿನ ಉನ್ನತ ಹಂತ **ಆಧ್ಯಾತ್ಮಿಕ ಸೇವೆ.** ಇಂತಹ ಸೇವಾಕಾರ್ಯಗಳನ್ನು ಕೈಗೊಳ್ಳುವ ಸಂದರ್ಭದಲ್ಲಿ ಎದುರಾಗಬಹುದಾದ ಅಡೆತಡೆಗಳ ಬಗ್ಗೆ ಎಚ್ಚರಿಕೆ ನೀಡುವುದನ್ನು ವಿವೇಕಾನಂದರು ಮರೆಯಲಿಲ್ಲ. ಮನುಷ್ಯನ 'ಅಹಂ' ಮತ್ತು ಸಮಸ್ಯೆಗಳನ್ನು ತಂದೊಡ್ಡಬಲ್ಲ ಅದರ ವಿಶೇಷ ಸಾಮರ್ಥ್ಯವನ್ನು ಅವರು ಚೆನ್ನಾಗಿ ಗ್ರಹಿಸಿದ್ದರು. ನಾವು ಇರುವುದಕ್ಕಿಂತ ಹೆಚ್ಚಿನ ಸ್ಥಾನವನ್ನು ನಮಗೆ ನಾವೇ ಕೊಟ್ಟುಕೊಳ್ಳುವುದರ ಅಪಾಯದ ಬಗ್ಗೆ ಎಚ್ಚರಿಸಿದರು. 'ಪೀಠದ ಮೇಲೆ ನಿಂತು ಬಡವರತ್ತ ಪುಡಿಗಾಸು ಬಿಸಾಡಬಾರದು' ಎಂಬ ಅವರ ಉಕ್ತಿ ಜನಜನಿತವಾದದ್ದು. ಯುವಕರು ಸೇವಾಕಾರ್ಯಗಳನ್ನು ಸಮಾಜದ ಉದ್ಧಾರಕ್ಕೆ ಮಾತ್ರವಲ್ಲದೆ, ತಮ್ಮ ಸ್ವಂತ ವ್ಯಕ್ತಿತ್ವದ ವಿಕಾಸ ಹಾಗೂ ಅಭ್ಯುದಯಕ್ಕಾಗಿಯೂ ಕೈಗೊಳ್ಳಬೇಕೆಂದು ಅವರು ಪ್ರತಿಪಾದಿಸುತ್ತಿದ್ದರು. ಆಧ್ಯಾತ್ಮಿಕ ಬೆಳವಣಿಗೆಯ ಅಂತಿಮ ಹಂತ ತಲುಪಲು ಸಮಾಜಸೇವೆ ಒಂದು ಮಾರ್ಗ ಎಂದು ಅವರು ಕಂಡುಕೊಂಡಿದ್ದರು. 'ಮನುಷ್ಯನಲ್ಲಿರುವ ಭಗವಂತನನ್ನು ಸೇವೆ ಮಾಡಿ' ಎಂಬ ಸಲಹೆಯಿತ್ತರು. ಸರಳ-ಸುಂದರವಾದ ಈ ಒಂದೇ ವಾಕ್ಯದಲ್ಲಿ ತಮ್ಮ ಎಲ್ಲಾ ತತ್ತ್ವವನ್ನು ಪ್ರತಿಪಾದಿಸಿದರು. ಅವರ ಈ ಆದರ್ಶ ಪ್ರತಿಯೊಬ್ಬರ ಕೈಗೆಟಕುವಂಥದ್ದಷ್ಟೇ ಅಲ್ಲದೆ, ಭಾವನಾತ್ಮಕವಾಗಿ ಸೆಳೆಯುವಂಥದ್ದು ಮತ್ತು ಸೇವಾಕಾರ್ಯದಲ್ಲಿ ತೊಡಗಿಸಿಕೊಳ್ಳಲು ಪ್ರೇರೇಪಿಸುವಂಥದ್ದು ಕೂಡ ಆಗಿದೆ. ಇವೆಲ್ಲದರ ಜೊತೆಗೆ, ಸೇವೆ ಮಾಡುವವರು 'ಅಹಂಭಾವ' ಮತ್ತು 'ಹೆಸರು ಗಳಿಸುವ ತವಕ' ಮತ್ತು ಅದರಿಂದ ಉಂಟಾಗಬಹುದಾದ ಅನಾಹುತಗಳ ಬಗ್ಗೆ ಜಾಗೃತರಾಗಿರಬೇಕೆಂದು ಕೂಡ ಸ್ವಾಮಿಜಿ ತಿಳಿಸಿದರು.

## ಸ್ವಾಮೀಜಿಯ ಸಂದೇಶದ ಪ್ರಾಯೋಗಿಕ ಮಹತ್ವ

ದೇಶದ ಯುವಜನತೆಯನ್ನು ಉತ್ಸಾಹಿಸಿ ಪ್ರೇರೇಪಿಸುವುದೇ ಸೇವೆಗೆ ಮತ್ತು ರಾಷ್ಟ್ರೋದ್ಧಾರಕ್ಕೆ ಅತಿ ಸೂಕ್ತವಾದ ಮತ್ತು ಪ್ರಾಯೋಗಿಕವಾದ ಮಾರ್ಗ ಎಂದು ವಿವೇಕಾನಂದರು ಅರಿತಿದ್ದರು. ಆದರೆ ಭಾವನಾತ್ಮಕವಾದ ಮತ್ತು ಮನಮುಟ್ಟುವಂತಹ ವೇದಿಕೆ ಇಲ್ಲದಿದ್ದರೆ ಯುವಜನತೆಯಲ್ಲಿ ಈ ಉತ್ಸಾಹವನ್ನು ಹಿಡಿದಿಟ್ಟುಕೊಳ್ಳಲು ಕಷ್ಟಸಾಧ್ಯ. ಈ ಕಾರ್ಯವನ್ನು ವಿವೇಕಾನಂದರು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ನಿರ್ವಹಿಸಿದರು. 'ಕಾದಾಗ ಕಬ್ಬಿಣವನ್ನು ಬಗ್ಗಿಸಬೇಕು' ಎಂಬ ಉಕ್ತಿಯಂತೆ ಅಪಕ್ವ ಯುವ ಮನಸ್ಸುಗಳಿಗೆ ಮುಟ್ಟುವಂತಹ ಸರಳ-ಸುಂದರ-ಪ್ರೇರಣಾದಾಯಕ ಸೂತ್ರಗಳನ್ನು ನೀಡಿದರು; ತಮ್ಮೆಲ್ಲಾ ಶಕ್ತಿಯನ್ನು ರಾಷ್ಟ್ರನಿರ್ಮಾಣದೆಡೆಗೆ ಕೇಂದ್ರೀಕರಿಸುವಂತೆ ಕರೆಕೊಟ್ಟರು. ಅದರಲ್ಲಿ ಅವರ ಮೂರು 'H' ಸೂತ್ರ ವಿಶಿಷ್ಟವಾದದ್ದು.

ಮೊದಲನೆಯ 'H' Heart (ಹೃದಯಕ್ಕೆ) ಸಂಬಂಧಪಟ್ಟಿದ್ದು. ದೀನದುರ್ಬಲರಿಗೆ, ನಿರ್ಗತಿಕರಿಗೆ, ತುಳಿತಕ್ಕೊಳಗಾದವರಿಗೆ ಮಿಡಿಯುವಂತಹ ಹೃದಯ ನಮ್ಮಲ್ಲಿರಬೇಕೆಂದು ವಿವೇಕಾನಂದರು ಆಗ್ರಹಿಸಿದರು. ನಾವು ಬಸವಳಿದು, ಹೃದಯ ನಿಂತುಹೋಗುವವರೆಗೆ ನಮ್ಮ ಅಭಾಗ್ಯ ಬಂಧುಗಳ ಬಗ್ಗೆ ಯೋಚಿಸಬೇಕು ಎಂದರು. ಈ ರೀತಿ ತೀವ್ರತರವಾದ ಯೋಚನೆ ಬಂದಾಗಲೇ ನಾವು ದೈನಂದಿನ ಬದುಕಿನ ಜಂಜಾಟದಿಂದ ಮೇಲೆದ್ದು, ಇತರರಿಗೆ ಏನಾದರೂ

ಮಾಡಲು ಸಾಧ್ಯ. ಆದರೆ, ಭಾವನಾತ್ಮಕವಾಗಿ ಪ್ರತಿಕ್ರಿಯಿಸಿದರಷ್ಟೇ ಸಾಲದು, ಕಾರ್ಯಪ್ರವೃತ್ತರಾಗುವತ್ತ ಚಿಂತನೆಯನ್ನೂ ಬೆಳೆಸಿಕೊಳ್ಳಬೇಕು.

ನಮ್ಮ ದೇಶದ ಅಸಂಖ್ಯಾತ ಸಮಸ್ಯೆಗಳಿಗೆ ಪರಿಹಾರ ಹುಡುಕುವುದು ಒಂದು ಸವಾಲೇ ಸರಿ. ಆದರೆ ಇದಕ್ಕೆ ನಾವು ಭಾವನಾತ್ಮಕವಾಗಿ ಪ್ರತಿಕ್ರಿಯಿಸಲು ಸಾಧ್ಯವಿಲ್ಲ. ಚೆನ್ನಾಗಿ ಪರಾಮರ್ಶಿಸಿ, ಕಾರ್ಯಗತಗೊಳಿಸಲು ಸಾಧ್ಯವಿರುವ ಯೋಜನೆಯನ್ನೂ ರೂಪಿಸಬೇಕು. ಈ ಅರಿವಿನ ಘಟ್ಟಕ್ಕೆ ಬೇಕಾಗಿರುವುದೇ ಎರಡನೆಯ **'H'** - Head to think (ಯೋಚಿಸಬಲ್ಲ ತಲೆ).

ಯೋಜನೆಯನ್ನು ರೂಪಿಸಿದರಷ್ಟೇ ಸಾಲದು. ಅದನ್ನು ಕಾರ್ಯಗತಗೊಳಿಸುವ ಸಾಮರ್ಥ್ಯ ನಮ್ಮಲ್ಲಿರಬೇಕು. ಇದೇ ಮೂರನೆಯ **'H'** - Hand (ದುಡಿಯುವ ಕೈಗಳು). ಕೈ ಕೆಸರಾದರಷ್ಟೇ ಬಾಯಿ ಮೊಸರಲ್ಲವೇ? ಪ್ರಾಮಾಣಿಕ ದುಡಿತದಿಂದ ಮಾತ್ರ ಬದಲಾವಣೆ ಸಾಧ್ಯ. ಈ ಸತ್ಯವನ್ನು ನಮ್ಮ ಯುವಜನತೆ ಅರಿತುಕೊಳ್ಳಬೇಕು. ಹೀಗೆ ಅರಿತರಷ್ಟೇ ವಿವೇಕಾನಂದರ ಭವ್ಯ ಭಾರತದ ಕನಸನ್ನು ಸಾಕಾರಗೊಳಿಸಲು ಸಾಧ್ಯ.

ಸಮಾಜಸೇವೆ ಎಂದರೆ ಲೌಕಿಕ ಜವಾಬ್ದಾರಿಗಳನ್ನು ತೊರೆದು, ಸರಳ ಉಡುಗೆ ತೊಟ್ಟು, ಯಾವುದೋ ಕುಗ್ರಾಮದಲ್ಲಿ ಹಸಿದು ಕೂರುವುದಲ್ಲ ಎಂದು ಎಲ್ಲರೂ ಮನಗಾಣಬೇಕು. ಅದು ವ್ಯಕ್ತಿಯ ಸಾಮಾಜಿಕ ಅಂತಃಕರಣದ ಜಾಗೃತಿಯಿಂದ ಆರಂಭಗೊಂಡು ಅಂತಿಮವಾಗಿ ಸಾಮಾಜಿಕ ಕ್ರಿಯೆಯಾಗಿ ಪರಿವರ್ತನೆಗೊಳ್ಳಬೇಕು. ಅದಕ್ಕೂ ಮುನ್ನ ವ್ಯಕ್ತಿಯು ತನ್ನ ಅಗತ್ಯಗಳು ಹಾಗೂ ಇತಿಮಿತಿಗಳನ್ನು ಅರಿತುಕೊಳ್ಳಬೇಕು. ಮೊದಲು ತನ್ನಿಂದ ಪ್ರಾರಂಭಿಸಿ, ನಂತರ ಇತರರನ್ನು ಮುಟ್ಟುವಂತೆ ತನ್ನ ಚಟುವಟಿಕೆಗಳ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ ಹೋಗಬೇಕು. ನಾವು ಮಾಡುವ ವೃತ್ತಿಯನ್ನೇ ಅಚ್ಚುಕಟ್ಟಾಗಿ, ಶ್ರದ್ಧೆಯಿಂದ ಮಾಡಬೇಕು. ನಮ್ಮದೇ ಪುಟ್ಟ ವೃತ್ತದಲ್ಲಿ ಏನನ್ನಾದರೂ ಮಾಡುವ ಅವಕಾಶ ಇದ್ದೇ ಇರುತ್ತದೆ. ಈ ಸಣ್ಣ ಬದಲಾವಣೆ ಮುಂದಿನ ದೊಡ್ಡ ಪರಿವರ್ತನೆಗೆ ಬುನಾದಿಯಾಗಬೇಕು.

ಸಮಾಜಸೇವೆ ಮಾಡುವುದರಿಂದ ಲೋಕದ ಸಮಸ್ಯೆಗಳಿಗೆ ಪರಿಹಾರ ದೊರಕಿಸಿಕೊಡುವುದರ ಜೊತೆಗೆ, ನಮ್ಮ ಆಂತರಿಕ ದ್ವಂದ್ವ-ತೊಳಲಾಟಗಳಿಗೂ ಉತ್ತರ ಕಂಡುಕೊಳ್ಳುವುದು ಸಾಧ್ಯ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ವಿವೇಕಾನಂದರ ಗುರಿ ಮತ್ತು ಆಶಯವೂ ಸಹ ಇದೇ ಆಗಿತ್ತು.

(ಇಂಗ್ಲಿಷ್ ಲೇಖನದ ಕನ್ನಡ ಅನುವಾದ: *ಡಾ. ಅನಿಲ್ ಸಿ.*)

> ಯಾವಾಗ ಉದಾರಹೃದಯಿಗಳಾದ ನೂರಾರು ಪುರುಷರು ಮತ್ತು ಸ್ತ್ರೀಯರು, ಜೀವನದ ವೈಭೋಗಗಳನ್ನು ಅನುಭವಿಸುವ ತಮ್ಮ ಆಸೆಯನ್ನು ತ್ಯಾಗ ಮಾಡುತ್ತಾರೋ, ದಾರಿದ್ರ್ಯ ಮತ್ತು ಅಜ್ಞಾನಗಳ ಸುಳಿಯಲ್ಲಿ ಸಿಲುಕಿ, ನಿಧಾನವಾಗಿ ಕೆಳಕ್ಕೆ ಮುಳುಗಿಹೋಗುತ್ತಿರುವ ತಮ್ಮ ಲಕ್ಷಾಂತರ ದೇಶಬಾಂಧವರ ಬಗ್ಗೆ ವ್ಯಾಕುಲಚಿತ್ತರಾಗಿ, ಅವರಿಗಾಗಿ ತಮ್ಮ ಕೈಲಾದಷ್ಟು ದುಡಿಯುತ್ತಾರೆಯೋ – ಆಗ ಮಾತ್ರವೇ ಭಾರತವು ಮೇಲೇಳುವುದು.
>
> – *ಸ್ವಾಮಿ ವಿವೇಕಾನಂದ*



# ಶ್ರೀರಾಮಕೃಷ್ಣ ಸೇವಾಶ್ರಮ, ಕನಖಲ್ ಇದರ ಶತಮಾನದ ಹೆಜ್ಜೆಗುರುತು

ಡಾ. ಕಬ್ಬಿನಾಲೆ ವಸಂತ ಭರದ್ವಾಜ್

**ಸ್ವಾಮಿ ವಿವೇಕಾನಂದರ ಕನಸನ್ನು ಅವರ ಒಬ್ಬರು ಶಿಷ್ಯರು ನನಸು ಮಾಡಿದ ಅಪೂರ್ವ ವೃತ್ತಾಂತ ಇಲ್ಲಿದೆ. ಶತಮಾನಕ್ಕೂ ಹೆಚ್ಚು ಕಾಲ ಜೀವನದಲ್ಲಿ ಶಿವನನ್ನು ಕಾಣುವ ಕೈಂಕರ್ಯ ಪುಣ್ಯನಗರಿಯಾದ ಹರಿದ್ವಾರದ ಕನ್‌ಖಲ್‌ನಲ್ಲಿ ನಡೆಯುತ್ತಲಿದೆ. ಇಲ್ಲಿರುವ ರಾಮಕೃಷ್ಣ ಮಿಷನ್ ಸೇವಾಶ್ರಮದ ಪುಣ್ಯಕಥೆಯನ್ನು ಸ್ವಾರಸ್ಯವಾಗಿ ವಿವರಿಸಿರುವ ಲೇಖಕರು ನಿವೃತ್ತ ಬ್ಯಾಂಕ್ ಅಧಿಕಾರಿಗಳು. ಅಷ್ಟಾವಧಾನಿಗಳಾಗಿ ಪ್ರಸಿದ್ಧರಾಗಿರುವ ಇವರು ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕುರಿತು ೫೦ಕ್ಕೂ ಹೆಚ್ಚು ಪುಸ್ತಕಗಳನ್ನು ತುಳು ಮತ್ತು ಕನ್ನಡದಲ್ಲಿ ಬರೆದಿದ್ದಾರೆ.**

**ಉ**ತ್ತರ ಭಾರತದ ಹರಿದ್ವಾರದ ಕನಖಲ್‌ನಲ್ಲಿ ಕ್ರಿ.ಶ. ೧೯೦೧ ರಲ್ಲಿ ರಾಮಕೃಷ್ಣ ಮಿಷನ್ ಸೇವಾಶ್ರಮವು ಸ್ಥಾಪನೆಗೊಂಡಿತು. ಬಡಜನರ ಹಾಗೂ ಅನಾರೋಗ್ಯದಿಂದ ಬಳಲುವ ಸಾಧುಗಳ ಸೇವೆಗಾಗಿ ಈ ಸೇವಾಶ್ರಮವನ್ನು ಸ್ವಾಮಿ ವಿವೇಕಾನಂದರ ಶಿಷ್ಯರಾದ ಸ್ವಾಮಿ ಕಲ್ಯಾಣಾನಂದರು ಆರಂಭಿಸಿದರು. ಶ್ರೀರಾಮಕೃಷ್ಣ ಪರಮಹಂಸರು ಪರಂಧಾಮವನ್ನು ಸೇರಿದ ಬಳಿಕ ರಾಮಕೃಷ್ಣ ಮಹಾಸಂಘವು ಅವರ ಸಾಕ್ಷಾತ್ ಶಿಷ್ಯರಿಂದ ಆರಂಭವಾಯಿತು. ಕನಖಲ್‌ನಲ್ಲಿರುವ ಸೇವಾಶ್ರಮವು ಈ ಸಂಘದ ಅತ್ಯಂತ ಹಳೆಯ ಶಾಖೆಗಳಲ್ಲಿ ಒಂದು.

ಸ್ವಾಮಿ ಕಲ್ಯಾಣಾನಂದರು ತಮ್ಮ ಗುರುಗಳಾದ ಸ್ವಾಮಿ ವಿವೇಕಾನಂದರ ಸೂಚನೆಯ ಮೇರೆಗೆ, ೧೯೦೧ರ ಜೂನ್ ತಿಂಗಳಲ್ಲಿ, ಹರಿದ್ವಾರದ ಕನಖಲ್ ಎಂಬ ಪ್ರದೇಶದಲ್ಲಿ ಈ ಸೇವಾಯಜ್ಞಕ್ಕೆ ತೊಡಗಿದರು. ಮೂರು ರೂಪಾಯಿಗಳ ತಿಂಗಳ ಬಾಡಿಗೆಗೆ ಪಡೆದುಕೊಂಡ ಎರಡು ಕೊಠಡಿಗಳಲ್ಲಿ ಈ ಆಶ್ರಮ ಆರಂಭಗೊಂಡಿತು. ಆಗ ಕೇವಲ ಆರು ಮಂದಿ ಒಳರೋಗಿಗಳೂ, ೪೮ ಹೊರರೋಗಿಗಳೂ ಈ ಸೇವಾಶ್ರಮದ ಪ್ರಯೋಜನ ಪಡೆಯುತ್ತಿದ್ದರು. ೧೯೧೦ ರಲ್ಲಿ ಆಶ್ರಮದ ಹೆಸರನ್ನು 'ರಾಮಕೃಷ್ಣ ಮಿಷನ್ ಸೇವಾಶ್ರಮ' ಎಂದು ಬದಲಾಯಿಸಲಾಯಿತು. ಸ್ವಾಮಿ ವಿವೇಕಾನಂದರ ಮತ್ತೊಬ್ಬ ಶಿಷ್ಯರಾದ ಸ್ವಾಮಿ ನಿಶ್ಚಯಾನಂದರು ೧೯೦೨ರಲ್ಲಿ ಸ್ವಾಮಿ ಕಲ್ಯಾಣಾನಂದರೊಂದಿಗೆ ಸೇರಿ ಸೇವಾಶ್ರಮವನ್ನು ಮುನ್ನಡೆಸಿದರು. ಬಾಡಿಗೆ ಕೊಠಡಿಗಳಲ್ಲಿದ್ದ ಸೇವಾಶ್ರಮಕ್ಕೆ ೧೯೦೩ರಲ್ಲಿ ೧೫ ಬಿಘಾ ಅಳತೆಯ ನಿವೇಶನ ದೊರೆಯಿತು. ೧೯೦೪ ರಲ್ಲಿ ಕಾರ್ಮಿಕರ ಮನೆ, ಶೌಚಾಲಯ, ಚಿಕಿತ್ಸಾಲಯಗಳೊಂದಿಗೆ ಸೇವಾಶ್ರಮದ ನಿರ್ಮಾಣಕಾರ್ಯ ಮುಗಿಯಿತು.

ಸೇವಾಶ್ರಮದಲ್ಲಿದ್ದ ಸ್ವಾಮಿ ನಿಶ್ಚಯಾನಂದರು ಪ್ರತಿದಿನ ಹದಿನೈದು ಮೈಲುಗಳ ಕಾಲುದಾರಿ ನಡೆದು ಋಷಿಕೇಶಕ್ಕೆ ಹೋಗಿ ಬರುತ್ತಿದ್ದರು. ಅಲ್ಲಿರುವ ರೋಗಿಗಳಿಗೆ ಔಷಧ ಮತ್ತು ಆಹಾರವನ್ನು ನೀಡುವುದೇ ಅವರ ಉದ್ದೇಶವಾಗಿತ್ತು. ಮಧ್ಯಾಹ್ನದ ಹೊತ್ತಿನಲ್ಲಿ ಋಷಿಕೇಶದಲ್ಲೇ 'ಮಧುಕರಿ ಭಿಕ್ಷೆ'ಯನ್ನು ಸ್ವೀಕರಿಸುತ್ತಿದ್ದರು. ಯಾವುದಾದರೂ ರೋಗಿಗೆ ಹೆಚ್ಚಿನ ಔಷಧೀಯ ಚಿಕಿತ್ಸೆ ಬೇಕಾದಲ್ಲಿ ಅವರನ್ನು ಕನಖಲ್‌ಗೆ ಕರೆದುಕೊಂಡು ಬಂದು ಉಪಚರಿಸುತ್ತಿದ್ದರು. ಈ ರೀತಿಯ ನಿಸ್ವಾರ್ಥ ಸೇವೆಗಾಗಿ ಭಾರತ ಸರ್ಕಾರವು ೧೯೧೧ರಲ್ಲಿ ಸ್ವಾಮಿ ಕಲ್ಯಾಣಾನಂದರಿಗೆ 'ದರಬಾರ್ ಪದಕ' ವನ್ನು ನೀಡಿ ಗೌರವಿಸಿತು.

೧೧೨ ವರ್ಷಗಳಿಗೂ ಹಿಂದೆ ಕನಖಲ್‌ನಲ್ಲಿ ರಾಮಕೃಷ್ಣ ಮಿಷನ್ ಸೇವಾಶ್ರಮವು ಮಾಡಿದ ವೈದ್ಯಕೀಯ ಸೇವೆ 'ಮಾನವೀಯ ಮುಖದ ಭಗವದಾರಾಧನೆ' ಎಂದರೆ ಅತಿಶಯೋಕ್ತಿಯಾಗದು. ಆಧುನಿಕ ಔಷಧ ಮತ್ತು ಚಿಕಿತ್ಸಾಕ್ರಮಗಳು ಇರದ ಆ ಕಾಲದಲ್ಲಿ ರೋಗಿಗಳನ್ನು ಸಂತೈಸಿದ ಈ ಕಾರ್ಯವು ಸ್ವಾಮಿ ವಿವೇಕಾನಂದರು ಶಿಷ್ಯರಿಗೆ ಉಪದೇಶಿಸಿದ ಸೇವಾ ಧರ್ಮದೀಕ್ಷೆಯ ಫಲವೇ ಸರಿ. ಸ್ವಾಮಿ ನಿಶ್ಚಯಾನಂದರಿಗೆ ಸ್ವಾಮಿ ವಿವೇಕಾನಂದರು ಒಮ್ಮೆ ಹೇಳಿದ್ದರಂತೆ: "ಮಹತ್ತಾದುದನ್ನು ಮಾಡಲು ಸಾಧ್ಯವಾಗದೇ ಇದ್ದರೂ ಪರವಾಗಿಲ್ಲ; ಒಂದು ಪೈಸೆಯಿಂದ ಮಣ್ಣಿನ ಮಡಕೆಯೊಂದನ್ನು ಕೊಂಡುಕೊಂಡು ಅದರಲ್ಲಿ ನೀರು ತುಂಬಿಸಿ ದಾರಿಹೋಕರ ತೃಷೆಯನ್ನು ನಿವಾರಿಸು" ಎಂದು ! ಆ ಮಾತಿನಿಂದ ಸ್ಫೂರ್ತಿ ಪಡೆದ ಸ್ವಾಮಿ ನಿಶ್ಚಯಾನಂದರು ಕನಖಲ್‌ನಲ್ಲಿ ಅದ್ಭುತವನ್ನೇ ಸಾಧಿಸಿಬಿಟ್ಟರು!

ಸೇವಾಶ್ರಮದ ಒಟ್ಟು ಭೂಮಿ ಮತ್ತು ಕಟ್ಟಡಗಳ ಮೌಲ್ಯವು ೧೯೩೮ರಲ್ಲಿ ರೂ. ೮೭,೧೮೦ಗಳಷ್ಟಾಗಿತ್ತು. ೧೯೫೭ರಲ್ಲಿ ಒಟ್ಟು ೧೦.೫೫ ಎಕರೆಗಳಷ್ಟು ಭೂಮಿಯನ್ನು ಅದು ಹೊಂದಿತ್ತು. ಸಾಧುಗಳಿಗೆ ಕುಟೀರ, ಸಿಬ್ಬಂದಿಗಳಿಗೆ ಮನೆ, ಹಾಲಿನ ಸರಬರಾಜಿಗೆ ಗೋಶಾಲೆ ಮತ್ತು ಕೃಷಿ ಚಟುವಟಿಕೆಗಳು,



ಒಳರೋಗಿಗಳಿಗಾಗಿ ೫೦ ಹಾಸಿಗೆಗಳ ಆಸ್ಪತ್ರೆ – ಹೀಗೆ ಒಂದೊಂದೇ ಸೌಲಭ್ಯಗಳು ಸೇರ್ಪಡೆಗೊಳ್ಳುತ್ತಾ ಬಂದವು. ೧೯೬೮ರಲ್ಲಿ 'ಸ್ವಾಮಿ ವಿವೇಕಾನಂದ ಶತಮಾನೋತ್ಸವ ಆಸ್ಪತ್ರೆ' ಸುಸಜ್ಜಿತ ಮೂರು ಮಹಡಿಗಳ ಕಟ್ಟಡದಲ್ಲಿ ನೆಲೆ ನಿಂತಿತು. ಇದರ ಉದ್ಘಾಟನೆಯನ್ನು ಆಗಿನ ಉತ್ತರಪ್ರದೇಶದ ಘನತೆವೆತ್ತ ರಾಜ್ಯಪಾಲರಾದ ಡಾ. ಬಿ. ಗೋಪಾಲರೆಡ್ಡಿ ಅವರು ನೆರವೇರಿಸಿದರು. ಅನಂತರದ ವರ್ಷಗಳಲ್ಲಿ ಸೇವಾಶ್ರಮದ ಅಭಿವೃದ್ಧಿ ಇನ್ನಷ್ಟು ಹೆಚ್ಚಿತು. ಸ್ವಾಮಿ ಪ್ರಜ್ಞಾನಂದ ಮೊದಲಾದ ದಕ್ಷ ಕಾರ್ಯದರ್ಶಿಗಳ ದೂರದೃಷ್ಟಿಯಿಂದ ಒಂದೊಂದೇ ಪ್ರಗತಿಕಾರ್ಯಗಳು ಸಾಕಾರಗೊಂಡವು.

ನೀರು ಸರಬರಾಜು ಮತ್ತು ನೈರ್ಮಲ್ಯ ವ್ಯವಸ್ಥೆ, ಎಕ್ಸ್‌ರೇ ಮತ್ತು ಶಸ್ತ್ರಚಿಕಿತ್ಸಾ ಕೇಂದ್ರ ಮುಂತಾದ ಸೌಲಭ್ಯಗಳು ಕಾಲ ಕ್ರಮೇಣ ಏರ್ಪಟ್ಟವು. ಈ ಮಹದುದ್ದೇಶಕ್ಕೆ ಭಾರತ ಸರಕಾರವೂ ತನ್ನ ಸಹಾಯ ಹಸ್ತವನ್ನು ಚಾಚಿತು.

ಹರಿದ್ವಾರದ ಸುತ್ತಮುತ್ತಲಿನ ಗುಡ್ಡಗಾಡಿನ ಹಳ್ಳಿಯ ಜನರಿಗೆ ವೈದ್ಯಕೀಯ ಸೌಲಭ್ಯ ನೀಡಲು ಸೇವಾಶ್ರಮ ಬಿಟ್ಟರೆ ಬೇರೆ ವ್ಯವಸ್ಥೆಯೇ ಆ ಕಾಲದಲ್ಲಿ ಇರಲಿಲ್ಲ. ರೋಗಿಗಳ ಶುಶ್ರೂಷೆಯ ಎಲ್ಲ ಹೊಣೆಯನ್ನೂ ಸಾಧುಸಂನ್ಯಾಸಿಗಳೇ ನಿಭಾಯಿಸುತ್ತಿದ್ದರು.

ಆದರೆ ರೋಗಿಗಳ ಸಂಖ್ಯೆ ಹೆಚ್ಚಿದಂತೆಲ್ಲಾ ಇದು ಪ್ರಯಾಸಕರವಾಯಿತು. ಈ ಕಾರಣದಿಂದ 'ಸಂಚಾರಿ ಚಿಕಿತ್ಸಾಲಯ'ವೊಂದನ್ನು ಆರಂಭಿಸುವ ಯೋಚನೆ ಹುಟ್ಟಿತು. ಹಾಂಗ್‌ಕಾಂಗ್‌ನ ಶ್ರೀ ಮೋಹನ್ ಬಿ. ಮುರ್ಜಾನಿ ಎಂಬ ದಾನಿಗಳು ನೀಡಿದ ರೂ. ೧೪,೦೦,೦೦೦/– ಉದಾರ ದೇಣಿಗೆಯಿಂದ ೧೯೭೨ – ೭೩ರಲ್ಲಿ ಸಂಚಾರಿ ಚಿಕಿತ್ಸಾಲಯವು ಆರಂಭವಾಯಿತು. ಭಾರತ ಸರ್ಕಾರವೂ ಈ ಮಹತ್ ಕಾರ್ಯದಲ್ಲಿ ಭಾಗಿಯಾಯಿತು. ೧೯೭೮ರಲ್ಲಿ ಎರಡನೇ ಸಂಚಾರಿ ಘಟಕವೂ ಉತ್ತರಪ್ರದೇಶದ ಮುಖ್ಯಮಂತ್ರಿಗಳಾಗಿದ್ದ ಶ್ರೀ ರಾಮ್ ನರೇಶ್ ಯಾದವ್ ಅವರಿಂದ ಉದ್ಘಾಟನೆಗೊಂಡಿತು. ಮುಂದಿನ ವರ್ಷಗಳಲ್ಲಿ ಆಧುನಿಕ ವೈದ್ಯಕೀಯ ಸೌಲಭ್ಯಗಳು ಒಂದೊಂದೇ ಸೇರ್ಪಡೆಗೊಂಡವು. ಆಂತರಿಕ ದೂರವಾಣಿ ವ್ಯವಸ್ಥೆ, ಜನರೇಟರ್ ಸೌಲಭ್ಯ, ನೀರಿನ ಟ್ಯಾಂಕ್ ನಿರ್ಮಾಣ ಇತ್ಯಾದಿಗಳಿಂದ ಸೇವಾಶ್ರಮದ ಆಸ್ಪತ್ರೆ ಸುಸಜ್ಜಿತವಾಯಿತು.

| ಸೇವಾಸೌಲಭ್ಯ ಪಡೆದವರು (ಅಂಕಿ ಅಂಶ) | | | | |
|---|---|---|---|---|
| ಅವಧಿ | ಒಳರೋಗಿಗಳು | ಹೊರರೋಗಿಗಳು | ಸಂಚಾರಿ ಚಿಕಿತ್ಸಾಲಯ | ಒಟ್ಟು |
| ೧೯೦೧–೧೯೬೬–೬೭ | ೫,೫೬೨೮ | ೩೦,೩೬೪೭೫ | – | ೩೦, ೯೨೧೦೩ |
| ೧೯೬೭–೬೮–೮೪–೮೫ | ೩,೧೦೮೮ | ೨೦,೫೫೦೭೪ | ೭, ೨೮೪೯೬ | ೨೮, ೧೪೬೫೮ |
| ೧೯೮೫–೮೬–೨೦೦೦–೦೧ | ೫,೪೭೧೮ | ೨೭,೭೫೪೩೨ | ೪, ೮೩೮೬೬ | ೩೩, ೧೪೦೧೬ |
| | ೧, ೪೧,೪೩೪ | ೭,೮೬,೯೮೧ | ೧೨, ೧೨೩೬೨ | ೯೨,೨೦, ೭೭೭ |



ಕನಖಲ್ ಸೇವಾಶ್ರಮದ ಇತಿಹಾಸವೆಂದರೆ ಮಾನವೀಯ ಸೇವೆಯ ಇತಿಹಾಸ. ಹರಿದ್ವಾರದ ಹಿಮಾಲಯ ಪರ್ವತ ಪ್ರದೇಶಗಳಲ್ಲಿ ನೊಂದ ಜನರ ಸೇವೆಯಲ್ಲಿ ಅದು ಸಾರ್ಥಕತೆಯನ್ನು ಮೆರೆದಿದೆ. ಈ ಆಶ್ರಮದ ಸೇವಾಕಾರ್ಯಕ್ಕೆ ಭಾರತ ಸರಕಾರವು ನೀಡುವ ಒಂದು ಕೋಟಿ ರೂಪಾಯಿಗಳ 'ಗಾಂಧಿ ಶಾಂತಿ ಪ್ರಶಸ್ತಿ' ೧೯೯೮ರಲ್ಲಿ ಲಭಿಸಿದೆ. ದೇಶದ ಮಹಾನ್ ನಾಯಕರಾದ ಸರ್ವಶ್ರೀ ಲಾಲಾ ಲಜಪತ್ ರಾಯ್ (೧೯೦೭), ಸಹೋದರಿ ನಿವೇದಿತಾ, ಸರ್ ಜಗದೀಶಚಂದ್ರಬೋಸ್ (೧೯೧೦), ಮಹಾತ್ಮ ಗಾಂಧಿ (೧೯೧೫), ಡಾ. ಎಸ್. ರಾಧಾಕೃಷ್ಣನ್ (೧೯೪೨), ವಿಜಯಲಕ್ಷ್ಮಿ ಪಂಡಿತ್ (೧೯೪೭), ಲಾಲ್‌ಬಹದ್ದೂರ್ ಶಾಸ್ತ್ರಿ (೧೯೫೩) ಮುಂತಾದವರು ಇಲ್ಲಿಗೆ ಭೇಟಿ ನೀಡಿ ಆಶ್ರಮದ ಸೇವಾಕಾರ್ಯಕ್ಕೆ ಪ್ರಶಂಸೆಯನ್ನು ವ್ಯಕ್ತಪಡಿಸಿದ್ದಾರೆ. ಸೇವಾಶ್ರಮದ ಸಂಸ್ಥಾಪಕರಾದ ಸ್ವಾಮಿ ಕಲ್ಯಾಣಾನಂದರು ೧೯೩೭ ರಲ್ಲಿ ಮಸ್ಸೂರಿಯಲ್ಲಿ ಪರಂಧಾಮವನ್ನೈದಿದರು. ಸ್ವಾಮಿ ನಿಶ್ಚಯಾನಂದರು ಮೂರು ದಶಕಗಳ ಸೇವಾವಧಿಯ ಕೊನೆಗೆ ೧೯೩೪ರಲ್ಲಿ ಇಹಲೋಕದ ಯಾತ್ರೆ ಮುಗಿಸಿದರು. ಅವರ ಉತ್ತರಾಧಿಕಾರಿಗಳು ಆ ಸೇವಾಯಜ್ಞವನ್ನು ಮುಂದುವರಿಸಿದರು.

## ಇತರ ಚಟುವಟಿಕೆಗಳು

**ರಾತ್ರಿಶಾಲೆ :** ೧೯೧೩, ನವೆಂಬರ್ ತಿಂಗಳಲ್ಲಿ ಪರಿಶಿಷ್ಟ ಮತ್ತು ಅವಕಾಶವಂಚಿತ ವಿದ್ಯಾರ್ಥಿಗಳಿಗೆ ರಾತ್ರಿಶಾಲೆಯನ್ನು ಆರಂಭಿಸಲಾಯಿತು.

**ಗ್ರಂಥಾಲಯ :** ೧೯೦೫ ರಿಂದ ಆರಂಭಗೊಂಡ ಈ ಗ್ರಂಥಾಲಯಕ್ಕೆ ಉತ್ತರಪ್ರದೇಶದ ರಾಯ್‌ಬಹಾದುರ್ ಲಾಲಾ ಬಾಜಿನಾಥ ಎಂಬ ಉದಾರದಾನಿಗಳು ೧೫೨ ಪುಸ್ತಕಗಳನ್ನು ದಾನ ನೀಡಿದರು. ಇತ್ತೀಚೆಗೆ ಗ್ರಂಥಾಲಯದ ಕಟ್ಟಡ ನವೀಕರಣಗೊಂಡಿದೆ.

**ದೇಗುಲಗಳು :** ೧೯೩೦ರಲ್ಲಿ ದೇಗುಲವೊಂದನ್ನು ನಿರ್ಮಿಸಲಾಗಿದ್ದು, ಅಮೃತಶಿಲೆಯನ್ನು ನೆಲಕ್ಕೆ ಹಾಸಲಾಯಿತು. ೧೯೭೩ರಲ್ಲಿ ಹೊಸದಾದ ಮತ್ತೊಂದು ದೇಗುಲವನ್ನು ನಿರ್ಮಿಸಿ, ೧೯೮೧ರಲ್ಲಿ ಅಲ್ಲಿ ಶ್ರೀರಾಮಕೃಷ್ಣ ಪರಮಹಂಸರ ಅಮೃತಶಿಲಾ ವಿಗ್ರಹವನ್ನು ಸ್ಥಾಪಿಸಲಾಯಿತು. ೧೯೫೨ರಲ್ಲಿ ಆಶ್ರಮದ ಹಿಂಭಾಗದ ಗಂಗಾನದಿಯ ತಟದಲ್ಲಿ ಸ್ನಾನಘಟ್ಟವನ್ನು ನಿರ್ಮಿಸಲಾಯಿತು.

**ಉತ್ಸವಗಳು :** ೧೯೦೩ರಿಂದಲೂ ಕನಖಲ್ ಆಶ್ರಮವು ಹರಿದ್ವಾರದ ಕುಂಭಮೇಳದಲ್ಲಿ ಭಾಗವಹಿಸುತ್ತಾ ಬಂದಿದೆ. ಶ್ರೀರಾಮಕೃಷ್ಣ ಪರಮಹಂಸರು (೧೯೩೬), ಶ್ರೀಶಾರದಾದೇವಿ (೧೯೫೩), ಸ್ವಾಮಿ ವಿವೇಕಾನಂದರು (೧೯೬೩) – ಇವರುಗಳ ಜನ್ಮಶತಮಾನೋತ್ಸವಗಳನ್ನು ಸಂಭ್ರಮದಿಂದ ಆಚರಿಸುವುದರೊಂದಿಗೆ ಪೂರ್ಣಕುಂಭಮೇಳ (೧೯೯೮), ಸೇವಾಶ್ರಮದ ಶತಮಾನೋತ್ಸವ (೨೦೦೧) ಇತ್ಯಾದಿಗಳನ್ನು ಸಡಗರದಿಂದ ಆಚರಿಸಿದೆ.

| ಆಶ್ರಮ ಕೈಗೊಂಡ ಪರಿಹಾರ ಮತ್ತು ಪುನರುಜ್ಜೀವನ ಕಾರ್ಯ | |
|---|---|
| **ತೆಹ್ರಿಯಲ್ಲಿ ಕಾಲರಾ ಪರಿಹಾರ ಕಾರ್ಯ** | ೧೯೧೩ |
| **ಸೇವಾಶ್ರಮದ ಸಮೀಪ ಉಂಟಾದ ಅಗ್ನಿ ಆಕಸ್ಮಿಕದ ಪರಿಹಾರ ಕಾರ್ಯ** | ೧೯೧೪ |
| **ಗಂಗಾನದಿ ಪ್ರವಾಹ ಪರಿಹಾರ ಕಾರ್ಯ** | ೧೯೨೪ |
| **ಪಶ್ಚಿಮ ಪಾಕಿಸ್ತಾನ ನಿರಾಶ್ರಿತ ಪರಿಹಾರ ಮತ್ತು ಪುನರುಜ್ಜೀವನ ಕಾರ್ಯ** | ೧೯೪೭ |
| **ಕುಮ್ಹಾರ್ ಬಸ್ತಿ ಅಗ್ನಿ ಆಕಸ್ಮಿಕದ ಪರಿಹಾರ ಕಾರ್ಯ** | ೧೯೪೯ |
| **ಉತ್ತರಕಾಶಿ ಭೂಕಂಪ ಪರಿಹಾರ ಕಾರ್ಯ** | ೧೯೯೧-೯೨ |

೧೯೭೮ರಲ್ಲಿ ಸೇವಾಶ್ರಮವು ಮಠ ಮತ್ತು ಮಿಷನ್ ಎಂದು ವಿಂಗಡಿಸಲ್ಪಟ್ಟಿತು. ಸ್ಥಾಪನೆಗೊಂಡ ಕಾಲದಿಂದ ಇದುವರೆಗೂ ಕನಖಲ್ ಆಶ್ರಮವು ಕ್ರಿಯಾಶೀಲವಾಗಿದ್ದು, ಧಾರ್ಮಿಕ, ಆಧ್ಯಾತ್ಮಿಕ, ಸಾಮಾಜಿಕ ಸೇವಾಕಾರ್ಯಗಳಲ್ಲಿ ತೊಡಗಿಕೊಂಡು ಶತಮಾನದ ದೀರ್ಘಪಥದಾಚೆಗೂ ಹೆಜ್ಜೆಗುರುತುಗಳನ್ನು ದಾಖಲಿಸಿರುವುದು ಗಮನಾರ್ಹ.

## ಬಂಗಾಳದ ಹಳ್ಳಿಯಲ್ಲಿ

# ಹೊಸಬೆಳಕು



ಡಾ. ಪಾಂಡುರಂಗ ವಿಠಲ



ರಾಮಕೃಷ್ಣ ಮಿಷನ್ನಿನ ಕೇಂದ್ರಗಳಲ್ಲದೆ, ವಿವೇಕಾನಂದ ಭಾವಧಾರೆಯಿಂದ ಪ್ರಭಾವಿತವಾದ ಅನೇಕ ಸೇವಾಕೇಂದ್ರಗಳು ದೇಶದಾದ್ಯಂತ ಹಬ್ಬಿವೆ. ರಾಮಕೃಷ್ಣ ಮಹಾಸಂಘದ ೧೨ನೆಯ ಪರಮಾಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಭೂತೇಶಾನಂದಜಿ ಅವರ ಜನ್ಮಸ್ಥಾನದಲ್ಲಿ ಇಂತಹ ಒಂದು ಸೇವಾಸಂಸ್ಥೆಯು, ಸ್ವಾಮಿ ವಿವೇಕಾನಂದರ ಸೇವಾದರ್ಶನವನ್ನು ತನ್ನದೇ ಆದ ವಿಶಿಷ್ಟರೀತಿಯಲ್ಲಿ ಅನುಷ್ಠಾನಗೊಳಿಸುತ್ತಿದೆ. ಈ ಪುಣ್ಯ ವೃತ್ತಾಂತವನ್ನು ಸಂಕ್ಷಿಪ್ತವಾಗಿ ವಿವರಿಸಿರುವ ಲೇಖಕರು ಮೈಸೂರಿನ ಒಂದು ಪದವಿಕಾಲೇಜಿನ ಪ್ರಾಂಶುಪಾಲರು. ವಿವೇಕಪ್ರಭ ಪತ್ರಿಕೆಯ ಪ್ರಕಟಣೆಯಲ್ಲಿ ಆತ್ಮೀಯ ಸಹಭಾಗಿಗಳಾಗಿರುವ ಇವರು ಅನೇಕ ಲೇಖನಗಳನ್ನು ಈ ಪತ್ರಿಕೆಗೆ ಬರೆದುಕೊಟ್ಟಿದ್ದಾರೆ.

**ಭಾ**ರತೀಯ ಸಂಸ್ಕೃತಿಯಲ್ಲಿ ಮೂರು ವಿಷಯಗಳು ವ್ಯಾಪಾರದ ವಸ್ತುವಾಗಬಾರದು ಎಂಬ ನಂಬಿಕೆ ಇದೆ: ಆಹಾರ, ವಿದ್ಯೆ, ಔಷಧ. ಭಾರತೀಯ ಸಂಸ್ಕೃತಿಯ ಪ್ರಭಾವವಿರುವ ದೇಶಗಳ ಸಾಮಾನ್ಯ ಜನರಲ್ಲೂ, ಅವರ ಧರ್ಮ ಯಾವುದೇ ಇರಲಿ, ಈ ನಂಬಿಕೆ ಆಳವಾಗಿ ಬೇರೂರಿರುವುದನ್ನು ಕಾಣಬಹುದು. ಈ ನಂಬಿಕೆಗೆ ಆಧಾರವಾಗಿ ಒಂದು ವಿಚಾರವಿದೆ. ನೋವು, ಅಸಹಾಯಕತೆಗಳನ್ನು ವ್ಯಾಪಾರದ ಬಂಡವಾಳವನ್ನಾಗಿಸುವುದು ಮಾನವೀಯತೆಯಲ್ಲ ಎಂಬುದೇ ಅದು. ಹಸಿವಿನಿಂದ ಕೂಡಿದ ಮನುಷ್ಯ ಆಹಾರಕ್ಕಾಗಿ ಬೇಡುವುದರಿಂದ ತೊಡಗಿ, ಏನೂ ಮಾಡಲು ತಯಾರಾಗುತ್ತಾನೆ. ಬಾಯಿರುಚಿಗೆ ಸಿಕ್ಕವನೂ, ಅಂತಹ ಆಹಾರಕ್ಕಾಗಿ ಎಷ್ಟು ಹಣ ನೀಡಲೂ ಸಿದ್ಧನಾಗಿರುತ್ತಾನೆ. ವಿದ್ಯೆಕಲಿಯುವ ಹಂತದಲ್ಲಿ ಕೂಡ ಎಳೆಯ ವಯಸ್ಸಿನ ಕಾರಣದಿಂದ, ಮನುಷ್ಯ ತನ್ನ ಆಸಕ್ತಿಗೆ ಮಾರ್ಗ ತೋರುವಲ್ಲಿ ಅಸಹಾಯಕನಾಗಿರುತ್ತಾನೆ; ಗುರು ಹೇಳಿದುದನ್ನೆಲ್ಲ ಒಪ್ಪಿಕೊಳ್ಳುತ್ತಾನೆ. ಶಿಕ್ಷಣ ಸಂಸ್ಥೆಗಳಲ್ಲಿ ಫೀ ಕಡಿಮೆ ಮಾಡಲು ಸಾಹುಕಾರರೂ ಕೇಳಿಕೊಳ್ಳುವರು; ಸಾಧ್ಯವಾಗದೆ ಇದ್ದಾಗ, ಹೇಗೋ ಕೊಡುವರು. ಶಿಕ್ಷಣಸಂಸ್ಥೆಗಳ ಸುಲಿಗೆ ಪ್ರತಿವರ್ಷ ಪತ್ರಿಕೆಗಳಲ್ಲಿ ಪ್ರಕಟವಾಗುವ ಜನಪ್ರಿಯ ಸುದ್ದಿ. ರೋಗಿಯ ಅಸಹಾಯಕತೆಯನ್ನಂತೂ ಪ್ರತ್ಯಕ್ಷವಾಗಿ ನೋಡಬಹುದು. ಮಾರಣಾಂತಿಕ ರೋಗಗಳಲ್ಲಿ, ಶಕ್ತಿಯಿಲ್ಲದಿದ್ದರೂ ರೋಗಿಯ ಬಂಧುಗಳು ಸಾಲ ಮಾಡಿಯಾದರೂ ಕೆಲವು ಕಾಲ ರೋಗಿಯನ್ನು ಉಳಿಸಿಕೊಳ್ಳಲು ನೋಡುವರು; ಔಷಧಿಗೆ ಎಷ್ಟು ಬೆಲೆ ಇಟ್ಟರೂ ಕೊಳ್ಳುವರು. ಡಾ. ಎಂ. ಶಿವರಾಂ ('ರಾ.ಶಿ.') ತಮ್ಮ ಕೊನೆಯ ದಿನಗಳಲ್ಲಿ ಬರೆದ ಆತ್ಮಕತೆಯಲ್ಲಿ, 'ಇತರರ ನೋವಿನಲ್ಲಿ ನಾನು ಜೀವಿಸಿದೆನಲ್ಲ' ಎಂಬ ಭಾವವನ್ನು ವ್ಯಕ್ತಪಡಿಸಿ, ಉಳಿದ ಡಾಕ್ಟರರುಗಳ ಕೋಪಕ್ಕೆ ಪಾತ್ರರಾಗಿದ್ದರಂತೆ.

ಈ ಹಿನ್ನೆಲೆಯಲ್ಲಿ ವಿದೇಶೀ ವ್ಯಾಪಾರವನ್ನು ಗಮನಿಸಿ. ಬಹುತೇಕ ಬಹುರಾಷ್ಟ್ರೀಯ ಕಂಪನಿಗಳು ಬಂಡವಾಳ ಹೂಡಿ ವ್ಯಾಪಾರ ಮಾಡುತ್ತಿರುವುದು ಆಹಾರ, ವಿದ್ಯೆ, ಔಷಧ ಕ್ಷೇತ್ರಗಳಲ್ಲೇ. ಪೇಟೆಂಟ್ ಅವಧಿ ಮೀರಿದ ಕ್ಯಾನ್ಸರ್ ಔಷಧ ತಯಾರಿಸುತ್ತಿದ್ದ ಕಂಪನಿ ಎಷ್ಟು ಲಾಭ ಪಡೆಯುತ್ತಿತ್ತು ಎಂಬುದು ಇತ್ತೀಚೆಗೆ ಪತ್ರಿಕೆಗಳಲ್ಲಿ ಚರ್ಚಿತವಾದ ವಿಷಯ. ಅತಿ ಹೆಚ್ಚು ಲಾಭ ಸಂಪಾದಿಸುವುದೇ ಅವರ ಗುರಿ. ಇತರರ ಅಸಹಾಯಕತೆಯ ಪರಿಸ್ಥಿತಿ ಇವರಿಗೆ ವರದಾನ. ಸಹಾಯ, ಸೇವೆಯಲ್ಲೂ ವ್ಯಾಪಾರೀ ದೃಷ್ಟಿಯದೇ ಮೇಲುಗೈ.

ನಮ್ಮಲ್ಲಿ ಧರ್ಮ ಮಾಡಬೇಕು, ಯಾರದಾದರೂ ಸ್ಮರಣೆಗೆ ಏನನ್ನಾದರೂ ಮಾಡಬೇಕು ಎಂದು ಅನ್ನಿಸಿದರೆ ಸಾಮಾನ್ಯವಾಗಿ ಏನು ಮಾಡುತ್ತಾರೆ? ಅನ್ನದಾನ ಮಾಡುತ್ತಾರೆ. ಹೆಸರು ಉಳಿಯಲು ಶಾಲೆ, ಆಸ್ಪತ್ರೆ, ಧರ್ಮಶಾಲೆಗಳನ್ನು ಕಟ್ಟಿಸುತ್ತಾರೆ. ಎಂದೂ ಇದನ್ನು ವ್ಯಾಪಾರೀ ಉದ್ದೇಶದಿಂದ ನಡೆಸುವುದಿಲ್ಲ. ಕಟ್ಟಿದ ನಂತರ ಧರ್ಮದರ್ಶಿಗಳಿಗೆ ಅಥವಾ ಸಾರ್ವಜನಿಕರಿಗೆ ಬಿಟ್ಟುಕೊಡುತ್ತಾರೆ.

ಸೇವೆಯ ಉದ್ದೇಶದಿಂದಲೇ ರಾಮಕೃಷ್ಣ ಮಿಷನ್ ಇಂತಹ ಅನೇಕ ಕಾರ್ಯಗಳನ್ನು ಮಾಡುತ್ತಿದೆ. ಪ್ರಕೃತಿ ವಿಕೋಪದ ಸಂದರ್ಭದಲ್ಲಿ ಮಾತ್ರ ಉಚಿತ ಆಹಾರ ನೀಡಿದರೂ, ಉಳಿದಂತೆ ಜನರ ಬದುಕು ಕಟ್ಟಿಕೊಡುವ ಕೆಲಸ ಮಾಡುತ್ತದೆ. 'ಹಸಿದವನಿಗೆ ಮೀನು ನೀಡಿದರೆ ಆ ದಿನದ ಹಸಿವು ಕಳೆಯುತ್ತದೆ; ಮೀನು ಹಿಡಿಯುವುದನ್ನು ಕಲಿಸಿಕೊಟ್ಟರೆ ಇಡೀ ಜೀವನ ಹಸಿವಿನಿಂದ ಮುಕ್ತವಾಗುತ್ತದೆ' ಎನ್ನುವ ಇಂಗ್ಲಿಷ್ ಉಕ್ತಿಯಂತೆ ರಾಮಕೃಷ್ಣ ಆಶ್ರಮಗಳಲ್ಲಿ ಜೀವನ ನಿರ್ವಹಣೆಗೆ ಬೇಕಾದ ಶಿಕ್ಷಣ, ಉದ್ಯೋಗ ತರಬೇತಿ, ವೈದ್ಯಕೀಯ ನೆರವು – ಈ ಕ್ಷೇತ್ರಗಳಲ್ಲಿ ಕೆಲಸ ನಡೆಯುತ್ತದೆ. ಇಂತಹ ಕೆಲಸಗಳು ಹೇಗೆ ಆರಂಭವಾಗುತ್ತವೆ ಎಂಬುದಕ್ಕೆ ಉದಾಹರಣೆಯೊಂದು ಇಲ್ಲಿದೆ:

ಶ್ರೀರಾಮಕೃಷ್ಣ ಮಿಷನ್ನಿನ ೧೨ನೆಯ ಪರಮಾಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಭೂತೇಶಾನಂದಜಿ ಅವರ ಶಿಷ್ಯರು ತಮ್ಮ ಗುರುಗಳ ಜನ್ಮಸ್ಥಳವನ್ನು ಸಂದರ್ಶಿಸಲು ಹೋಗಿ, ಅಲ್ಲಿನ ಅವಸ್ಥೆಯನ್ನು ಕಂಡು ಮರುಗಿದರು. ಏನನ್ನಾದರೂ ಮಾಡಬೇಕು ಎಂದು ಅನಿಸಿದಾಗ ಅವರು ಅಲ್ಲಿನ ಹಾಗೂ ಸುತ್ತಮುತ್ತಲಿನ ಹಳ್ಳಿಯ ಬಡಜನರಿಗೆ ಅನುಕೂಲವಾಗುವಂತೆ ವೈದ್ಯಕೀಯ ನೆರವು ನೀಡಲು ಪ್ರಯತ್ನಿಸಿ ಸಫಲರಾದರು. ಈ ಕಾರ್ಯ ಸ್ಥಳೀಯರ ಅಗತ್ಯಕ್ಕೆ ತಕ್ಕಂತೆ ಬೆಳೆಯುತ್ತ ಹೋದ ಕತೆ ರೋಚಕವಾಗಿದೆ.

ಪ್ರಶಾಂತ ಹಳ್ಳಿಯಾದ ಸೊಮ್‌ಸಾರ್ ಬಾಂಕುರಾ ಜಿಲ್ಲೆಯಲ್ಲಿದೆ. ಇಲ್ಲಿ ಶಾಲಿನಿ ನದಿಯು ದಾಮೋದರ್ ನದಿಯೊಡನೆ ಸೇರುತ್ತದೆ. ದಟ್ಟವಾಗಿ ಬೆಳೆದ ಮರಗಳ ನಡುವೆ ಇರುವ ಪ್ರಾಚೀನ ಸೋಮೇಶ್ವರ ಶಿವ ದೇವಸ್ಥಾನ ಅಸಂಖ್ಯ ಭಕ್ತರನ್ನು ಆಕರ್ಷಿಸುತ್ತಿದೆ. ಈ ಪ್ರಧಾನ ಶಿವನ ಹೆಸರಿನಿಂದಲೇ ಹಳ್ಳಿಯ ಹೆಸರು ಸೊಮ್‌ಸಾರ್ ಎಂದಾಗಿರುವುದು. ಇತರ ಅನೇಕ ಶಿವದೇವಸ್ಥಾನಗಳ ಜೊತೆ, ಕಾಳಿ, ಮಾನಸಾ, ಶೀತಲಾ ಗುಡಿಗಳೂ ಇವೆ. ಪಂಚಮುಂಡಿ ಆಸನವುಳ್ಳ ಪ್ರಾಚೀನ ಕಾಳಿ ದೇವಸ್ಥಾನ, ಪಾಳು ಬಿದ್ದ ಅರಮನೆ ಒಂದು ಕಾಲದಲ್ಲಿ ಈ ಹಳ್ಳಿಯು ವೈಭವದಿಂದ ಇದ್ದ ಕುರುಹಾಗಿದೆ. ಹಳ್ಳಿಯ ಒಂದು ಬದಿ ಪ್ರಸಿದ್ಧ ಚಾಂದ್‌ಪಾಲ್ ವಂಶಿಕರು ಇದ್ದು, ಇನ್ನೊಂದೆಡೆ ಸಾಮಾನ್ಯರು ಸಂತೋಷದಿಂದ ಇದ್ದಾರೆ. ಪೌಷ್ ಸಂಕ್ರಾಂತಿ, ಶಿವನ ಜಾತ್ರೆ, ಜನ್ಮಾಷ್ಟಮಿ, ಈದ್ ಮೊದಲಾದ ಹಬ್ಬಗಳನ್ನು ಇಲ್ಲಿ ಆಚರಿಸಲಾಗುತ್ತಿದೆ.

೧೯೮೯ರಲ್ಲಿ ಸ್ವಾಮಿ ಭೂತೇಶಾನಂದಜಿ ಅವರಿಂದ ಮಂತ್ರದೀಕ್ಷೆ ಪಡೆದ ಕೆಲವು ಶಿಷ್ಯರು ತಮ್ಮ ಗುರುವಿನ ಜನ್ಮಸ್ಥಳವಾದ ಸೊಮ್‌ಸಾರ್ ಅನ್ನು ನೋಡಿಹೋಗಲು ಬಂದರು. ಆಗ ಹಳ್ಳಿಗೆ ಇದ್ದ ದಾರಿ ಕೆಸರು ಮಣ್ಣಿನದು. ಅಲ್ಲಿನ ಸ್ಥಿತಿ ದಯನೀಯವಾಗಿತ್ತು. ಕೊಲ್ಕತಾದಿಂದ ಬರುವ ಭಕ್ತರ ಗುಂಪುಗಳಿಗೆ ಬರಲು ಸರಿಯಾದ ರಸ್ತೆಯೂ ಇರಲಿಲ್ಲ, ಕೂರಲೂ ಸ್ಥಳವೂ ಇರಲಿಲ್ಲ. ಪೂಜೆ ನಡೆಯುವ ದೇವಾಲಯ ಇರಲಿಲ್ಲ. ಮೊದಲು ಭೂತೇಶಾನಂದರ ಪೂರ್ವಿಕರ ಕುಲದೈವ



ಬುರೋ ಶಿವನ ದೇವಸ್ಥಾನದ ಪುನರ್ನಿರ್ಮಾಣ ಮಾಡಲು ಕೆಲಸ ಆರಂಭವಾಯಿತು. ಶ್ರೀರಾಮಕೃಷ್ಣ – ವಿವೇಕಾನಂದರ ಸೇವಾದರ್ಶಗಳಿಗನುಸಾರವಾಗಿ, ಗ್ರಾಮೋದ್ಧಾರದ ಕೆಲಸವೂ ಆರಂಭಗೊಂಡಿತು. ಭೂತೇಶಾನಂದಜಿ ಅವರ ಪೂರ್ವಾಶ್ರಮದ ಬಂಧುಗಳಾದ ರಾಯ್ ಕುಟುಂಬದವರು ದೇವಸ್ಥಾನ ಮತ್ತು ಆಶ್ರಮ ಕಟ್ಟಲು ಬೇಕಾದ ಜಾಗವನ್ನು ದಾನವಾಗಿ ಕೊಟ್ಟಿದ್ದಲ್ಲದೆ, ಎಲ್ಲ ಬಗೆಯ ಕಾರ್ಯಗಳಿಗೂ ತಮ್ಮ ಬೆಂಬಲ ನೀಡಿದರು.

೧೯೯೮ರಲ್ಲಿ ಪೂಜ್ಯ ಸ್ವಾಮಿ ಸ್ಮರಣಾನಂದಜಿ ಅವರಿಂದ ದೇವಾಲಯದ ಶಿಲಾನ್ಯಾಸ ನಡೆದ ಮೇಲೆ, ಸ್ವಾಗತದ ಕಮಾನಿನೊಡನೆ ಹೊಸ ರಸ್ತೆ, ಶಾಲೆ, ಅತಿಥಿಗೃಹಗಳ ನಿರ್ಮಾಣ ಸಾಂಗವಾಗಿ ನಡೆಯಿತು. ಪೂಜ್ಯ ಸ್ವಾಮಿ ಭೂತೇಶಾನಂದಜಿ ಅವರ ಜನ್ಮಶತಾಬ್ದಿಯ ಅಂಗವಾಗಿ 'ಸ್ವಾಮಿ ಭೂತೇಶಾನಂದ – ಚಿತ್ರಮಯ ಜೀವನಚರಿತ್ರೆ' ಮತ್ತು 'ಸ್ವಾಮಿ ಭೂತೇಶಾನಂದ ಶತಾಬ್ದಿಕೀ ಶ್ರದ್ಧಾಂಜಲೀ' ಪುಸ್ತಕಗಳನ್ನು ಬಿಡುಗಡೆ ಮಾಡಲಾಯಿತು. **'ಸೊಮ್‌ಸಾರ್ ಶ್ರೀರಾಮಕೃಷ್ಣ ಸೇವಾ ಮಂದಿರ'** ಎಂಬ ಸಂಸ್ಥೆಯು ಈಗ ರಾಮಕೃಷ್ಣ ಮಿಷನ್ನಿನ ಮಾರ್ಗದರ್ಶನದಲ್ಲಿ ನಡೆಯುತ್ತಿರುವ ಭಾವಪ್ರಚಾರ ಪರಿಷತ್ತಿನ ಅಂಗಸಂಸ್ಥೆಯಾಗಿದೆ.

**ಸ್ವ–ಉದ್ಯೋಗ ಕಾರ್ಯಕ್ರಮ:** ಹಳ್ಳಿಯ ಯುವಜನರನ್ನು ಸ್ವಾವಲಂಬಿಗಳನ್ನಾಗಿಸಲು ವಿವಿಧ ಕೆಲಸಗಳಲ್ಲಿ ತರಬೇತಿಗಳನ್ನು ಆಶ್ರಮದ ವತಿಯಿಂದ ನೀಡಲಾಗುತ್ತಿದೆ. ಇದರಿಂದ ಬಹುಮಂದಿ ತಮ್ಮ ಕಾಲಮೇಲೆ ನಿಂತು ಜೀವನ ನಡೆಸುವಂತಾಗಿದೆ.

**ಹಾವು ಕಡಿತ:** ಪ್ರತಿವರ್ಷ ಹಾವುಕಡಿತಕ್ಕೆ ಎರಡು–ಮೂರು ಮಕ್ಕಳು ಬಲಿಯಾಗುತ್ತಿದ್ದು, ಕಳವಳಕ್ಕೆ ಕಾರಣವಾಗಿತ್ತು. ಆರೋಗ್ಯಕೇಂದ್ರಗಳು ಹಾವು ಕಡಿತದ ಔಷಧವನ್ನು ದಾಸ್ತಾನು ಇಟ್ಟುಕೊಳ್ಳುವಂತಿರಲಿಲ್ಲ. ಹೀಗಾಗಿ ಕಡಿತಕ್ಕೊಳಗಾದವರನ್ನು ಹತ್ತಿರವೆಂದರೆ ಇಪ್ಪತ್ತೈದು ಕಿ.ಮೀ. ದೂರದ ಬರ್ದ್ವಾನ್ ಪಟ್ಟಣಕ್ಕೆ ಒಯ್ಯಬೇಕಾಗಿತ್ತು. ಇಲ್ಲೂ ಖಚಿತವಾಗಿ ಔಷಧ ಸಿಕ್ಕೀತೆಂಬ ಭರವಸೆ ಇಲ್ಲ. ಹೀಗಾಗಿ ಈ ಪ್ರದೇಶದ ಎಲ್ಲ ಗ್ರಾಮಸ್ಥರ ಅಪೇಕ್ಷೆಯಂತೆ, ಔಷಧವನ್ನು ಸರಿಯಾಗಿ ರಕ್ಷಿಸಿಕೊಂಡು, ಅದನ್ನು ನೀಡಲು ಎಲ್ಲಕಾಲದಲ್ಲೂ ಲಭ್ಯರಿರುವ ಡಾಕ್ಟರರನ್ನೊಳಗೊಂಡ ಕೇಂದ್ರವನ್ನು ಸ್ಥಾಪಿಸುವುದು ಸ್ವಾಮಿ ಭೂತೇಶಾನಂದ ಚಾರಿಟಬಲ್ ಆಸ್ಪತ್ರೆಯ ಗುರಿಯಾಗಿದೆ.

**ಆಧುನಿಕ ಸೌಲಭ್ಯ :** ಸ್ವಾಮಿ ಭೂತೇಶಾನಂದ ಚಾರಿಟಬಲ್ ಆಸ್ಪತ್ರೆಯು ಈಗಾಗಲೇ ಸೊಮ್‌ಸಾರ್ ಹಾಗೂ ಸುತ್ತಲಿನ ಹಳ್ಳಿಗರ ಆರೋಗ್ಯ ಸೇವೆಯನ್ನು ಉಚಿತವಾಗಿ, ಇಲ್ಲವೆ ಅತ್ಯಲ್ಪ ಹಣದಲ್ಲಿ ನಡೆಸುತ್ತಿದೆ. ಕ್ರಮೇಣ ರೋಗನಿದಾನ, ಎಕ್ಸ್‌ರೇ – ಮುಂತಾದ ಅತ್ಯಾಧುನಿಕ ಸೌಲಭ್ಯಗಳಿಗಾಗಿ ಗ್ರಾಮಸ್ಥರು ದೂರದ ನಗರಗಳಿಗೆ ಹೋಗುವುದು ತಪ್ಪಲಿದೆ. ಅದಕ್ಕಾಗಿ ಹಲವಾರು ಕಾರ್ಯಯೋಜನೆಗಳನ್ನು ಇನ್ನೂ ಕೈಗೊಳ್ಳಬೇಕಾಗಿದೆ.

**ವಿವೇಕಾನಂದ ಸ್ವಾಸ್ಥ್ಯ ಸೇವಾಕೇಂದ್ರ:** ಸೊಮ್‌ಸಾರ್ ಮತ್ತು ಸುತ್ತಲಿನ ಐದು ಹಳ್ಳಿಗಳಿಗೆ ಎಂಟು ಕಿ.ಮೀ. ದೂರದಲ್ಲಿನ ಖಂಡಘೋಷ್‌ನಲ್ಲಿನ ಒಂದು ಆರೋಗ್ಯ ಉಪಕೇಂದ್ರದ ಮೂಲಕ ಮಾತ್ರ ಆರೋಗ್ಯ ಸೇವೆ ಲಭ್ಯ. ಇದು ಏನೇನೂ ಸಾಲದು. ಹೀಗಾಗಿ, ಕೊಲ್ಕೊತಾದ ವಿವೇಕಾನಂದ ಸ್ವಾಸ್ಥ್ಯ ಸೇವಾಸಂಘದ ಮೂಲಕ ಹದಿನೈದು ದಿನಗಳಿಗೊಮ್ಮೆ ಆರೋಗ್ಯ ಕಾರ್ಯಕರ್ತರು, ವೈದ್ಯರು ಉಚಿತ ಔಷಧಿಗಳೊಡನೆ ಬಂದು ಇಡೀ ದಿನ ಇದ್ದು ಚಿಕಿತ್ಸೆ ನೀಡುತ್ತಾರೆ. ಅಲ್ಲದೆ, ಪ್ರತಿತಿಂಗಳ ಮೂರನೆ ವಾರ ಹಲ್ಲು, ಕಣ್ಣು ಮತ್ತು ಹೆರಿಗೆ ವಿಶೇಷ ತಜ್ಞರು ಬಂದು ಸುತ್ತಣ ಹಳ್ಳಿಗಳಿಂದ ಬಂದವರಿಗೆ ಕೂಡ ಚಿಕಿತ್ಸೆ ನೀಡುವರು. ಇಚ್ಛೆಯುಳ್ಳ ಹಳ್ಳಿಯ ಯುವಜನರಿಗೆ ಸಮುದಾಯ ಆರೋಗ್ಯ ಮಾರ್ಗದರ್ಶಕರ ವೃತ್ತಿ ತರಬೇತಿಯನ್ನೂ ನೀಡಲಾಗುತ್ತಿದೆ. ಅವರು ಮನೆಮನೆಗೆ ಹೋಗಿ ಆರೋಗ್ಯ, ನೈರ್ಮಲ್ಯದ ಬಗ್ಗೆ ತಿಳಿವಳಿಕೆ ನೀಡಿ, ಹಳ್ಳಿಗರು ಆರೋಗ್ಯದ ಬಗ್ಗೆ ಅರಿವು ಪಡೆಯುವಂತೆ ಮಾಡುತ್ತಾರೆ.

ಮೊಬೈಲ್ ಎಕ್ಸ್‌ರೇ ಯಂತ್ರ, ಕಣ್ಣು ಚಿಕಿತ್ಸೆಯ ಯಂತ್ರಗಳು, ಮಧ್ಯಮ ಗಾತ್ರದ ವಿದ್ಯುಜ್ಜನಕಗಳು, ಪ್ರೊಜೆಕ್ಟರ್ ಮತ್ತು ರೋಗ ಪರೀಕ್ಷೆಯ ಸಲಕರಣೆಗಳನ್ನು ಹೊಂದಿದ ಒಂದು ವ್ಯಾನ್ ಮೂರು ತಿಂಗಳಿಗೆ ಒಮ್ಮೆ ಮೂರು ದಿನದ ಶಿಬಿರಗಳನ್ನು ನಡೆಸಿ, ಅನಾರೋಗ್ಯ ಹಳ್ಳಿಗರ ಸೇವೆ ಮಾಡುತ್ತಿದೆ. ಹೋಮಿಯೋಪತಿ ಚಿಕಿತ್ಸೆ ಪಡೆಯಲು ಇಚ್ಛಿಸುವವರಿಗಾಗಿ ಅದರಲ್ಲಿ ಒಂದು ವಿಭಾಗವನ್ನೂ ತೆರೆಯಲಾಗಿದೆ.

**ಸ್ವಾಮಿ ಭೂತೇಶಾನಂದ ಶತಮಾನೋತ್ಸವ ಆಸ್ಪತ್ರೆ:** ವಾರದ ವೈದ್ಯಕೀಯ ಚಿಕಿತ್ಸೆ ನಡೆಯುತ್ತಿದ್ದ ಕಡೆ ಇಂದು ಆಸ್ಪತ್ರೆಯ ಕಟ್ಟಡ ನಿರ್ಮಾಣವಾಗಿದೆ. ಅದರಲ್ಲಿ ಒಳರೋಗಿಗಳ ವಿಭಾಗ, ಹಾವು ಕಡಿತದ ಔಷಧವನ್ನು ಕಾಯ್ದಿರಿಸಲು ವ್ಯವಸ್ಥೆಯಿರುವ ಕೇಂದ್ರ ಮೊದಲಾದುವು ಇದ್ದು, ಇದನ್ನು ಪ್ರಾರಂಭಿಸಲು ಅನುಮತಿಗಾಗಿ ಕಾಯಲಾಗುತ್ತಿದೆ.

**ಸ್ವಾಮಿ ವಿವೇಕಾನಂದ ಸ್ವಾಸ್ಥ್ಯ ಪರಿಸೇವಾ ಪ್ರಕಲ್ಪ:** ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿಯ ಸಂದರ್ಭದಲ್ಲಿ ನೂರು ಜನ ಗರ್ಭಿಣಿಯರು, ಹಾಲೂಡಿಸುವ ತಾಯಂದಿರು ಮತ್ತು ಮೂರು ವರ್ಷದೊಳಗಿನ ಮಕ್ಕಳ ಆರೋಗ್ಯವನ್ನು ನಿರಂತರವಾಗಿ ಪರಿಶೀಲಿಸುತ್ತ, ಅವರ ಆರೋಗ್ಯ ಅಭಿವೃದ್ಧಿಯನ್ನು ಸಾಧಿಸುವ ಯೋಜನೆಯನ್ನು ಕೇಂದ್ರ ಸರಕಾರದ ನೆರವಿನಿಂದ ಸೊಮ್‌ಸಾರ್‌ನ ಪಶ್ಚಿಮ್‌ಪಾರಾದಲ್ಲಿ ನಡೆಸಲಾಗುತ್ತಿದೆ. ಇದು ರಾಮಕೃಷ್ಣ ಮಿಷನ್, ಸ್ವಾಮಿ ವಿವೇಕಾನಂದರ ೧೫೦ನೇ ಜನ್ಮಜಯಂತಿಯ ಸಂದರ್ಭದಲ್ಲಿ. ದೇಶದ ನೂರಾರು ಸ್ಥಳಗಳಲ್ಲಿ ನಡೆಸುತ್ತಿರುವ ಸೇವಾಕಾರ್ಯದ ಒಂದು ಅಂಗವಾಗಿದೆ.

ಹೀಗೆ ಪೂಜ್ಯ ಸ್ವಾಮಿ ಭೂತೇಶಾನಂದಜಿ ಅವರ ಜನ್ಮಸ್ಥಾನದಲ್ಲಿ ಹೊಸಬೆಳಕು ಮೂಡಿದೆ; ಅವರ ಸ್ಮರಣೆಯ ಬೆಳಕು ಸಾವಿರಾರು ಬಡಜನರ ಬಾಳಿನಲ್ಲೂ ಆಶೆಯ ಕಿರಣವನ್ನು ಮೂಡಿಸಿದೆ.





# ಶ್ರೀಶಾರದಾ ಮಠದ

# ಸೇವಾಕಾರ್ಯಗಳು





ಕೆ. ವಿ. ಸ್ವರ್ಣಗೌರಿ

ಶ್ರೀಶಾರದಾದೇವಿಯವರ ವ್ಯಕ್ತಿತ್ವವನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ಶ್ರೀಶಾರದಾಮಠವು ಸ್ಥಾಪನೆಗೊಂಡಿತು. ಶ್ರೀಶಾರದಾದೇವಿಯವರದು ಸೇವೆಗೆ ಮುಡಿಪಾದ ಜೀವನ. ಈ ಉದಾತ್ತ ಸೇವೆಯನ್ನು ಆದರ್ಶವಾಗಿಟ್ಟುಕೊಂಡು ಶಾರದಾಮಠದ ಸಂನ್ಯಾಸಿಯರು ದೇಶದ ವಿವಿಧ ಕಡೆಗಳಲ್ಲಿ, ಹಲವಾರು ಕ್ಷೇತ್ರಗಳಲ್ಲಿ ಬಹು ಉತ್ತಮ ಸೇವೆಯನ್ನು ನಡೆಸುತ್ತಿದ್ದಾರೆ. ಶ್ರೀಶಾರದಾಮಠದ ಸೇವಾಕಾರ್ಯಗಳ ಸೋದಾಹರಣ ವಿವರವನ್ನು ನೀಡಿರುವ ಲೇಖಕಿ, ಮೈಸೂರಿನ ಶ್ರೀರಾಮಕೃಷ್ಣ ಆಶ್ರಮದ ಭಕ್ತರು. ವಿವೇಕಪ್ರಭ ಪತ್ರಿಕೆಯಲ್ಲಿ ಇವರ ಹಲವು ಲೇಖನಗಳು ಪ್ರಕಟವಾಗಿವೆ.

"ನನಗೆ ಮುಕ್ತಿಯೂ ಬೇಕಾಗಿಲ್ಲ, ಭಕ್ತಿಯೂ ಬೇಕಾಗಿಲ್ಲ. ನಾನು ಲಕ್ಷಾಂತರ ನರಕಗಳಿಗೂ ಹೋಗಬಲ್ಲೆ...."

"ಪ್ರತಿಯೊಬ್ಬ ವ್ಯಕ್ತಿಗೂ ದಿವ್ಯತೆಯ ಅರಿವನ್ನು ನೀಡುವವರೆಗೆ ಸಾವಿರಾರು ಬಾರಿ ಹುಟ್ಟಿಬರುವೆನು ...."

ಇಂತಹ ಧೀರ, ವೀರವಾಣಿಯು ಹೊರಹೊಮ್ಮಿದ್ದು ಸ್ವಾಮಿ ವಿವೇಕಾನಂದರಂತಹ ಪುರುಷಸಿಂಹರಿಂದ. ಸದಾ ಸಮಾಧಿಯಲ್ಲಿಯೇ ಮಗ್ನವಾಗಿರಬೇಕೆಂಬ ಆಸೆಯಿಂದ ಬಳಿಸಾರಿದ ನರೇಂದ್ರನಿಗೆ (ಸ್ವಾಮಿ ವಿವೇಕಾನಂದ) ಗುರುವಿತ್ತ ಆಣತಿ ಇಂತಿತ್ತು: "ಇದಕ್ಕಿಂತ ಉನ್ನತವಾದ ಸ್ಥಿತಿ ಆಧ್ಯಾತ್ಮಿಕ ಜೀವನದಲ್ಲಿ ಇದೆ. ವಿಶ್ವದ ಪ್ರತಿಯೊಂದು ಚರಾಚರ ವಸ್ತುವಿನ ಹಿಂದಿರುವ ಆತ್ಮವನ್ನು ಕಂಡು ಜನಸಾಮಾನ್ಯರ ಕಲ್ಯಾಣಕ್ಕಾಗಿ ನಿನ್ನ ಜೀವನವನ್ನು ಸಮರ್ಪಿಸು, ಕೇವಲ ನಿನ್ನ ಮುಕ್ತಿಯನ್ನು ಅರಸುವುದಲ್ಲ."

ಗುರುವಿನ ಆಣತಿಯನ್ನು ಪಾಲಿಸಲು ಹೊರಟ ಈ ಧೀರ ಶಿಷ್ಯ ಕಂಡದ್ದೇನು? ಮೂಢನಂಬಿಕೆಗಳ ಅಂಧಕಾರದಲ್ಲಿ ಮುಳುಗಿದ್ದ, ಶಿಕ್ಷಣ ಮತ್ತು ಸ್ವಾತಂತ್ರ್ಯಗಳಿಲ್ಲದ ಸಮಾಜದಲ್ಲಿ ಬಂಧಿತರಾಗಿದ್ದ ಭಾರತದ ಮಹಿಳೆಯರ ದುಃಸ್ಥಿತಿ. ಸ್ವಾಮೀಜಿಯವರ ಮನಸ್ಸು ಭಾರತೀಯ ಸ್ತ್ರೀಯರ ಉದ್ಧಾರಕ್ಕಾಗಿ ಚಡಪಡಿಸುತ್ತಿತ್ತು. ಹಾಗೂ ಮನಸ್ಸಿನಲ್ಲೇ ಆ ಯೋಜನೆಯ ರೂಪುರೇಖೆಗಳು ಸಿದ್ಧವಾಗುತ್ತಿದ್ದವು. ಕ್ರಿ.ಶ. ೧೮೯೫ರಲ್ಲಿ ಅಮೆರಿಕಾದಿಂದ



ತಮ್ಮ ಪ್ರಿಯ ಗುರುಭಾಯಿ ಶಶಿ ಮಹಾರಾಜರಿಗೆ (ಸ್ವಾಮಿ ರಾಮಕೃಷ್ಣಾನಂದ) ಪತ್ರ ಬರೆಯುತ್ತಾ ಸ್ವಾಮೀಜಿ ತಮ್ಮ ಮನಸ್ಸಿನಲ್ಲಿದ್ದ ಯೋಜನೆಯನ್ನು ಹೀಗೆ ಬಹಿರಂಗಪಡಿಸುತ್ತಾರೆ: "ಮಹಿಳೆಯರ ಸ್ಥಿತಿ ಉತ್ತಮಗೊಂಡಲ್ಲದೆ ಜಗತ್ತು ಮೇಲಾಗುವುದಕ್ಕೆ ಅವಕಾಶವಿಲ್ಲ. ಹಕ್ಕಿ ಒಂದೇ ರೆಕ್ಕೆಯ ಬಲದಿಂದ ಹಾರಲಾರದು. ಅದಕ್ಕೋಸ್ಕರವೇ ಶ್ರೀರಾಮಕೃಷ್ಣ ಅವತಾರದಲ್ಲಿ ಅವರು ಮಹಿಳೆಯನ್ನು ಗುರುವಾಗಿ ಸ್ವೀಕರಿಸಿದರು. ಸ್ತ್ರೀವೇಷದಲ್ಲಿ ಮತ್ತು ಸ್ತ್ರೀಭಾವದಲ್ಲಿ ದೇವರನ್ನು ಪೂಜಿಸಿದರು. ಸ್ತ್ರೀಯರ ಮಾತೃತ್ವದ ಆದರ್ಶವನ್ನು, ಅವರು ಜಗನ್ಮಯಿಯ ಪ್ರತಿನಿಧಿ ಎಂದು ಉಪದೇಶ ಮಾಡಿದರು. ಆದಕಾರಣ ನನ್ನ ಮೊದಲನೇ ಪ್ರಯತ್ನವೇ ಸ್ತ್ರೀಯರಿಗಾಗಿ ಒಂದು ಮಠವನ್ನು ಸ್ಥಾಪಿಸಬೇಕೆಂಬುದು. ಈ ಮಠದಿಂದ ಗಾರ್ಗಿ ಮೈತ್ರೇಯಿಯರಂತಹ ನಾರೀರತ್ನಗಳು ಹೊರಹೊಮ್ಮುವವು. ಇವರನ್ನು ಮೀರಿದವರೂ ಬರುವರು" (*ಕೃತಿಶ್ರೇಣಿ, ಸಂ:೪, ಪು. ೩೭೦*).

ತಮ್ಮ ಈ ಯೋಜನೆಗೆ ಮತ್ತೂ ಸ್ಪಷ್ಟ ರೂಪವನ್ನು ಕೊಡುತ್ತಾ, ಅದೇ ವರ್ಷ ತಮ್ಮ ಗುರುಭಾಯಿಗಳಾದ ಸ್ವಾಮಿ ಶಿವಾನಂದರಿಗೆ ಏಳುಸಾವಿರ ರೂಪಾಯಿಗಳನ್ನು ಕಳುಹಿಸಿ. ಒಂದು ಜಾಗ ಕೊಂಡುಕೊಳ್ಳಲು ಆಜ್ಞಾಪಿಸಿ ಸ್ವಾಮೀಜಿ ಹೀಗೆಂದು ಪತ್ರ ಬರೆಯುತ್ತಾರೆ: "ಶಕ್ತಿಯಿಲ್ಲದೆ ಜಗತ್ತು ಉದ್ಧಾರವಾಗುವಂತೆ ಇಲ್ಲ. ಎಲ್ಲಾ ದೇಶಗಳಿಗಿಂತ ನಮ್ಮ ದೇಶ ಏತಕ್ಕೆ ಹಿಂದಿರುವುದು? ಶಕ್ತಿಗೆ ಇಲ್ಲಿ ಗೌರವವಿಲ್ಲದೇ ಇರುವುದೇ ಕಾರಣ.... ಶಕ್ತಿಯ ಆರಾಧನೆ! ಶಕ್ತಿಯ ಆರಾಧನೆ!.... ನಾವು ಶ್ರೀಮಾತೆಯವರಿಗೆ ಮೊದಲು ಮಠವನ್ನು ಕಟ್ಟಿಕೊಡಬೇಕು. ಮೊದಲು ತಾಯಿ ಮತ್ತು ಹೆಣ್ಣುಮಕ್ಕಳು, ಅನಂತರ ತಂದೆ ಮತ್ತು ಗಂಡುಮಕ್ಕಳು.... ನನಗೆ ತಾಯಿಯ ಆಶೀರ್ವಾದ ತಂದೆಯ ಆಶೀರ್ವಾದಕ್ಕಿಂತ ಲಕ್ಷಪಾಲು ಶ್ರೇಯಸ್ಕರ...." (*ಕೃತಿಶ್ರೇಣಿ, ಸಂ: ೪, ಪು. ೨೪೫*).

ಆತ್ಮಜ್ಞಾನಸಂಪನ್ನರಾದ ಸ್ವಾಮೀಜಿಯವರು ಸ್ತ್ರೀಪುರುಷ ಭೇದಭಾವವನ್ನು ಸಹಿಸುತ್ತಿರಲಿಲ್ಲ. ಅಂತಹ ಸಹಿಸಲಸದಳವಾದ ಚಳಿಗಾಲದಲ್ಲಿ ಅಮೆರಿಕಾದ ಊರಿಂದ ಊರಿಗೆ ಹೋಗಿ ಉಪನ್ಯಾಸ ಮಾಡುತ್ತಾ, ಆತಂಕಗಳೊಡನೆ ಹೋರಾಡುತ್ತಾ ಶ್ರೀಮಾತೆಯವರ ಮಠಕ್ಕಾಗಿ ಹಣ ಕೂಡಿಸುತ್ತಿದ್ದರು. ಅಷ್ಟೇ ಅಲ್ಲದೆ ಸ್ತ್ರೀಯರ ಸಂಸ್ಥೆಗಾಗಿ ಅಮೆರಿಕಾದಿಂದ ವರ್ಷಕ್ಕೆ ೧,೭೦೦ ರೂಪಾಯಿ ಆದಾಯ ಬರುವಂತೆ ಮಾಡುವ ತಯಾರಿಯೂ ನಡೆಯುತ್ತಿತ್ತು. ಶ್ರೀರಾಮಕೃಷ್ಣರ ಭಾವಧಾರೆಯಿಂದ ಪ್ರಭಾವಿತರಾದ ಉತ್ತಮ ಚಾರಿತ್ರ್ಯವುಳ್ಳ ಯುವತಿಯರು ಈ ಕೆಲಸಕ್ಕೆ ಮುಂದೆ ಬರಲೆಂದು ಆಶಿಸುತ್ತಾ, **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಎಂಬ ಮಹಾಮಂತ್ರದ ಮೂಲಕ ಅವರೆಲ್ಲರಿಗೆ ಕರೆ ನೀಡಿದರು.

ಸ್ವಾಮೀಜಿಯವರ ಕನಸಿನ ಕೂಸಾದ 'ಶ್ರೀಶಾರದಾ ಮಠ' ಕಲ್ಕತ್ತಾದ ದಕ್ಷಿಣೇಶ್ವರದಲ್ಲಿ, ಕ್ರಿ.ಶ. ೧೯೫೪ರ ಡಿಸೆಂಬರ್ ೨ರಂದು ಉದ್ಘಾಟನೆಯಾಯಿತು. ಓರ್ವ ಋಷಿಯ ಬಹುಕಾಲದ ಆಸೆ ಹೀಗೆ ಮೂರ್ತರೂಪ ತಾಳಿತು. ರಾಮಕೃಷ್ಣ ಮಠದ (ಪುರುಷರಿಗಾಗಿನ ಸಂನ್ಯಾಸಿ ಮಠ) ಅನೇಕ ಹಿರಿಯ ಸಂನ್ಯಾಸಿಗಳು ಹಾಗೂ ಭಕ್ತರು ಈ ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ಬ್ರಹ್ಮಚಾರಿಣಿಯರ ವೇದಪಠನ ಹಾಗೂ ಸ್ತೋತ್ರಗಳ ನಡುವೆ ರಾಮಕೃಷ್ಣ ಮಠದ ಸಂಘಾಧ್ಯಕ್ಷರಾದ ಸ್ವಾಮಿ ಶಂಕರಾನಂದರು ದಿವ್ಯತ್ರಯರ ಭಾವಚಿತ್ರಗಳನ್ನು ಗರ್ಭಮಂದಿರದಲ್ಲಿ ಪ್ರತಿಷ್ಠಾಪಿಸಿದರು. ಪ್ರಾತಃಕಾಲದಿಂದಲೇ ಸ್ತ್ರೀಭಕ್ತರು ಅಲ್ಲಿ ದೇವರನಾಮಗಳನ್ನು ಹಾಡಲಾರಂಭಿಸಿದ್ದರು. ಇಡೀ ದಿನ ವಿಶೇಷ ಪೂಜೆ, ಹೋಮಹವನಾದಿಗಳು ಸೇರಿ ವಾತಾವರಣವೆಲ್ಲಾ ಆಧ್ಯಾತ್ಮಿಕ ತರಂಗಗಳಿಂದ ಪ್ರತಿಧ್ವನಿಸುತ್ತಿತ್ತು. ಸಂನ್ಯಾಸಿಗಳು ಮತ್ತು ಪುರುಷಭಕ್ತರು ಪ್ರಸಾದ ಸೇವಿಸಿ ಬೆಳಗ್ಗೆ ಹತ್ತು ಘಂಟೆಯ ವೇಳೆಗೆ ಹೊರಟುಹೋದರು.

"ಸ್ತ್ರೀಯರ ಮಠದಲ್ಲಿ ಪುರುಷರಿಗೆ ಯಾವ ಸಂಬಂಧವೂ ಇರಕೂಡದು ಹಾಗೂ ಪುರುಷರ ಮಠದಲ್ಲಿ ಸ್ತ್ರೀಯರಿಗೆ ಯಾವ ಸಂಬಂಧವೂ ಇರಕೂಡದು" ಎಂದು ಸ್ವಾಮೀಜಿ ನಿಯಮವನ್ನು ವಿಧಿಸಿದ್ದರು.



ಕ್ರಿ.ಶ. ೧೯೫೯ರವರೆಗೆ ಶ್ರೀಶಾರದಾಮಠವು ಬೇಲೂರು ಮಠದ ಒಂದು ಶಾಖಾ ಕೇಂದ್ರವಾಗಿತ್ತು. ಕ್ರಿ.ಶ. ೧೯೫೯, ಜನವರಿ ೧ನೇ ತಾರೀಖು ಶ್ರೀಮಾತೆಯವರ ಜನ್ಮದಿನೋತ್ಸವದಂದು ಏಳು ಜನ ಬ್ರಹ್ಮಚಾರಿಣಿಯರಿಗೆ ಸಂನ್ಯಾಸ ದೀಕ್ಷೆ ನೀಡಿ, ಆಗಸ್ಟ್ ತಿಂಗಳಲ್ಲಿ ಶ್ರೀಶಾರದಾಮಠದ ಎಲ್ಲಾ ಜವಾಬ್ದಾರಿಯನ್ನೂ ಅವರಿಗೇ ವಹಿಸಿದರು. ಪ್ರವ್ರಾಜಿಕಾ ಭಾರತೀಪ್ರಾಣಾಜಿ ಅದರ ಅಧ್ಯಕ್ಷರಾದರು ಮತ್ತು ಪ್ರವ್ರಾಜಿಕಾ ಮುಕ್ತಿಪ್ರಾಣಾಜಿ ಪ್ರಧಾನ ಕಾರ್ಯದರ್ಶಿಗಳಾದರು.

ಅದೇ ವರ್ಷ ಪ್ರವ್ರಾಜಿಕಾ ಭಾರತೀಪ್ರಾಣಾಜಿಯವರು ಎಂಟು ಜನ ಬ್ರಹ್ಮಚಾರಿಣಿಯರಿಗೆ ಸಂನ್ಯಾಸ ದೀಕ್ಷೆ ಹಾಗೂ ಮೂವರು ಯುವತಿಯರಿಗೆ ಬ್ರಹ್ಮಚರ್ಯ ದೀಕ್ಷೆ ನೀಡಿದರು.

## ಕಾರ್ಯವ್ಯಾಪ್ತಿಯ ವಿಸ್ತರಣೆ

"ನಮಗೆ ಎರಡು ಸಾವಿರ ಅಲ್ಲ, ಹತ್ತು ಸಾವಿರ ಅಲ್ಲ, ಇಪ್ಪತ್ತು ಸಾವಿರ ಸಂನ್ಯಾಸಿಗಳು ಬೇಕು. ಸ್ತ್ರೀಯರು ಮತ್ತು ಪುರುಷರು ಇರಬೇಕು... ಯಾರು ಇಚ್ಛಿಸುತ್ತಾರೋ ಅವರೆಲ್ಲರನ್ನೂ ಲಿಂಗಭೇದವಿಲ್ಲದೆ ಸಂನ್ಯಾಸಾಶ್ರಮಕ್ಕೆ ಸೇರಿಸಿ. ಆಗ ನಾನು ನಿಮ್ಮೊಡನೆ ಇರುವೆ..." (*ಕೃತಿಶ್ರೇಣಿ, ಸಂ: ೪, ಪು. ೨೨೨*) ಎಂದು ಸ್ವಾಮೀಜಿ ಒಂದು ಕಡೆ ಹೇಳುತ್ತಾರೆ.

"ಅನೇಕ ಕಡೆ ಕೇಂದ್ರವನ್ನು ಸ್ಥಾಪಿಸುತ್ತಾ ಹೋಗಿ ..." (*ಕೃತಿಶ್ರೇಣಿ*, ಸಂ: ೪, ಪು. ೨೨೨) ಎಂಬ ಸ್ವಾಮೀಜಿಯ ಕರೆಯೂ ನನಸಾಗುತ್ತಾ ಬಂದಿದೆ.

ಕ್ರಿ.ಶ. ೧೯೬೦ರ ಮೇ ತಿಂಗಳಿನಲ್ಲಿ ಶ್ರೀಶಾರದಾಮಠದ ಟ್ರಸ್ಟಿಗಳು ಸಾರ್ವಜನಿಕರ ಹಿತಕ್ಕಾಗಿ **'ರಾಮಕೃಷ್ಣ ಶಾರದಾ ಮಿಷನ್ ಅಸೋಸಿಯೇಷನ್'** ಪ್ರಾರಂಭಿಸಿದರು. ಇದು ನಡೆಸುತ್ತಿರುವ ಕಾರ್ಯಾವಳಿಗಳನ್ನು ಮುಖ್ಯವಾಗಿ ಐದು ವಿಭಾಗಗಳಾಗಿ ವಿಂಗಡಿಸಬಹುದು.

**೧. ಜಾತಿಧರ್ಮಗಳ ಭೇದವಿಲ್ಲದೆ ವಿದ್ಯಾದಾನ.**

**೨. ಚಿಕಿತ್ಸೆ ಮತ್ತು ಶುಶ್ರೂಷೆ.**

**೩. ಬಡವಿದ್ಯಾರ್ಥಿಗಳಿಗೆ ಮತ್ತು ಮಹಿಳೆಯರಿಗೆ ಆರ್ಥಿಕ ಸಹಾಯ.**

**೪. ಗ್ರಾಮೀಣಾಭಿವೃದ್ಧಿ ಕಾರ್ಯ.**

**೫. ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಭಾವಪ್ರಚಾರ.**

**ರಾಮಕೃಷ್ಣ ಶಾರದಾ ಮಿಷನ್ ವಿವೇಕಾನಂದ ವಿದ್ಯಾಭವನ್:** ಪ್ರಥಮ ದರ್ಜೆ ಪದವಿ ಕಾಲೇಜುಳ್ಳ ಇದು ರಾಮಕೃಷ್ಣ ಶಾರದಾ ಮಿಷನ್ನಿನ ಮೊದಲ ಶಾಖೆ. ಇಲ್ಲಿ ವಿದ್ಯಾರ್ಥಿನಿಯರಿಗೆ ವಸತಿ ಸೌಕರ್ಯವೂ ಇದೆ. ಉತ್ತಮ ಫಲಿತಾಂಶವನ್ನು ಪಡೆಯುವ ಈ ಕಾಲೇಜು ಕೊಲ್ಕತಾದಲ್ಲೇ ಒಂದು ಗೌರವ ಸ್ಥಾನ ಪಡೆದಿದೆ. ಕಾಲೇಜಿನ ಪಾಠಗಳೊಂದಿಗೆ ವಿದ್ಯಾರ್ಥಿನಿಯರಿಗೆ ಹಿಂದೂ ಧರ್ಮ ಹಾಗೂ ಸಂಸ್ಕೃತಿಯ ಬಗ್ಗೆ ಬೋಧನಾ ಶಿಬಿರವನ್ನು ಮತ್ತು ಸುತ್ತಮುತ್ತಲಿನ ಬಡಮಕ್ಕಳಿಗೆ ಕೋಚಿಂಗ್ ತರಗತಿಗಳನ್ನು ಈ ಕೇಂದ್ರವು ನಡೆಸುತ್ತಿದೆ.

**ರಾಮಕೃಷ್ಣ ಶಾರದಾ ಮಿಷನ್ ಶಿಕ್ಷಾಮಂದಿರ:** ಕ್ರಿ.ಶ. ೧೯೬೨ರಲ್ಲಿ ದ್ವಿತೀಯ ಶಾಖೆಯನ್ನು ಆಲಂಬಜಾರಿನ ಹತ್ತಿರವಿರುವ ಬಾರೂಯೀಪಾಡಾ ಎಂಬ ಹಳ್ಳಿಯಲ್ಲಿ ಪ್ರಾರಂಭಿಸಲಾಯಿತು. 'ಮಾತೃ ತರಬೇತಿ ಕೇಂದ್ರ' (Mother Training Centre) ಹಾಗೂ 'ಕಿರಿಯ ಪ್ರಾಥಮಿಕ ಶಾಲೆ'ಗಳು ಇಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಇಲ್ಲಿ ಸ್ಥಳೀಯ ಮಕ್ಕಳಿಗೆ ಉಚಿತ ಪಠ್ಯಪುಸ್ತಕ, ಸಮವಸ್ತ್ರ ಹಾಗೂ ಉಪಾಹಾರಗಳನ್ನು ಕೊಡಲಾಗುತ್ತಿದೆ.

ಕಾಲಕ್ರಮೇಣ ಕೊಲ್ಕತಾದ ರಾಮಕೃಷ್ಣ ಮಿಷನ್ನಿನ ಆಡಳಿತದಲ್ಲಿದ್ದ ಮೂರು ಸಂಸ್ಥೆಗಳನ್ನು 'ರಾಮಕೃಷ್ಣ ಶಾರದಾ ಮಿಷನ್'ಗೆ ವರ್ಗಾಯಿಸಲಾಯಿತು. ಅವು ಹೀಗಿವೆ:

**ಎಂಟಲಿ ಆಶ್ರಮ:** ಕ್ರಿ.ಶ. ೧೯೬೧ರ ಮಾರ್ಚ್ ತಿಂಗಳಲ್ಲಿ ಎಂಟಲಿ ಆಶ್ರಮವನ್ನು 'ರಾಮಕೃಷ್ಣ ಶಾರದಾ ಮಿಷನ್'ಗೆ ವರ್ಗಾಯಿಸಲಾಯಿತು. ಇಲ್ಲಿ ಆಧ್ಯಾತ್ಮಿಕತೆ ಹಾಗೂ ಭಾರತೀಯ ಸಂಸ್ಕೃತಿಯ ಬಗ್ಗೆ ಸಾಪ್ತಾಹಿಕ ಪ್ರವಚನ, ವಿದ್ಯಾರ್ಥಿನಿಯರಿಗೆ ಪಠ್ಯಪುಸ್ತಕಗಳ ಗ್ರಂಥಾಲಯ, ಬಡವಿದ್ಯಾರ್ಥಿನಿಯರಿಗೆ ಕೋಚಿಂಗ್ ಕ್ಲಾಸ್, ಯೋಗಾಸನ, ಇಂಗ್ಲಿಷ್ ಸಂಭಾಷಣೆ ತರಗತಿ ಹಾಗೂ ಚಿಕಿತ್ಸಾಲಯವನ್ನು ನಡೆಸಲಾಗುತ್ತಿದೆ.



**ಮಾತೃಭವನ:** ಅದೇ ವರ್ಷ ನವೆಂಬರ್ ತಿಂಗಳಲ್ಲಿ, 'ರಾಮಕೃಷ್ಣ ಮಿಷನ್ ಮಾತೃಭವನ್' ಅನ್ನು 'ರಾಮಕೃಷ್ಣ ಶಾರದಾ ಮಿಷನ್'ಗೆ ವರ್ಗಾಯಿಸಲಾಯಿತು. ಹೆಸರಾಂತ ಹೆರಿಗೆ ಆಸ್ಪತ್ರೆ, ಆಧುನಿಕ ಉಪಕರಣಗಳಿಂದ ಸುಸಜ್ಜಿತವಾದ ಶಸ್ತ್ರಚಿಕಿತ್ಸಾಲಯ, ಹೊರರೋಗಿಗಳ ವಿಭಾಗ ಮತ್ತು ವಿಶೇಷವಾಗಿ ಶಿಶು ಚಿಕಿತ್ಸಾ ಕೇಂದ್ರಗಳು ಇಲ್ಲಿನ ವೈಶಿಷ್ಟ್ಯಗಳು.

**ನಿವೇದಿತಾ ಶಾಲೆ:** ಕ್ರಿ.ಶ. ೧೯೬೩ರ ಆಗಸ್ಟ್ ತಿಂಗಳಲ್ಲಿ 'ನಿವೇದಿತಾ ವಿದ್ಯಾಲಯ'ವನ್ನು 'ರಾಮಕೃಷ್ಣ ಶಾರದಾ ಮಿಷನ್'ಗೆ ವರ್ಗಾಯಿಸಲಾಯಿತು. ಇತಿಹಾಸದಲ್ಲಿಯೇ ಶ್ರೀರಾಮ ಕೃಷ್ಣ ಭಾವಧಾರೆಯಿಂದ ಆರಂಭವಾದ ಮೊಟ್ಟಮೊದಲ ಶಾಲೆ ಇದು. ಭಗಿನಿ ನಿವೇದಿತಾ ಮನೆಮನೆಗೆ ಹೋಗಿ, ತಂದೆತಾಯಿಯರ ಬಳಿ ಯಾಚಿಸಿ ಬಾಲವಿಧವೆಯರನ್ನು, ವಿವಾಹಿತ ಮಹಿಳೆಯರನ್ನು ತಮ್ಮ ಶಾಲೆಗೆ ಬರುವಂತೆ ಮಾಡು ತ್ತಿದ್ದರು. ಆಧುನಿಕ ವಿಷಯಗಳೊಂದಿಗೆ ಭಾರತದ ಭವ್ಯ ಪರಂಪರೆಯನ್ನೂ ವಿದ್ಯಾರ್ಥಿನಿಯರಿಗೆ ಹೇಳಿಕೊಡುವುದು ಈ ಶಾಲೆಯ ವೈಶಿಷ್ಟ್ಯ. ಇಲ್ಲಿ ಮಹಿಳೆಯರಿಗಾಗಿ ಹೊಲಿಗೆಯ 'ಲೇಡಿ ಬ್ರೆಬೋರ್ನ್ ಡಿಪ್ಲೊಮಾ' ತರಗತಿಗಳನ್ನು ಮತ್ತು ಸುತ್ತಮುತ್ತಲಿನ ಬಡಮಕ್ಕಳಿಗಾಗಿ ಉಚಿತ ಕೋಚಿಂಗ್ ಕ್ಲಾಸ್ ಗಳನ್ನು ನಡೆಸಲಾಗುತ್ತಿದೆ. ಇಲ್ಲಿನ ಪ್ರಕಾಶನ ವಿಭಾಗದಲ್ಲಿ, ಇತರ ಪುಸ್ತಕಗಳೊಂದಿಗೆ ಮುಖ್ಯವಾಗಿ ಭಗಿನಿ ನಿವೇದಿತಾಗೆ ಸಂಬಂಧಪಟ್ಟ ಪುಸ್ತಕಗಳು ಪ್ರಕಟವಾಗುತ್ತಿವೆ.



**ತ್ರಿಚೂರಿನ ಶಾರದಾಮಂದಿರ:** ಕ್ರಿ.ಶ. ೧೯೬೮ರ ಜೂನ್ ತಿಂಗಳಲ್ಲಿ ಕೇರಳದ ತ್ರಿಚೂರಿನಲ್ಲಿದ್ದ ಶಾರದಾಮಂದಿರವನ್ನು ರಾಮಕೃಷ್ಣ ಮಿಷನ್ನಿನವರು ಶ್ರೀಶಾರದಾಮಠಕ್ಕೆ ಒಪ್ಪಿಸಿದರು. ಇಲ್ಲಿಯೂ ಹೆಣ್ಣುಮಕ್ಕಳಿಗಾಗಿ ವಸತಿಸಹಿತ ಶಾಲೆಯನ್ನು ನಡೆಸ ಲಾಗುತ್ತಿದೆ.

"ಭಾರತದ ಸ್ತ್ರೀಯರು ಆಧ್ಯಾತ್ಮಿಕತೆಯನ್ನು ಬಲಿಗೊಡದೆ ಆಧುನಿಕ ವಿಜ್ಞಾನವನ್ನು ಕಲಿಯಬೇಕು" (*'ನಾ ಕಂಡಂತೆ ನನ್ನ ಗುರುದೇವ'* – ಸಿಸ್ಟರ್ ನಿವೇದಿತಾ) ಎಂಬ ಸ್ವಾಮೀಜಿಯ ನುಡಿಯನ್ನು ಪಾಲಿಸುತ್ತಾ ರಾಮಕೃಷ್ಣ ಶಾರದಾ ಮಿಷನ್, ಹತ್ತು ವರುಷಗಳ ಅವಧಿಯಲ್ಲಿ ಹತ್ತಾರು ಶಾಖೆಗಳಾಗಿ ಕವಲೊಡೆದು ನಿಂತಿರುವುದನ್ನು ನಾವು ಕಾಣುತ್ತೇವೆ. ನಿಸ್ವಾರ್ಥಸೇವೆಯೇ ಅಡಿಗಲ್ಲಾದ ಈ ಪುಣ್ಯಸಂಸ್ಥೆಯು ಮುಂದಿನ ವರ್ಷಗಳಲ್ಲಿ ಮತ್ತೂ ವಿಸ್ತಾರಗೊಳ್ಳುತ್ತಲೇ ಹೋಯಿತು.

**ರಾಮಕೃಷ್ಣ ಶಾರದಾ ಮಿಷನ್, ಅರುಣಾಚಲಪ್ರದೇಶ:** ರಾಮ ಕೃಷ್ಣ ಶಾರದಾ ಮಿಷನ್, ೧೯೭೩ರಲ್ಲಿ ರಾಜ್ಯಸರ್ಕಾರದ ಮನವಿಯ ಮೇರೆಗೆ, ಅರುಣಾಚಲ ಪ್ರದೇಶದ ಗುಡ್ಡಗಾಡು ಪ್ರದೇಶದ ಖೋನ್ಸಾ ಎಂಬ ಚಿಕ್ಕ ಹಳ್ಳಿಯಲ್ಲಿ, ಅಲ್ಲಿನ ಬುಡ ಕಟ್ಟಿನ ಜನಾಂಗದ ಹೆಣ್ಣುಮಕ್ಕಳಿಗಾಗಿ ಸಂಪೂರ್ಣವಾಗಿ ವಸತಿ ವ್ಯವಸ್ಥೆಯುಳ್ಳ ಶಾಲೆಯೊಂದನ್ನು ಪ್ರಾರಂಭಿಸಿತು. ನವೀನ ಸೌಲಭ್ಯಗಳಿಂದ ಕೂಡಿರುವ ಈ ಶಾಲೆಯಲ್ಲಿ ೧೨ನೇ ವರ್ಗ ದವರೆಗೆ ತರಗತಿಗಳಿವೆ. ವಿವಿಧ ಸೇವಾ ಕಾರ್ಯಗಳು ಮತ್ತು ಪ್ರಕೃತಿ ವಿಕೋಪಕ್ಕೊಳಗಾದ ಸ್ಥಳಗಳಲ್ಲಿ ಪರಿಹಾರ ಕಾರ್ಯ ಗಳನ್ನು ಈ ಕೇಂದ್ರವು ನಡೆಸುತ್ತಿದೆ.

**ರಾಮಕೃಷ್ಣ ಶಾರದಾ ಮಿಷನ್ ವಿದ್ಯಾರ್ಥಿನಿ ಮಂದಿರಮ್:** ಕ್ರಿ.ಶ. ೧೯೭೫ರಲ್ಲಿ ಕೇರಳದ ತಿರುವನಂತಪುರದಲ್ಲಿ ಈ ಶಾಖಾಕೇಂದ್ರ ಪ್ರಾರಂಭವಾಯಿತು. ಇಲ್ಲಿ ಶಾಲಾ ಹಾಗೂ ಕಾಲೇಜು ವಿದ್ಯಾರ್ಥಿನಿಯರಿಗೆ ಹಾಸ್ಟೆಲ್‌ಗಳನ್ನು ನಡೆಸಲಾಗುತ್ತಿದೆ.

**ನವದೆಹಲಿಯ 'ರಾಮಕೃಷ್ಣ ಶಾರದಾ ಮಿಷನ್'** ಆಂಗ್ಲ ಮಾಧ್ಯಮದ ಪ್ರಾಥಮಿಕ ಶಾಲೆ ಹಾಗೂ ಬಡಮಕ್ಕಳಿಗೆ ಉಚಿತವಾಗಿ ಕೋಚಿಂಗ್ ಕ್ಲಾಸ್ ನಡೆಸುತ್ತಿದೆ. ಶ್ರೀಶಾರದಾ ಮಠದ ಷಣ್ಮಾಸಿಕ ಪತ್ರಿಕೆಯಾದ 'ಸಂವಿತ್' ಈ ಕೇಂದ್ರದಿಂದಲೇ ಪ್ರಕಟವಾಗುತ್ತಿದೆ.

ಕ್ರಿ.ಶ. ೧೯೮೦ರಲ್ಲಿ ಬಂಗಾಳದ ಪೂರ್ವ **ಮೇದನಿಪುರ ಜಿಲ್ಲೆಯ ಠಾಕೂರ್‌ನಗರದಲ್ಲಿ 'ರಾಮ ಕೃಷ್ಣ ಶಾರದಾ ಮಿಷನ್'** ಅಂಕುರಿಸಿತು. ಇಲ್ಲಿ ಹಳ್ಳಿಯ ಮಹಿಳೆಯರ ಸ್ವಾವಲಂಬನೆಗಾಗಿ ವೃತ್ತಿ ಶಿಕ್ಷಣಗಳಾದ ನೇಯ್ಗೆ ಹಾಗೂ ಹೊಲಿಗೆಯ ತರಬೇತಿ ಕೊಡಲಾಗುತ್ತಿದೆ. ದೂರದ ಗ್ರಾಮಗಳಲ್ಲಿ ನೆಲೆಸಿರುವ ಮಹಿಳೆಯರಿಗೆ ವಸತಿಯ ಸೌಕರ್ಯದ ಏರ್ಪಾಟೂ ಇದೆ.

ಕ್ರಿ.ಶ. ೧೯೮೭ರಲ್ಲಿ **ಬಂಗಾಳದ ವರ್ಧಮಾನ ಜಿಲ್ಲೆಯಲ್ಲಿ 'ರಾಮಕೃಷ್ಣ ಶಾರದಾ ಮಿಷನ್'** ಉದಯಿಸಿತು. ಗ್ರಾಮೀಣ ಮಹಿಳೆಯರ ಹಾಗೂ ಮಕ್ಕಳ ಅಭಿವೃದ್ಧಿಯೇ ಈ ಕೇಂದ್ರದ ಮುಖ್ಯ ಉದ್ದೇಶ. ಈ ಕೇಂದ್ರದ ವೈಶಿಷ್ಟ್ಯವೆಂದರೆ ಹಿಂದೂ ಹಾಗೂ ಮುಸಲ್ಮಾನ ವಿದ್ಯಾರ್ಥಿಗಳು ಐಕ್ಯಭಾವದಿಂದ ಒಟ್ಟಿಗೇ ವ್ಯಾಸಂಗ ಮಾಡುತ್ತಿರುವುದು.



ಕ್ರಿ.ಶ. ೧೯೬೮ ರಲ್ಲಿ ಕೊಲ್ಕತಾದ ಸಿರಿಟಿ ಎಂಬ ಪ್ರದೇಶದಲ್ಲಿ 'ರಾಮಕೃಷ್ಣ ಶಾರದಾ ಮಿಷನ್' ಸ್ಥಾಪಿತವಾಯಿತು. ಈ ಕೇಂದ್ರವು ಮಕ್ಕಳಿಗೆ ಉಚಿತ ಪ್ರಾಥಮಿಕ ಶಾಲೆ ಹಾಗೂ ಎಂಟನೇ ತರಗತಿಯವರೆಗಿನ ಮಕ್ಕಳಿಗೆ ಕೋಚಿಂಗ್ ಕ್ಲಾಸ್‌ಗಳನ್ನು ನಡೆಸುತ್ತಿದೆ. ಉಚಿತ ಹೋಮಿಯೋಪಥಿ ಚಿಕಿತ್ಸಾಲಯವೂ ಇದೆ. ಸುತ್ತಮುತ್ತಲಿನ ಬಡಜನರಿಗೆ ಔಷಧಿ ಹಾಗೂ ಆರ್ಥಿಕ ಸಹಾಯ ನೀಡಲಾಗುತ್ತಿದೆ.

ಕ್ರಿ.ಶ. ೧೯೭೦ರಲ್ಲಿ ಬಂಗಾಳದ ದಕ್ಷಿಣ ೨೪ ಪರಗಣ ಜಿಲ್ಲೆಯ ಗಂಗಾರಾಮ್‌ಪುರ್‌ನಲ್ಲಿ 'ರಾಮಕೃಷ್ಣ ಶಾರದಾ ಮಿಷನ್' ಪ್ರಾರಂಭವಾಯಿತು. ಬಡಮಕ್ಕಳಿಗಾಗಿ ಒಂದು ಪ್ರಾಥಮಿಕ ಶಾಲೆ ಮತ್ತು ಉಚಿತ ಚಿಕಿತ್ಸಾಲಯವನ್ನು ಇದು ಹೊಂದಿದೆ. ಹಾಗೂ ಆಗಾಗ್ಗೆ ಔಷಧಿ, ಬಟ್ಟೆ, ಬರೆ, ಆಹಾರ ಪದಾರ್ಥಗಳನ್ನು ಉಚಿತವಾಗಿ ಕೊಡಲಾಗುತ್ತಿದೆ. ಯುವತಿಯರಿಗೆ ಶಿಕ್ಷಣ ಹಾಗೂ ಬಡ ಮಹಿಳೆಯರಿಗೆ ಧನಸಹಾಯವನ್ನೂ ಈ ಕೇಂದ್ರ ನೀಡುತ್ತಿದೆ.

ಇದಲ್ಲದೆ ಪನ್‌ಗಾಟ್, ನೈನಿತಾಲ್, ಇಂದೋರ್ ಹಾಗೂ ಆಂಧ್ರಪ್ರದೇಶಗಳಲ್ಲಿ ಇರುವ ಶಾಖೆಗಳು ಅತ್ಯುತ್ತಮ ಸೇವೆ ಸಲ್ಲಿಸುತ್ತಿವೆ. ಭಾರತದಲ್ಲಷ್ಟೇ ಅಲ್ಲದೆ ಹೊರದೇಶದಲ್ಲೂ ಭಾವಪ್ರಚಾರ ಕಾರ್ಯ ಭರದಿಂದ ಸಾಗುತ್ತಿದೆ. ಆಸ್ಟ್ರೇಲಿಯಾದ ಸಿಡ್ನಿಯಲ್ಲಿ 'ರಾಮಕೃಷ್ಣ ಶಾರದಾ ವೇದಾಂತ ಸೊಸೈಟಿ' ಯು ಅಲ್ಲಿನ ಜನರ ಆಧ್ಯಾತ್ಮಿಕ ಹಸಿವನ್ನು ತಣಿಸುತ್ತಿದೆ. ಶ್ರೀಲಂಕಾದ, ಕೊಲೊಂಬೊದಲ್ಲಿನ 'ರಾಮಕೃಷ್ಣ ಶಾರದಾ ಮಿಷನ್' ವೃದ್ಧ ಮಹಿಳೆಯರಿಗಾಗಿ 'ಮಾತೃ ಮಂದಿರ', ಮಕ್ಕಳಿಗಾಗಿ 'ಶ್ರೀಶಾರದಾ ಮಂದಿರ' ಹಾಗೂ ಒಂದು ಅನಾಥಾಶ್ರಮ



ವನ್ನೂ ನಡೆಸುತ್ತಿದೆ. ಐದಾರು ದಶಕಗಳಲ್ಲಿ ೧೬ ಮಿಷನ್ ಕೇಂದ್ರಗಳು ಮತ್ತು ೧೩ ಮಠಗಳು ದೇಶದಾದ್ಯಂತ ಹಬ್ಬಿವೆ.

"ಕೇವಲ ಕರ್ಮದಿಂದ ಮಾತ್ರ ಕರ್ಮ ಬಂಧನವನ್ನು ಕಿತ್ತೊಗೆಯಬಹುದು" ಎಂಬ ಶ್ರೀಶಾರದಾದೇವಿಯರ ನುಡಿ ಎಷ್ಟು ಅರ್ಥ ಗರ್ಭಿತವಲ್ಲವೇ?

"ಏಳಿ ಜಾಗ್ರತರಾಗಿ. ಆಧ್ಯಾತ್ಮಿಕ ಮಹಾ ತರಂಗ ಒಂದು ಬರುತ್ತಿದೆ. ಮುಂದೆ ನಡೆಯಿರಿ. ಸ್ತ್ರೀಯರು ಪುರುಷರು ಚಂಡಾಲನ ತನಕ ಎಲ್ಲರೂ ಮುಂದೆ ಸಾಗಿ...ಮುಂದೆ! ಮುಂದೆ! ನುಗ್ಗಿ ನಡೆಯಿರಿ. ಮುಂದೆ!... ಆ ಮಹಾಪುರುಷರು ಬರುತ್ತಿರುವರು. ಯಾರು ಅವರಿಗೆ ಸೇವೆ ಸಲ್ಲಿಸಲು ಸಿದ್ಧರಾಗಿರುವರು? ಅವರನ್ನಲ್ಲ, ಅವರ ಮಕ್ಕಳನ್ನು. ದೀನರು, ಪದದಳಿತರು, ಪಾಪಿಗಳು, ದುಃಖಿಗಳು, ಕ್ರಿಮಿಕೀಟದವರೆವಿಗೆ ಎಲ್ಲರಿಗೂ ಸೇವೆ ಸಲ್ಲಿಸುವುದಕ್ಕೆ ಯಾರು ಸಿದ್ಧರಾಗಿರುವರೋ ಅವರ ಹೃದಯದಲ್ಲಿ ಗುರುದೇವನು ಆವಿರ್ಭವಿಸುವನು. ಅವರ ನಾಲಗೆಯ ಮೂಲಕ ಸಕಲ ಕಲಾಧಿದೇವಿ ಶಾರದೆ ಮಾತನಾಡುವಳು. ಜಗನ್ಮಯಿ ಮಹಾಶಕ್ತಿ ಅವರ ಹೃದಯದಲ್ಲಿ ನೆಲೆಸುವಳು.... ಆ ಮಹಾಪುರುಷರ ಶೀಲ, ಅವರ ಪವಿತ್ರ ಜೀವನ, ಅವರ ದಿವ್ಯ ಉಪದೇಶಾಮೃತವನ್ನು ಅವಿಶ್ರಾಂತರಾಗಿ ಪ್ರಚಾರ ಮಾಡುವುದಕ್ಕೆ ಮಾತ್ರ ಈ ಒಂದು ಜನ್ಮವನ್ನು ಮೀಸಲಾಗಿಡೋಣ..." (*ಕೃತಿಶ್ರೇಣಿ*, ಸಂ. ೪, ಪು. ೨೨೩).

ಸ್ವಾಮೀಜಿಯ ಈ ಕರೆಗೆ ನಾವೆಲ್ಲರೂ ಓಗೊಡೋಣವೇ? ಬನ್ನಿ, ಬನ್ನಿ!!






# ರಾಮಕೃಷ್ಣ ಮಹಾಸಂಘದ ಗ್ರಾಮೋದ್ಧಾರ ಕಾರ್ಯಕ್ರಮಗಳು

ರಾಜೇಶ್ವರಿ ಕೃಷ್ಣ

"ಎಲ್ಲಿಯವರೆಗೆ ಜನಗಳಿಗೆ ತಮಗೆ ತಾವೇ ಸಹಾಯ ಮಾಡಿಕೊಳ್ಳುವದನ್ನು ನಾವು ಕಲಿಸುವುದಿಲ್ಲವೋ, ಅಲ್ಲಿಯವರೆಗೆ ಇಡೀ ಪ್ರಪಂಚದ ಸಂಪತ್ತನ್ನೆಲ್ಲ ತಂದು ಸುರಿದರೂ, ಭಾರತದ ಒಂದು ಹಳ್ಳಿಯನ್ನೂ ಸಹ ನಾವು ಉದ್ಧಾರ ಮಾಡಲು ಸಾಧ್ಯವಿಲ್ಲ."

– ಸ್ವಾಮಿ ವಿವೇಕಾನಂದ



ಈ ದೇಶವು ಜೀವಿಸುತ್ತಿರುವುದು ಹಳ್ಳಿಗಳಲ್ಲಿ ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ಗ್ರಾಮಗಳ ಉದ್ಧಾರವಾಗುವುದು ಕೇವಲ ಸ್ವಾವಲಂಬನೆಯಿಂದ ಎನ್ನುವುದು ಅವರ ನಿಲುವು. ಇದನ್ನೇ ಮಾರ್ಗದರ್ಶಿ ಸೂತ್ರವನ್ನಾಗಿಸಿಕೊಂಡು, ರಾಮಕೃಷ್ಣ ಮಹಾಸಂಘವು ದೇಶದ ಹಲವಾರು ಕಡೆಗಳಲ್ಲಿ ಬಹಳ ಸ್ತುತ್ಯವಾದ ಗ್ರಾಮೋದ್ಧಾರ ಯೋಜನೆಗಳನ್ನು ಹಮ್ಮಿಕೊಂಡಿದೆ. ಈ ಕಾರ್ಯಗಳ ಪಕ್ಷಿನೋಟವನ್ನು ಮಾಡಿಕೊಟ್ಟಿರುವ ಲೇಖಕಿ ಬೆಂಗಳೂರಿನ ನಿವಾಸಿ. ಇವರ ಕೆಲವು ಲೇಖನಗಳು ಈಗಾಗಲೇ ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.



ದೇವಘಡ ಇಂದಿನ ಜಾರ್‌ಖಂಡ್ ರಾಜ್ಯದ ಈಶಾನ್ಯ ಭಾಗದಲ್ಲಿರುವ ಒಂದು ಜಿಲ್ಲೆ. ಇದು ಹಿಂದೆ ಬಿಹಾರ್ ರಾಜ್ಯಕ್ಕೆ ಸೇರಿತ್ತು. ಇಲ್ಲಿನ ಭೂಪ್ರದೇಶ ಸುಂದರವಾಗಿದ್ದು, ಪುಟ್ಟ ಬೆಟ್ಟಗಳು ಹಾಗೂ ನೀರಿನ ಝರಿಗಳಿಂದ ಆವೃತವಾಗಿದೆ. ದ್ವಾದಶ ಜ್ಯೋತಿರ್ಲಿಂಗಗಳ ಪೈಕಿ ಒಂದು ಎಂದು ಪ್ರಸಿದ್ಧಿ ಪಡೆದ ವೈದ್ಯನಾಥ ದೇವಾಲಯವೂ ಇಲ್ಲೇ ಇದೆ. ಇದು ಕೊಲ್ಕತಾದಿಂದ ಕಾಶಿಕ್ಷೇತ್ರಕ್ಕೆ ಹೋಗುವ ಮಾರ್ಗದಲ್ಲಿದೆ.

ಒಮ್ಮೆ ಶ್ರೀರಾಮಕೃಷ್ಣ ಪರಮಹಂಸರು ಕಾಶಿ, ವೃಂದಾವನ ಮತ್ತಿತರ ಪವಿತ್ರ ಸ್ಥಳಗಳಿಗೆ ಯಾತ್ರೆ ಕೈಗೊಂಡಿದ್ದರು. ದೇಶಸಂಚಾರ – ತೀರ್ಥಯಾತ್ರೆ ಪರಿವ್ರಾಜಕ ಮನೋಭಾವದವರಿಗೆ ಸಹಜವಾಗಿದೆ. ಮಾರ್ಗಮಧ್ಯದಲ್ಲಿ ಅವರು ವೈದ್ಯನಾಥ ಕ್ಷೇತ್ರದ ಒಂದು ಹಳ್ಳಿಯ ಮೂಲಕ ಹಾದುಹೋಗಬೇಕಾಯಿತು. ಆ ಗ್ರಾಮಸ್ಥರ ಬಡತನ, ಕಷ್ಟ-ಕಾರ್ಪಣ್ಯಗಳನ್ನು ಕಣ್ಣಾರೆ ಕಂಡು ಅವರ ಹೃದಯ ತುಂಬಿಬಂತು; ತಡೆಯಲಾರದಷ್ಟು ದುಃಖವಾಯಿತು. ಕೂಡಲೇ ತಮ್ಮ ಜೊತೆಯಲ್ಲಿದ್ದ ಮಥುರಾನಾಥ ವಿಶ್ವಾಸನಿಗೆ ಅವರು ಹೇಳಿದರು: "ಮಥುರ, ನೀನು ಜಗನ್ಮಾತೆಯ ಸ್ಥಿರ ಆಸ್ತಿಯ ನಿರ್ವಾಹಕನಾಗಿದ್ದೀಯೆ. ದಯವಿಟ್ಟು ಈ ಜನರಿಗೆ ಕೊಡಲು ಒಂದಷ್ಟು ಬಟ್ಟೆ, ಒಮ್ಮೆ ಹೊಟ್ಟೆ ತುಂಬ ತೃಪ್ತಿಯಾಗುವಷ್ಟು ಊಟದ ವ್ಯವಸ್ಥೆ ಮಾಡು."

ಮೊದಲು ಮಥುರಬಾಬು ಇದಕ್ಕೆ ಸ್ವಲ್ಪ ಹಿಂಜರಿದನು: "ಬಾಬಾ, ಇನ್ನೂ ಮುಂದಿನ ಯಾತ್ರೆಗೆ ಸಾಕಷ್ಟು ಹಣ ಬೇಕಾಗುತ್ತದೆ. ಇಲ್ಲಿ ಬಡವರು ತುಂಬ ಇದ್ದಾರೆ. ನೀವು ಹೇಳಿದ್ದನ್ನೆಲ್ಲ ಮಾಡುತ್ತ ಹೋದರೆ ನಮಗೆ ಆಮೇಲೆ ಹಣದ ಕೊರತೆ ಬರಬಹುದು. ಹೀಗಿರುವಾಗ, ನೀವು ಏನು ಮಾಡಬೇಕೆಂದು ಹೇಳುತ್ತೀರಿ?"



ಪರಮೋತ್ಕೃಷ್ಟ ಸ್ತರ ಎಂದು ಸಾರಿ ಸಾರಿ ಹೇಳಿದರು. ತಮ್ಮ ಬದುಕಿನಲ್ಲಿ ಈ ಅನುಷ್ಠಾನ ಧರ್ಮವನ್ನು ಆಚರಿಸಿ ತೋರಿಸಿದರು.

ರಾಮಕೃಷ್ಣ ಮಹಾಸಂಘ ತನ್ನ ಸೇವಾ ಕಾರ್ಯಗಳನ್ನು ವ್ಯವಸ್ಥಿತವಾಗಿ ಪ್ರಾರಂಭಿಸಿದ್ದು, ವಿಸ್ತರಿಸಿದ್ದು ಈಗ ಇತಿಹಾಸದ ಒಂದು ಪ್ರಮುಖ ಭಾಗವಾಗಿದೆ. ಇಂದಿಗೂ ಶಿಕ್ಷಣ, ಆರೋಗ್ಯ, ಗ್ರಾಮೀಣ ಹಾಗೂ ಗುಡ್ಡಗಾಡು ಜನರ ಉದ್ಧಾರ, ಅಧ್ಯಾತ್ಮ ವರ್ಧನೆ ಹಾಗೂ ಸನಾತನ ಮೌಲ್ಯಗಳು ಮತ್ತು ಸಂಸ್ಕೃತಿಯ ಪ್ರಸಾರದ ಕ್ಷೇತ್ರಗಳಲ್ಲಿ ಈ ಸಂಸ್ಥೆ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದೆ. ಈ ನಿಟ್ಟಿನಲ್ಲಿ ಅಭಿವೃದ್ಧಿಶೀಲ ಪಾಶ್ಚಾತ್ಯ ರಾಷ್ಟ್ರಗಳಿಗೆ ಭೇಟಿ ನೀಡಿದ್ದ ಸ್ವಾಮಿ ವಿವೇಕಾನಂದರು ತಮ್ಮ ಸಮಗ್ರ ಅನುಭವದ ಹಿನ್ನೆಲೆಯಲ್ಲಿ ಕೆಲವು ವಿನೂತನ ಕಾರ್ಯ ಸಾಧನೆಯ ಸೂತ್ರಗಳನ್ನು (Principles of action) ರೂಪಿಸಿದ್ದರು. ಈ ಪರಿಕಲ್ಪನೆಯ ಮುಖ್ಯ ಅಂಶಗಳು ಹೀಗಿವೆ (ರಾಮಕೃಷ್ಣ ಮಿಷನ್ನಿನ ವೆಬ್‌ಸೈಟ್‌ನಲ್ಲಿ ವಿವರಗಳು ಲಭ್ಯ):

**೧. ಭಗವಂತನ ಶ್ರೇಷ್ಠ ಅಭಿವ್ಯಕ್ತಿ ಇರುವುದು ಮಾನವಾತ್ಮದಲ್ಲಿ. ಹೀಗಾಗಿ ದಾನ-ಧರ್ಮದ ಸಂಕುಚಿತ ಅರ್ಥವನ್ನು ಮೀರಿ ಮಾನವರೆಲ್ಲರೂ ಭಗವಂತನ ಸಾಕಾರಮೂರ್ತಿಗಳೆಂದು ಸೇವೆ ಮಾಡುವುದು ಉತ್ತಮ.**

**೨. ಇಂಥ ಜನರಿಗೆ ಮುಖ್ಯವಾಗಿ ಶಿಕ್ಷಣ ಒದಗಿಸಿದರೆ ಅವರು ತಮ್ಮ ಉದ್ಧಾರವನ್ನು ತಾವೇ ಸಾಧಿಸಿಕೊಳ್ಳುತ್ತಾರೆ (empowerment).**

**೩. ಈ ಅಭಿವೃದ್ಧಿ ಕಾರ್ಯದಲ್ಲಿ ಮಾನವ ಹಾಗೂ ಪ್ರಕೃತಿಯ ಸಂಪನ್ಮೂಲಗಳ ಸಂಪೂರ್ಣ ಸದ್ಬಳಕೆಯಾಗಬೇಕು. ದೇಶೀಯ ತಂತ್ರಜ್ಞಾನ ಹಾಗೂ ಪಾಶ್ಚಾತ್ಯ ವಿಜ್ಞಾನ – ಇವೆರಡನ್ನೂ ಈ ಪ್ರಗತಿಕಾರ್ಯ ಒಳಗೊಂಡಿರಬೇಕು.**

**೪. ಇಂಥ ಚಟುವಟಿಕೆಗಳು ನಿರಂತರವಾಗಿ ನಡೆಯಬೇಕಾದರೆ ಅವುಗಳನ್ನು ಪೋಷಿಸಿ, ಬೆಂಬಲಿಸುವ ಒಂದು ಸಂಸ್ಥೆಯನ್ನು ಕಟ್ಟಬೇಕು.**

ರಾಮಕೃಷ್ಣ ಮಹಾಸಂಘದ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಲ್ಲೂ ಈ ಮಾರ್ಗಸೂಚಿಯನ್ನು ಅನುಸರಿಸಿರುವುದು ಕಂಡುಬರುತ್ತದೆ.

**ಸ್ವಾತಂತ್ರ್ಯಪೂರ್ವದಲ್ಲಿ:** ರಾಮಕೃಷ್ಣ ಮಹಾಸಂಘವು ಅಧಿಕೃತ, ನೋಂದಾಯಿತ ಸಂಸ್ಥೆಯಾಗಿ ರೂಪುಗೊಳ್ಳುವ ಮೊದಲೇ ತನ್ನ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸುತ್ತಿತ್ತು. ೧೮೯೪ರಷ್ಟು ಹಿಂದೆಯೇ ಶ್ರೀರಾಮಕೃಷ್ಣರ ನೇರ ಶಿಷ್ಯರಾಗಿದ್ದ ಸ್ವಾಮಿ ಅಖಂಡಾನಂದರು ರಾಜಸ್ಥಾನದ ದೂರದ ಹಳ್ಳಿಗಳಲ್ಲಿ ಸಣ್ಣ ರೀತಿಯಲ್ಲಿ ಕೆಲಸ ಪ್ರಾರಂಭಿಸಿದ್ದರು. ಸ್ವಾಮಿ ವಿವೇಕಾನಂದರ ಸೇವಾದರ್ಶಕ್ಕಾಗಿ ತಮ್ಮ ಜೀವನವನ್ನೇ

ಶ್ರೀರಾಮಕೃಷ್ಣರ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯಲಾರಂಭಿಸಿತು: "ಏ ಅಯೋಗ್ಯ! ನಾನು ಕಾಶಿಗೆ ಬರುವುದೇ ಇಲ್ಲ, ಇಲ್ಲೇ ಇವರ ಜೊತೆಯೇ ಇದ್ದುಬಿಡುತ್ತೇನೆ. ಇವರಿಗೆ ತಮ್ಮವರೆಂದು ಯಾರೂ ಇಲ್ಲ... ಹೀಗಾಗಿ ನಾನು ಇವರನ್ನು ಹಿಂದೆ ಬಿಟ್ಟು ಹೋಗಲಾರೆ." ಹೀಗೆ ಹೇಳಿ, ಮೊಂಡು ಮಾಡುವ ಚಿಕ್ಕ ಹುಡುಗನಂತೆ ಅವರು ಆ ನಿರ್ಗತಿಕ ಹಳ್ಳಿಯವರ ಮಧ್ಯೆ ಹೋಗಿ ಕುಳಿತುಬಿಟ್ಟರು. ಗುರುಗಳಲ್ಲಿ ಮೂಡಿದ್ದ ಆ ಅಪಾರ ಅನುಕಂಪವನ್ನು ನೋಡಿ ಮಥುರಬಾಬು, ಕಲ್ಕತ್ತೆಯಿಂದ ಬಟ್ಟೆಯ ಥಾನುಗಳನ್ನು ತರಿಸಿ ಆ ಹಳ್ಳಿಯವರಿಗೆಲ್ಲ ಹಂಚಿದನು. ಅವರೆಲ್ಲ ಸಂತೋಷವನ್ನು ಹೊಂದಿದರು. ಇದನ್ನು ಕಂಡು ಶ್ರೀರಾಮಕೃಷ್ಣರು ಅವರಿಗೆ ವಿದಾಯ ಹೇಳಿ, ಕಾಶಿಯ ಕಡೆಗೆ ತಮ್ಮ ಪ್ರಯಾಣ ಮುಂದುವರೆಸಿದರು.

ಕಾಶಿಕ್ಷೇತ್ರ, ಜಗತ್ಪ್ರಸಿದ್ಧ ವಿಶ್ವನಾಥನ ಪೀಠ; ತಾಯಿ ಅನ್ನಪೂರ್ಣೆಯ ನಿವಾಸಸ್ಥಾನ. ಆದರೆ ಶ್ರೀರಾಮಕೃಷ್ಣರ ದೃಷ್ಟಿಯಲ್ಲಿ, ಜೀವಂತ ಮಾನವರಲ್ಲಿ 'ಕಾಶಿ ವಿಶ್ವನಾಥ'ನನ್ನು ಕಂಡು ಮಾಡುವ ಸೇವೆ ಮತ್ತು ಜಗತ್ತಿನ ಹಿತಸಾಧನೆಗಳು ತೀರ್ಥಯಾತ್ರೆಯಂತಹ ವೈಯಕ್ತಿಕ ಸಾಧನೆಯಷ್ಟೇ ಪ್ರಮುಖವಾಗಿತ್ತು, "ನೀನು ಅಗ್ನಿತತ್ತ್ವವನ್ನು ಕಟ್ಟಿಗೆಯಲ್ಲಿ ಹುಡುಕಬೇಕು. ಹಾಗೆಯೇ ಭಗವಂತನನ್ನು ಮನುಷ್ಯನ ಹೃದಯದಲ್ಲಿ ಕಾಣಬೇಕು" ಎನ್ನುತ್ತಿದ್ದರು ಅವರು. ಈ ಧ್ಯೇಯವೇ **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** (ತನ್ನ ಮೋಕ್ಷ ಮತ್ತು ಜಗತ್ತಿನ ಹಿತಕ್ಕಾಗಿ) ಎಂಬ ಧ್ಯೇಯವಾಕ್ಯವಾಗಿ ರೂಪುತಾಳಿತು. ಶ್ರೀರಾಮಕೃಷ್ಣರ ಪರಮೋಚ್ಚ ಶಿಷ್ಯರಾದ ಸ್ವಾಮಿ ವಿವೇಕಾನಂದರು ಮುಂದೆ ತಮ್ಮ ಗುರುಬಂಧುಗಳನ್ನು ಕೂಡಿಕೊಂಡು, ರಾಮಕೃಷ್ಣ ಮಠವನ್ನು ಸ್ಥಾಪಿಸಿದಾಗ ಈ ದೀಕ್ಷಾಮಂತ್ರವನ್ನು ರೂಪಿಸಿದರು. ಇಂದಿಗೂ ಇದು ರಾಮಕೃಷ್ಣ ಮಿಷನ್ನಿನ ಎಲ್ಲ ಕಾರ್ಯಯೋಜನೆಗಳ, ಚಟುವಟಿಕೆಗಳ ಕೇಂದ್ರಬಿಂದುವಾಗಿದೆ. ಭಾರತದ ಲಕ್ಷಾಂತರ ಸಾಮಾನ್ಯ ಜನರ ಬಡತನ, ಅಜ್ಞಾನ, ನಿಷ್ಕ್ರಿಯತೆಯನ್ನು ಕಂಡು ಸ್ವಾಮಿ ವಿವೇಕಾನಂದರು ಅಪಾರವಾಗಿ ಮರುಗಿದರು. ಇಂಥ ದೀನದಲಿತರ ಕಷ್ಟಗಳಿಗೆ ಸ್ಪಂದಿಸುವುದೇ ಆಧ್ಯಾತ್ಮಿಕತೆಯ

ಮುಡುಪಾಗಿಟ್ಟಿದ್ದ ಇವರು, ಸ್ಥಳೀಯ ಮಹಾರಾಜರಿಂದ ಸ್ವಲ್ಪ ನೆರವು ಪಡೆದು ಒಂದು ಶಾಲೆ ಪ್ರಾರಂಭಿಸಿದರು. ಖೇತ್ರಿ ಹಾಗೂ ಇತರ ಹಳ್ಳಿಗಳಲ್ಲಿ ಮನೆಮನೆಗೆ ಹೋಗಿ ಮಕ್ಕಳನ್ನು ಆ ಶಾಲೆಗೆ ಕಳುಹಿಸಬೇಕೆಂದು ಆಗ್ರಹಿಸಿದರು. ಹಾಗೆಯೇ ಪಶ್ಚಿಮ ಬಂಗಾಳದ ಮುರ್ಷಿದಾಬಾದ್ ಜಿಲ್ಲೆಯ ಮಹುಲಾದಲ್ಲಿ ದೀರ್ಘಾವಧಿಯ ವಿದ್ಯಾಭ್ಯಾಸ ಕಾರ್ಯಕ್ರಮವನ್ನು ಆರಂಭಿಸಿದರು. ಇವರ ಅನೇಕ ಪ್ರಯೋಗಗಳು ಮುಂದಿನ ದಶಕಗಳಲ್ಲಿ ಮಹಾಸಂಘದ ಕಾರ್ಯಕ್ರಮಗಳಿಗೆ ಮಾರ್ಗ ಸೂಚಿಯಾದವು.



೧೯೧೦ರಷ್ಟು ಹಿಂದೆಯೇ ಸ್ವಾಮಿ ಅಶೋಕಾನಂದರು ಹಬೀಬ್‌ಗಂಜ್‌ನ (ಈಗಿನ ಬಾಂಗ್ಲಾ ದೇಶ್) ಬಡ ಚಮ್ಮಾರರ ಏಳಿಗೆಗೆ ಶ್ರಮಿಸಿದರು. ಅವರ ಕಾರ್ಯಶೈಲಿಯನ್ನು ಸುಧಾರಿಸಲು ತರಬೇತಿಗೆ ಕೊಲ್ಕತಾಗೆ ಕಳುಹಿಸಿಕೊಟ್ಟರು. ಚಮ್ಮಾರರ ಸಹಕಾರ ಸಂಸ್ಥೆಯನ್ನು ರೂಪಿಸಿ ಅವರ ಆದಾಯ ಹೆಚ್ಚುವಂತೆ ಮಾಡಿದರು. 'ಅಸ್ಪೃಶ್ಯರು' ಎಂಬ ಕಳಂಕವನ್ನು ತೊಡೆದುಹಾಕಲು ಅವರುಗಳಿಗೆ 'ಋಷಿ' ಎಂದು ಪುನರ್ನಾಮಕರಣ ಮಾಡಿದರು.

೧೯೨೭ರಲ್ಲಿ ಸ್ವಾಮಿ ಶಾಂಭವಾನಂದರು ಕೊಡಗು ಪ್ರಾಂತ್ಯದಲ್ಲಿ ಪ್ರಮುಖ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು. ತೀರ ಕಡುಬಡವರಾಗಿದ್ದು, ಕಾಡಿನಲ್ಲಿ ವಾಸಿಸುತ್ತಿದ್ದ ಜೇನುಸಂಗ್ರಾಹಕರಿಗೆ ನೆರವಾಗಲು, 'ಕೂರ್ಗ್ ಸ್ಟ್ಯಾಂಡರ್ಡ್ ಹೈವ್' ಎಂಬ ಹೊಸ ಜೇನು ಸಂಗ್ರಹ ಹಾಗೂ ಸಂಸ್ಕರಣೆಯ ವಿಧಾನವನ್ನು ಅಭಿವೃದ್ಧಿಪಡಿಸಿದರು. ಜೊತೆಗೆ, ಜೇನು ಉತ್ಪಾದಕರ ಸಹಕಾರ ಸಂಸ್ಥೆಯನ್ನೂ ಸ್ಥಾಪಿಸಿದರು.

ಪಶ್ಚಿಮ ಬಂಗಾಳದ ಸುಂದರ್‌ಬನ್ ಪ್ರದೇಶದ ಭಾಗವಾಗಿರುವ ಸಾಗರ ದ್ವೀಪದಲ್ಲಿ ಸ್ವಾಮಿ ಇಷ್ಟಾನಂದ ಎಂಬ ಸ್ವಾಮಿಗಳು ೧೯೨೬-೨೭ರ ಸುಮಾರಿನಲ್ಲಿ ಬಹಳ ಕೆಲಸ ಮಾಡಿದರು. ಹಳ್ಳಿಗಳನ್ನೊಳಗೊಂಡ ಈ ದೂರದ ಪ್ರದೇಶದಲ್ಲಿ ಸುಮಾರು ೪೦ ವರ್ಷಗಳ ಅವಧಿಯಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ವ್ಯಾಪಕವಾಗಿ ಪ್ರಚಾರ ಮಾಡಿದರು. ಈ 'ಅಕ್ಷರ ದಾಸೋಹ' ದಿಂದಾಗಿ ಸ್ವಾತಂತ್ರ್ಯಕ್ಕೆ ಮುಂಚೆಯೇ ಈ ದ್ವೀಪವು ಅವಿಭಕ್ತ ಬಂಗಾಳದಲ್ಲಿ ಅತಿ ಹೆಚ್ಚು ಸಾಕ್ಷರತೆಯನ್ನು ಸಾಧಿಸಿತ್ತು. ಜೊತೆಗೆ ಅವರು ವೃತ್ತಿಪರ ಶಿಕ್ಷಣಕ್ಕೂ ಒತ್ತುಕೊಟ್ಟು, ಹಳ್ಳಿಗರ ಆರ್ಥಿಕ ಪುನಶ್ಚೇತನಕ್ಕೆ ದಾರಿ ತೋರಿಸಿದರು.

ಮೇಲ್ಕಂಡ ಉದಾಹರಣೆಗಳನ್ನು ಗಮನಿಸಿದಾಗ, ರಾಮಕೃಷ್ಣ ಮಹಾಸಂಘದ ಸ್ವಯಂಪ್ರೇರಿತ ಸಂನ್ಯಾಸಿಗಳು, ವಿದೇಶೀ ಆಳ್ವಿಕೆಯಲ್ಲಿ ಅನೇಕ ಸಂಕಷ್ಟ-ಸವಾಲುಗಳನ್ನು ಎದುರಿಸಿ, ಸ್ವಾರ್ಥತ್ಯಾಗ ಮಾಡಿ ದುಡಿದದ್ದು ಸ್ಪಷ್ಟವಾಗುತ್ತದೆ. ಈ ಎಲ್ಲ ಕಾರ್ಯಕ್ರಮಗಳು ಸ್ವಾಮಿ ವಿವೇಕಾನಂದರ ಆದರ್ಶಗಳ ತಳಹದಿಯ ಮೇಲೆ ರೂಪುಗೊಂಡಿದ್ದರೂ, ಪ್ರತಿಯೊಂದು ಪ್ರಯೋಗದಲ್ಲೂ ಸಂನ್ಯಾಸಿಗಳ ಸೃಜನಾತ್ಮಕ ಹೊಸ ಹೆಜ್ಜೆಗಳು ಕಂಡುಬರುತ್ತವೆ.

**ಸ್ವಾತಂತ್ರ್ಯೋತ್ತರ ಪರ್ವ:** ಬ್ರಿಟಿಷರ ಆಳ್ವಿಕೆ-ದಬ್ಬಾಳಿಕೆ ಮುಗಿದು, ೧೯೪೭ರ ಆಗಸ್ಟ್‌ನಲ್ಲಿ ಸ್ವಾತಂತ್ರ್ಯ ಬಂದಾಗ, ಅದು ನೋವು-ನಲಿವುಗಳೆರಡನ್ನೂ ತಂದಿತ್ತು. ದೀರ್ಘಕಾಲದ ದಾಸ್ಯ ಮುಗಿದ ಸಂತಸ ಒಂದೆಡೆಯಾದರೆ, ದೇಶದ ವಿಭಜನೆಯ ನೋವು ಇನ್ನೊಂದೆಡೆ. ಜೊತೆಗೆ ಎಲ್ಲೆಡೆ ಆವರಿಸಿದ್ದ ಮೌಢ್ಯ, ದಾರಿದ್ರ್ಯ, ಅನಕ್ಷರತೆ, ಧರ್ಮ-ಸಂಸ್ಕೃತಿಯ ಅರಿವಿನ ಅಭಾವ ಬೇರೆ. ಇಂಥ ಸಂಕಟಮಯ, ಸಂಕ್ರಮಣ ಕಾಲದಲ್ಲಿ ಪಾಕಿಸ್ತಾನಕ್ಕೆ ಸೇರಿದ ಪ್ರದೇಶಗಳಿಂದ ಭಾರತಕ್ಕೆ ವಲಸೆ ಬಂದ ನಿರಾಶ್ರಿತರಿಗೆ ಪುನರ್ವಸತಿಯನ್ನು ಕಲ್ಪಿಸುವುದರಲ್ಲಿ ರಾಮಕೃಷ್ಣ ಮಹಾಸಂಘ ಮಹತ್ವದ ಜವಾಬ್ದಾರಿಯನ್ನು ಹೊರಬೇಕಾಯಿತು. ರಾಮಕೃಷ್ಣ ಮಹಾಸಂಘದ ಹತ್ತನೆಯ ಅಧ್ಯಕ್ಷರಾದ ಸ್ವಾಮಿ ವೀರೇಶ್ವರಾನಂದಜಿ ಅವರ ಅವಧಿಯಲ್ಲಿ, ಮಹಾಸಂಘದ ಹಲವಾರು ಕೇಂದ್ರಗಳು ಶಿಕ್ಷಣ ಹಾಗೂ ಸಾಮಾಜಿಕ-ಆರ್ಥಿಕ ಪ್ರಗತಿಗಾಗಿ, ಗ್ರಾಮೀಣ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೆತ್ತಿಕೊಂಡವು. ವಿವಿದೆಡೆಗಳಲ್ಲಿ ಮಹಾಸಂಘವು ಕೈಗೊಂಡ ಕೆಲವು ಚಟುವಟಿಕೆಗಳು ಹೀಗಿವೆ:

೧. ಬೇಲೂರು ಮಠದ ಸಮೀಪದಲ್ಲಿದ್ದ ಶಾರದಾಪೀಠದ ಜನಶಿಕ್ಷಾಮಂದಿರ, ಹಿರಿಯರಿಗೆ ಸಾಕ್ಷರತೆ ಹಾಗೂ ಕೊಳಚೆ ಪ್ರದೇಶದ ದುಡಿಯುವ ಮಕ್ಕಳಿಗೆ ವೃತ್ತಿಪರ ತರಬೇತಿಯ ಕಾರ್ಯಕ್ರಮಗಳನ್ನು ರೂಪಿಸಿತು.

೨. ಮಹಾಸಂಘದ ಅತಿ ದೊಡ್ಡ ಗ್ರಾಮೀಣ ಅಭಿವೃದ್ಧಿ ಘಟಕವಾದ ರಾಮಕೃಷ್ಣ ಮಿಷನ್ ಲೋಕಶಿಕ್ಷಾ ಪರಿಷದ್, ೧೯೫೫-೫೬ನೇ ಇಸವಿಯಿಂದ ಹಲವಾರು ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತ ಬಂದಿದೆ. ಈ ಯೋಜನೆಯಡಿಯಲ್ಲಿ ಪಶ್ಚಿಮ ಬಂಗಾಳದ ೫,೦೦೦ಕ್ಕೂ ಹೆಚ್ಚು ಹಳ್ಳಿಗಳಲ್ಲಿ ಸಾಕ್ಷರತೆ, ಆರೋಗ್ಯ, ಪರಿಸರ ರಕ್ಷಣೆ, ಬಯೋಗ್ಯಾಸ್ (ಅನಿಲ) ಘಟಕಗಳು, ಸೌರಫಲಕ, ವೃತ್ತಿಪರ ತರಬೇತಿ ಮತ್ತು ಸಮಗ್ರ



ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳೂ ಸೇರಿವೆ. ಜೊತೆಗೆ ತನ್ನ ನವ ಸಾಕ್ಷರಸ್ಥ (neo-literate) ಅಭಿವೃದ್ಧಿ ಕಾರ್ಯಕರ್ತರಿಗಾಗಿ 'ಸಮಾಜಶಿಕ್ಷಾ' ಎಂಬ ಮಾಸಿಕವನ್ನೂ ಇದು ಹೊರತರುತ್ತಿದೆ.

೩. ೧೯೮೦ರಲ್ಲಿ ರಾಮಕೃಷ್ಣ ಮಹಾಸಂಘದ ೧೧ನೆಯ ಪರಮಾಧ್ಯಕ್ಷರಾಗಿದ್ದ ಸ್ವಾಮಿ ವೀರೇಶ್ವರಾನಂದಜಿ ಅವರ ಸೂಚನೆಯ ಮೇರೆಗೆ ಬೇಲೂರು ಮಠದಲ್ಲಿ 'ಪಲ್ಲಿ ಮಂಗಲ್' ಎಂಬ ಪ್ರತ್ಯೇಕ ಘಟಕವನ್ನು ಸ್ಥಾಪಿಸಲಾಯಿತು. ಈ ಘಟಕವು ಮುಖ್ಯವಾಗಿ ಕಾಮಾರ್‌ಪುಕುರ ಮತ್ತು ಜಯರಾಂಬಾಟಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಕುಶಲ ಕಲೆಗಳು, ಹೊಲಿಗೆ, ಸೆಣಬಿನ ಉತ್ಪನ್ನಗಳು, ಮೋಂಬತ್ತಿ–ಅಗರಬತ್ತಿ ತಯಾರಿಕೆ ಮುಂತಾದವಕ್ಕೆ ಪ್ರೋತ್ಸಾಹ ನೀಡುತ್ತಿದೆ. ಈ ಯೋಜನೆಯಡಿ ಒಂದು ಮಣ್ಣು ಪರೀಕ್ಷಾ ಪ್ರಯೋಗಾಲಯ ಮತ್ತು ಸಂಚಾರಿ ವೈದ್ಯಕೀಯ ಘಟಕವೂ ಕೆಲಸ ನಿರ್ವಹಿಸುತ್ತಿವೆ.

೪. ೧೯೮೬ರಲ್ಲಿ 'ರಾಮಕೃಷ್ಣ ಮಿಷನ್ ಸಮಾಜ ಸೇವಕ ಶಿಕ್ಷಣ ಮಂದಿರ'ವನ್ನು ಸ್ಥಾಪಿಸಲಾಯಿತು. ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಸಮುದಾಯ ಅಭಿವೃದ್ಧಿಗೆ ತಮ್ಮ ಬದುಕನ್ನು ಮುಡುಪಾಗಿಡುವ ಸ್ವಯಂಸೇವಕರಿಗೆ ತರಬೇತಿ ನೀಡುವುದು ಈ ಸಂಸ್ಥೆಯ ಉದ್ದೇಶ. ಇದು, ಸರ್ವಾಂಗೀಣ ಅಭಿವೃದ್ಧಿಯನ್ನು ಉತ್ತೇಜಿಸಲು ಕಾರ್ಯಕರ್ತರ ತಂಡ ರೂಪಿಸುವ ಕಾರ್ಯಕ್ರಮವೂ ಹೌದು.

ಈ ಎಲ್ಲ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಗಮನಿಸಿದಾಗ, ಅವು ರಾಮಕೃಷ್ಣ ಮಿಷನ್ನಿನ ಮೂಲ ಸಿದ್ಧಾಂತಕ್ಕೆ ಸಂಪೂರ್ಣವಾಗಿ ಅನುಗುಣವಾಗಿರುವುದು ಸ್ಪಷ್ಟವಾಗುತ್ತದೆ. ಜೊತೆಗೆ ಇವೆಲ್ಲ ನಮ್ಮ ನಾಡಿನ ಧಾರ್ಮಿಕ – ಸಾಂಸ್ಕೃತಿಕ ಮೌಲ್ಯಗಳನ್ನು ಆಧರಿಸಿರುವುದರಿಂದ ನೇರ ಫಲಾನುಭವಿಗಳ ಜೊತೆಗೆ, ಇಡೀ ಸಮಾಜದ ಉದ್ಧಾರಕ್ಕೆ ನೆರವಾಗಿವೆ. ಇದರ ಯಶಸ್ಸಿಗೆ ಮತ್ತೊಂದು ಮುಖ್ಯ ಕಾರಣ, ಸ್ವಾಮಿ ವಿವೇಕಾನಂದರು ರೂಪಿಸಿದ ವಿಶಿಷ್ಟ ರಾಜಮಾರ್ಗ. ಇವರು ಭಾರತದ ಸನಾತನ ಧರ್ಮವನ್ನು ಮತ್ತು ಉಪನಿಷತ್ತುಗಳ ವ್ಯಾಖ್ಯೆಯನ್ನು ಮಾನವ ಸೇವೆಯಂಥ ಪವಿತ್ರ ಕೈಂಕರ್ಯಕ್ಕೆ ಸಮನ್ವಯ ಮಾಡಿ, ಅದು ಆಧುನಿಕ ವಿಜ್ಞಾನಕ್ಕೂ ಪೂರಕವೆಂದು ತೋರಿಸಿಕೊಟ್ಟರು. ನಮ್ಮ ವೇದಾಂತದ ತತ್ತ್ವಗಳು, ಮುಕ್ತಿ ಸಾಧನೆಯ ಜೊತೆಗೆ ಬ್ರಹ್ಮತತ್ತ್ವದ ಸರ್ವವ್ಯಾಪಿ ಆಯಾಮವನ್ನೂ ಪ್ರತಿಪಾದಿಸುತ್ತವೆ. ಪರಮಾತ್ಮನು ಎಲ್ಲ ಜೀವಿಗಳಲ್ಲೂ ಅಂತರ್ಯಾಮಿಯ ರೂಪದಲ್ಲಿ ನೆಲೆಸಿದ್ದಾನೆ. ಹೀಗಾಗಿ ಮಾನವರೆಲ್ಲ ಅಮೃತಪುತ್ರರೇ ಸರಿ. ಶ್ರೀರಾಮಕೃಷ್ಣರು ಹಾಗೂ ಸ್ವಾಮಿ ವಿವೇಕಾನಂದರು, ಸಾಮಾಜಿಕ ಬದುಕಿನಲ್ಲಿ ಈ ಭಾವನೆಯ ಅನುಷ್ಠಾನಕ್ಕೆ ಮಹತ್ವ ನೀಡಿದರು. ಎಲ್ಲರಲ್ಲೂ, ಎಲ್ಲದರಲ್ಲೂ ಪರಮಾತ್ಮನನ್ನು ಕಂಡು ಪ್ರೀತಿಯಿಂದ ಅವರ ಸೇವೆ ಮಾಡಿ, ಸೇವಾರೂಪವಾದ ಭಕ್ತಿಯನ್ನು ಸಮರ್ಪಿಸಬೇಕು. ಅದರಲ್ಲೂ ದೀನದಲಿತರ, ರೋಗಿಗಳ, ಉಪೇಕ್ಷಿತರ ಸೇವೆ ಒಂದು ಪವಿತ್ರ ಕೈಂಕರ್ಯವೇ ಸರಿ ಎಂಬ ಭಾವನೆ ಮೂಡಿಸಿದರು.

ಇಂದು ೨೧ನೇ ಶತಮಾನದ ಜಾಗತೀಕರಣದ ಈ ಯುಗದಲ್ಲಿ ನಮ್ಮ ದೇಶ ಹಲವಾರು ಕ್ಷೇತ್ರಗಳಲ್ಲಿ ಬಹಳಷ್ಟು ಪ್ರಗತಿ ಸಾಧಿಸಿದೆ. ಇದೇ ಬದಲಾವಣೆ ನಮ್ಮ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಕೌಟುಂಬಿಕ ಬದುಕನ್ನು ಸಂಕೀರ್ಣಗೊಳಿಸಿದೆ. ಅಶಾಂತಿ, ಅತೃಪ್ತಿ ಹೆಚ್ಚಾಗಿದ್ದು, ಒಂದು ರೀತಿಯ ಅನಾಥ ಪ್ರಜ್ಞೆ ಕಾಡುತ್ತಿದೆ. ಭಾರತ ವೈವಿಧ್ಯ – ವೈಪರೀತ್ಯಗಳ ದೇಶವೂ ಹೌದು. ಹೀಗಾಗಿ ಈ ಪ್ರಗತಿ ತಂದಿರುವ ಅಪಾರ ಸಂಪತ್ತು ಒಂದೆಡೆ ಇದ್ದರೆ, ಒಪ್ಪತ್ತಿನ ಊಟಕ್ಕೂ ಕಷ್ಟಪಡುವವರು ನಮ್ಮ ನಡುವೆ ಇನ್ನೂ ಬಹಳ ಜನ ಇದ್ದಾರೆ. ವಿಶೇಷವಾಗಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಬಡತನ, ಅನಕ್ಷರತೆ, ನೈರ್ಮಲ್ಯದ ಅಭಾವ ಇನ್ನೂ ತಾಂಡವವಾಡುತ್ತಿವೆ. ಇಂಥ ಜ್ವಲಂತ ಸಮಸ್ಯೆಗಳಿಗೆ ಪರಿಹಾರ ಹುಡುಕುವುದು ದೊಡ್ಡ ಸವಾಲಾಗಿಯೇ ಉಳಿದಿದೆ.

ಇದಕ್ಕೆ ಪರಿಹಾರೋಪಾಯವಾಗಿ ಸ್ವಾಮಿ ವಿವೇಕಾನಂದರು, ವ್ಯಕ್ತಿಗತ ಹಾಗೂ ಸಾಮಾಜಿಕ ಉದ್ಧಾರವನ್ನು ಸಮನ್ವಯ ಮಾಡುವಂಥ **'ಸೇವೆ'** ಮತ್ತು **'ತ್ಯಾಗ'** ದ ಮಾರ್ಗವನ್ನು ಬಹಳ ಹಿಂದೆಯೇ ತೋರಿಸಿಕೊಟ್ಟಿದ್ದಾರೆ. ಹೊಸ ಸಹಸ್ರಮಾನದಲ್ಲಿ ನಾವೆಲ್ಲರೂ ಆ ಬೆಳಕಿನ ರಾಜಮಾರ್ಗದಲ್ಲಿ ಸಾಗುತ್ತ ಕೃತಾರ್ಥರಾಗೋಣ.





# ಸೇವಾಸಾಹಸಗಳ ಸ್ಫೂರ್ತಿಸೆಲೆ
# ಸೇವಾ ರೂರಲ್, ಗುಜರಾತ್

ಎಸ್. ಜಿ. ಸೀತಾರಾಮ್



ರಾಮಕೃಷ್ಣ – ವಿವೇಕಾನಂದ ಭಾವಧಾರೆಯಿಂದ ಪ್ರಭಾವಿತರಾದ ಅನೇಕ ಸಂಘಸಂಸ್ಥೆಗಳು ಶಿಕ್ಷಣ, ಆರೋಗ್ಯ ಮತ್ತು ಗ್ರಾಮಾಭಿವೃದ್ಧಿ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆ ಸಲ್ಲಿಸುತ್ತಿವೆ. ಅಂಥದೊಂದು ಅಪೂರ್ವವಾದ ಸಂಸ್ಥೆ, ಗುಜರಾತಿನ ಸೇವಾ ರೂರಲ್. ಇದರ ಕಾರ್ಯಚಟುವಟಿಕೆಗಳನ್ನು ಮನೋಹರವಾದ ಭಾಷೆಯಲ್ಲಿ ಪರಿಚಯ ಮಾಡಿಕೊಟ್ಟಿರುವ ಲೇಖಕರು ಮೈಸೂರಿನವರು. ಉತ್ತಮ ಬರಹಗಾರರಾದ ಇವರದೊಂದು ಲೇಖನ ಈಗಾಗಲೇ ಈ ಪತ್ರಿಕೆಯಲ್ಲಿ ಪ್ರಕಟವಾಗಿದೆ.

## ಯುವಶಕ್ತಿಯ ಘನಸೃಷ್ಟಿ

ಅಂದು ಆ ಸೀಮೆಯಲ್ಲಿ ಅರ್ಧಕ್ಕಿಂತ ಹೆಚ್ಚು ಜನರಿಗೆ ಅಕ್ಷರದ ಗಾಳಿಗಂಧವೂ ಇರಲಿಲ್ಲ. ಅಲ್ಲಿನ ಪ್ರತಿ ಮೂರನೇ ಕುಟುಂಬವು ಬಡತನದ ಗೆರೆಯ ಬಹು ಕೆಳಗೆ ಇನ್ನೂ ಹೆಣಗುತ್ತಿತ್ತು. ಅಲ್ಲಿ ಹುಟ್ಟಿದ ಪ್ರತಿ ಹನ್ನೆರಡು ಮಕ್ಕಳಲ್ಲಿ ಒಂದು ಮಗುವು ತನ್ನ ಮೊದಲನೇ ಹುಟ್ಟುಹಬ್ಬವನ್ನೂ ಕಾಣದೇ ಕಣ್ಮುಚ್ಚುವುದು ಒಂದು 'ಯಮ ನಿಯಮ'ವಾಗಿತ್ತು.

ಭಾರತವು ಸ್ವಾತಂತ್ರ್ಯ ಗಳಿಸಿ ೩೦ ವರ್ಷಗಳು ಉರುಳಿದ ಮೇಲೂ ದಕ್ಷಿಣ ಗುಜರಾತ್‌ನ ಗ್ರಾಮೀಣ–ಬುಡಕಟ್ಟು ಪ್ರದೇಶವೊಂದರಲ್ಲಿದ್ದ ಈ ಅವಸ್ಥೆಯನ್ನು ಇಂದಿನ ಗುಜರಾತ್‌ನ ಬೆಳವಣಿಗೆಯ ಮೆರವಣಿಗೆಯಲ್ಲಿ ಕಲ್ಪಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ಅಂಥ ದುರ್ಲಕ್ಷಿತ ಜಾಗದ–ಜನಾಂಗದ ಮುಂಬರುವಿಕೆಯಲ್ಲೇ ತಮ್ಮ ಜೀವನದ ಲಕ್ಷ್ಯವನ್ನು ಕಂಡುಕೊಂಡ ವೈದ್ಯರು ಮತ್ತಿತರ ವೃತ್ತಿತಜ್ಞರ ಆದರ್ಶವಾದಿ ಯುವ ಜನದಳವೊಂದು, ೧೯೮೦ರಲ್ಲಿ ಅಲ್ಲಿನ ಝಘಡಿಯಾ ತಾಲ್ಲೂಕಿನಲ್ಲಿ ಸ್ವಯಂಸೇವಾ ಅಭಿವೃದ್ಧಿ ಕಾರ್ಯವೊಂದಕ್ಕೆ ಚಾಲನೆ ನೀಡಿತು. ಝಘಡಿಯಾ ಕುಟುಂಬಗಳ ದುರ್ಬಲ ಸದಸ್ಯರ (ಹೆಂಗಸರು, ಮಕ್ಕಳು ಮತ್ತು ವಯಸ್ಕರು) ಮತ್ತು ಎಲ್ಲ ಬಡವರ ಆರೋಗ್ಯ ಮತ್ತು ಅಭ್ಯುದಯವನ್ನು ತನ್ನ ಸರ್ವಾರ್ಥವನ್ನಾಗಿಸಿಕೊಂಡ ಆ ಉದ್ಯಮವೇ ಇಂದು **ಸೇವಾ ರೂರಲ್** (SEWA - Rural: Society for Education, Welfare and Action - Rural; ಅರ್ಥಾತ್, 'ಗ್ರಾಮೀಣ ಶಿಕ್ಷಣ, ಕಲ್ಯಾಣ ಮತ್ತು ಕಾರ್ಯಾಚರಣೆ ಸಂಘ') ಎಂಬ ನಾಮಾಂಕಿತದಿಂದ, ಸಮಾಜದ ಕೊಂಪೆಗೆ ದೂಡಲ್ಪಟ್ಟವರ ಆಶಾಕಿರಣವಾಗಿ, ನಾಗರಿಕ ಸಮಾಜದ ನಿಲುವಿಗೆ ನಿಲುಗನ್ನಡಿಯಾಗಿ ಬೆಳಗುತ್ತಿದೆ.



ನಾನಾ ಸ್ಥಳಗಳನ್ನು ಪರಿಶೀಲಿಸಿದರು. ಕಡೆಗೆ, ೧೯೭೦ರ ದಶಕದಲ್ಲಿ ಅತೀವ ಅನಕ್ಷರತೆ, ಕಡು ಬಡತನ, ವ್ಯಾಪಕ ಶೋಷಣೆ, ಆರೋಗ್ಯೋಪ ಚಾರದ ವಿರಳತೆ ಮತ್ತು ಮುಖ್ಯವಾಗಿ, ಜನಜಾಗೃತಿಯೇ ಮೂಡಿಲ್ಲದಿದ್ದ ಅತ್ಯಂತ ಪ್ರಗತಿವಂಚಿತ ಭರೂಚ್ ಜಿಲ್ಲೆ, ಅದರಲ್ಲೂ ಗ್ರಾಮೀಣ-ಬುಡಕಟ್ಟು ಜನಾಂಗವೇ ಒತ್ತಾಗಿದ್ದ ಅಲ್ಲಿನ ಝುಘಡಿಯಾ ತಾಲ್ಲೂಕು ಅವರ ಗಮನವನ್ನು ಸೆಳೆಯಿತು. ಅಲ್ಲೇ ಪಾಳುಬಿದ್ದಿದ್ದ ಸಣ್ಣ ಹೆರಿಗೆ - ಆಸ್ಪತ್ರೆಯೊಂದನ್ನು ಅಲ್ಲಿನ ಸಮುದಾಯವು ಸೇವಾ ರೂರಲ್‌ನ ಮರುಬಳಕೆಗಾಗಿ ಮುಂದಿಟ್ಟುದುದು ಮತ್ತು ನರ್ಮದಾ ನದಿಯು ಎರಡೇ ಕಿ.ಮೀ. ದೂರದಲ್ಲಿದ್ದುದು ಈ ಸ್ಥಳನಿರ್ಣಯದಲ್ಲಿ ವರದಾನವಾಗಿ ಒದಗಿಬಂದವು.

## ಕಟುದಿಟಗಳಿಂದ ಪುಟಿದೆದ್ದ ಒಕ್ಕೂಟ

ಸೇವಾ ರೂರಲ್ ಅಧಿಕೃತವಾಗಿ ೧೯೮೦ರಲ್ಲಿ ಸ್ಥಾಪಿತವಾದರೂ, ಅದರ ಮಾನಸಿಕ ಉಗಮವನ್ನು ೧೯೭೦ರ ದಶಕದ ಮೊದಲಲ್ಲೇ ಗುರುತಿಸಬಹುದು. ಆ ಕಾಲಘಟ್ಟದಲ್ಲಿ ಆಗಷ್ಟೇ ಕಾಲೇಜು ಸೇರಿದ್ದ ಕೆಲವು ಸಹೃದಯ ನವಯುವಕರು, ಸಮಾಜವನ್ನು ವ್ಯಾಪಕವಾಗಿ ಕಾಡುತ್ತಿದ್ದ ಬಡತನ-ಜಡತನ, ರೋಗ-ರುಜಿನ, ಅನಕ್ಷರತೆ, ಶೋಷಣೆ ಮತ್ತಿತರ ಅನಿಷ್ಟಗಳ ಅರಿವಿನಿಂದ ಆಘಾತಗೊಂಡು, ಇಂಥ ದುರ್ದಶೆಯನ್ನು ನೇರ್ಪಡಿಸಲು ಹೇಗಾದರೂ ಪ್ರಯತ್ನಿಸ ಬೇಕೆಂದು ನಿರ್ಧರಿಸಿದರು. ವಾಸ್ತವವಾಗಿ, ತಾವೇ ಮಧ್ಯಮ ಅಥವಾ ಕೆಳಮಧ್ಯಮ ಆರ್ಥಿಕ ವರ್ಗದವರಾದ್ದರಿಂದ, ಆ ವಿದ್ಯಾರ್ಥಿಗಳಲ್ಲಿ ತಾವು ಕಲ್ಪಿಸಿಕೊಂಡಿದ್ದ ಸೇವಾಸೌಧಕ್ಕೆ ಬೇಕಿದ್ದ ದ್ರವ್ಯಬಲ ಅವರಿಗೆ ಕಿಂಚಿತ್ತೂ ಇರಲಿಲ್ಲ. ಜೊತೆಗೆ, ಅವರು ತಮ್ಮ ವ್ಯಾಸಂಗವನ್ನೂ ಮುಂದುವರೆಸಬೇಕಿತ್ತು. ಹೀಗಾದರೂ ಹಿಂಜರಿಯದೆ, ಅವರು ತಮ್ಮ ವ್ಯಾಸಂಗದೊಟ್ಟಿಗೆ, ಸ್ವಾಮಿ ವಿವೇಕಾನಂದ ಮತ್ತು ಗಾಂಧೀಜಿ ಅವರ ಜೀವನ-ಸಂದೇಶಗಳನ್ನು ಅಧ್ಯಯನ ಮಾಡುವುದಲ್ಲದೆ, ಹಿಂಚೂಣಿಯಲ್ಲಿದ್ದವರ ಬೇನೆ-ಬೇಗೆ-ಬವಣೆಗಳಿಗೂ ತಮ್ಮನ್ನು ತಕ್ಕಷ್ಟು ಒಡ್ಡಿಕೊಂಡು, ತಮ್ಮ ನಿಶಾನೆ-ನಿರೀಕ್ಷೆಗಳನ್ನು ಇನ್ನಷ್ಟು ಸ್ಪಷ್ಟಗೊಳಿಸಿಕೊಂಡರು; ತಮ್ಮ ಒಲವು-ನಿಲುವುಗಳನ್ನು ಇನ್ನಷ್ಟು ಬಲಪಡಿಸಿಕೊಂಡರು. ಕಾಲಾನುಕ್ರಮದಲ್ಲಿ ಅವರಲ್ಲಿ ಕೆಲವರು ವಿದೇಶಗಳಿಗೆ ಹೋಗಿ, ಮತ್ತಿತರರು ಇಲ್ಲೇ ಉಳಿದು, ಹೆಚ್ಚು ವೃತ್ತಿಜ್ಞಾನ ಮತ್ತು ಅನುಭವ ಗಳಿಸಿ, ತಮ್ಮ ಮುಂದಿದ್ದ ಸೇವಾ ಜೀವನಕ್ಕೆ ಇನ್ನೂ ಚೆನ್ನಾಗಿ ಸಜ್ಜಾದರು. ಕಡೆಗೆ, ೧೯೮೦ ಸಮೀಪಿಸುತ್ತಿದ್ದಂತೆಯೇ, ಈ ತರುಣ ವೃತ್ತಿತಜ್ಞರೆಲ್ಲರೂ ಒಂದೆಡೆ ಒಟ್ಟಾಗಿ, ಸ್ವಾಮಿ ವಿವೇಕಾನಂದ ಮತ್ತು ಗಾಂಧೀಜಿ ಅವರು ಸಾರಿದ ಮತ್ತು ನಿದರ್ಶಿಸಿದ 'ಕರ್ಮಯೋಗ'ದ ಪ್ರೇರಣೆಯಲ್ಲಿ, ತಮ್ಮ ಕನಸಿನ ಕೂಸಾದ 'ಸೇವಾ ರೂರಲ್' ಅಭಿಯಾನಕ್ಕೆ ೧೯೮೦ರ ಅಕ್ಟೋಬರ್ ೨೬ರಂದು ಚಾಲನೆ ನೀಡಿದರು.

## ಸೇವಾಸ್ವೀಕಾರಕ್ಕೆ ಸರ್ವಸೂಕ್ತ ಸ್ಥಳ

ದೀನಹೀನರು ದಟ್ಟವಾಗಿರುವ, ಬೆಳವಣಿಗೆಯ ಕುರುಹುಗಳೇ ಕಾಣದಂತಿರುವ ಮತ್ತು ಸ್ವಯಂಸೇವಕರು ಹೆಚ್ಚಿಲ್ಲದಿರುವ ಜಾಗ ವೊಂದನ್ನು ತಮ್ಮ ಕರ್ಮಭೂಮಿಯನ್ನಾಗಿಸಿಕೊಳ್ಳಬೇಕೆಂದು ಸೇವಾ ರೂರಲ್‌ನ ಪ್ರವರ್ತಕರು ಪ್ರಾರಂಭದಲ್ಲಿ ಗುಜರಾತ್‌ನ ನಾನಾ ಸ್ಥಳಗಳನ್ನು ಪರಿಶೀಲಿಸಿದರು.

## ಕರ್ಮಭೂಮಿಯತ್ತ ಕಿರುನೋಟ

### ಕಸ್ತೂರ್ ಬಾ ಆಸ್ಪತ್ರೆ

೧೦೦ ಹಾಸಿಗೆಗಳ ಅನುಕೂಲವಿರುವ ಸೇವಾ ರೂರಲ್‌ನ ಈ ಆಸ್ಪತ್ರೆಯು ಒಳನಾಡಿನ ಹಿಂದುಳಿದ ಜನತೆಗೆ ನವನೂತನ ಸೌಕರ್ಯಗಳನ್ನು ಸುಲಭದರಗಳಲ್ಲಿ ಒದಗಿಸುತ್ತದೆ. ಇಲ್ಲಿ ಹಗಲೂ ರಾತ್ರಿ ತುರ್ತುನಿಗಾ ನೀಡಲಾಗುವುದಲ್ಲದೆ, ಹೆಂಗಸರು-ಮಕ್ಕಳಿಗೆ ಮತ್ತು ಕಣ್ಣಿನ ಖಾಯಿಲೆಗಳುಳ್ಳವರಿಗೆ ವಿಶೇಷ ಗಮನ ಕೊಡಲಾಗುತ್ತದೆ. ಹಾಗೂ ಕ್ಷಯ, ಮಧುಮೇಹ ಮತ್ತು ಸಂತಾನಹೀನತೆಯ ಸಮಸ್ಯೆಗಳಿಗೆ ಇಲ್ಲಿ ಪ್ರತ್ಯೇಕ ಚಿಕಿತ್ಸಾಲಯಗಳನ್ನು ತೆರೆಯಲಾಗಿದೆ. ಇವೆಲ್ಲಕ್ಕೂ ಬೇಕಾದ ನವೋಪಕರಣ ಯುಕ್ತ ರೋಗನಿಧಾನ ಘಟಕಗಳು, ಸಲಹಾಗೃಹಗಳು ಮತ್ತು ಶಸ್ತ್ರಚಿಕಿತ್ಸಾಂಗಣಗಳು, ರಕ್ತನಿಧಿ, ನ್ಯಾಯಬೆಲೆಯ ಔಷಧದಂಗಡಿ ಇವುಗಳಷ್ಟೇ ಅಲ್ಲದೆ, ವೈದ್ಯರ ಜ್ಞಾನಾಭಿವೃದ್ಧಿಗಾಗಿ ಒಂದು ಉತ್ತಮ ಗ್ರಂಥಾಗಾರ, ದೇಶಿ-ವಿದೇಶಿ ವೈದ್ಯವಿದ್ಯಾರ್ಥಿಗಳಿಗೆ ದಿಗ್ದರ್ಶನ ನೀಡುವ ತರಬೇತಿ ಮತ್ತು ಯುವ ವಿದ್ಯಾರ್ಥಿಗಳಿಗೆ ಭಾರತದಲ್ಲಿ ಮತ್ತು ಹೊರಗೆ ವೈದ್ಯಕೀಯ ಶಿಕ್ಷಣಾವಕಾಶ - ಇವೆಲ್ಲವೂ ಈ ಆಸ್ಪತ್ರೆ ಸಂಕೀರ್ಣದಲ್ಲಿ ಲಭ್ಯವಿವೆ.

ದೂರದ ಯಾವುದೋ ಕುಗ್ರಾಮವೆಂದು ಇಲ್ಲಿಗೆ ಬರಲು ಸುಶಿಕ್ಷಿತ ಅರೆಚಿಕಿತ್ಸೀಯ (para-medical) ಕಾರ್ಯ ಕರ್ತರು ಹಿಂಜರಿಯುತ್ತಿದ್ದರಿಂದ, ಸ್ಥಳೀಯ ಬುಡಕಟ್ಟಿನ ಯುವ ನಿವಾಸಿಗಳಿಗೇ ತೀವ್ರವಾದ ತರಬೇತಿಯನ್ನಿತ್ತು, ಅವರನ್ನೇ ಇಲ್ಲಿನ ಶುಶ್ರೂಷಕಿಯರು, ಪ್ರಯೋಗಾಲಯ ಮತ್ತು ಕ್ಷ-ಕಿರಣ ಸಹಾಯಕರು, ಆಪ್ತ ಸಮಾಲೋಚಕರು, ನಿರ್ವಹಣಾ ಮೇಲ್ವಿಚಾರಕರು ಮುಂತಾಗಿ ನೇಮಿಸಿಕೊಂಡು, ಅವರ ಜೀವನದಲ್ಲಿ ಪರಿವರ್ತನೆಯನ್ನುಂಟುಮಾಡಿ, ಸಂಗಡವೇ ಜನಸೇವಾ ದಕ್ಷತೆಯನ್ನೂ ಕಾಪಾಡಿಕೊಂಡು ಬರುತ್ತಿರುವುದು ಈ ಆಸ್ಪತ್ರೆಯ ವೈಶಿಷ್ಟ್ಯಗಳಲ್ಲೊಂದಾಗಿದೆ. ೧೫ ಪೂರ್ಣಾವಧಿ ವೈದ್ಯರಿರುವ ಈ ವ್ಯವಸ್ಥೆಯಲ್ಲಿ ಸುತ್ತಮುತ್ತಲ ೧,೫೦೦ ಒಳನಾಡಿನ ಹಳ್ಳಿಗಳಿಂದ ವರ್ಷಕ್ಕೆ ಸುಮಾರು ೭೦,೦೦೦ ಹೊರರೋಗಿಗಳೂ,

೧೨,೦೦೦ ಒಳರೋಗಿಗಳೂ ಚಿಕಿತ್ಸೆ ಪಡೆಯುತ್ತಿದ್ದಾರೆ, ಮತ್ತು ಹೆರಿಗೆ–ನಿಗಾ ಹಾಗೂ ಶಸ್ತ್ರಚಿಕಿತ್ಸೆಗಳ ಸೇವೆಯಿಂದ ಕ್ರಮವಾಗಿ ೨,೨೦೦ ಮತ್ತು ೭,೦೦೦ ಜನ ಪ್ರಯೋಜನ ಪಡೆದಿದ್ದಾರೆ. ಶುಲ್ಕಗಳಲ್ಲಿ ರಿಯಾಯ್ತಿ ತೋರುವುದೇ ಅಲ್ಲದೆ, ೩೫% ಹೊರರೋಗಿಗಳನ್ನು ಮತ್ತು ೭೫% ಒಳರೋಗಿಗಳನ್ನು ಇಲ್ಲಿ ಉಚಿತವಾಗಿಯೂ ಉಪಚರಿಸಲಾಗುತ್ತಿದೆ.

### ಶಾರದಾ ಮಹಿಳಾ ವಿಕಾಸ್ ಸೊಸೈಟಿ

ಆರಂಭದಿಂದಲೂ ಸ್ತ್ರೀಪುರೋಭಿವೃದ್ಧಿಯನ್ನೇ ಕೇಂದ್ರಬಿಂದು ವಾಗಿಟ್ಟುಕೊಂಡಿರುವ ಸೇವಾ ರೂರಲ್, ೧೯೮೫ರಿಂದ ಈಚೆಗೆ ಅವರಿಗಾಗೆಂದೇ ಅನೇಕ ನಿರ್ದಿಷ್ಟ ಯೋಜನೆಗಳನ್ನು ಮೊದಲ್ಗೊಳಿಸಿ, ೨೦೦೨ರ ಜುಲೈನಲ್ಲಿ ಈ ಎಲ್ಲ ಯೋಜನೆಗಳನ್ನೂ 'ಶಾರದಾ ಮಹಿಳಾ ವಿಕಾಸ್ ಸೊಸೈಟಿ' ಎಂಬ, ತಾನೇ ಪ್ರವರ್ತಿಸಿದ ಸ್ವತಂತ್ರ ಸಂಸ್ಥೆಗೆ ವರ್ಗಾಯಿಸಿತು. ಹಪ್ಪಳ ಮತ್ತು ಕುರುಕು ತಿಂಡಿಗಳ ತಯಾರಿಕೆ, ಉಡುಪು ಅಣಿಗೊಳಿಸುವುದು, ಹಣ ಉಳಿತಾಯ ಮತ್ತು ಕೌಟುಂಬಿಕ ಸಾಲ ವಿತರಣೆ ಮುಂತಾದವನ್ನು ಕುರಿತ ಪ್ರತ್ಯೇಕ ಕಾರ್ಯಕ್ರಮಗಳು; ದುರ್ಬಲ ಕುಟುಂಬಗಳಲ್ಲಿನ ಶಾಲಾಮಕ್ಕಳಿಗಾಗಿ ವಿಶಿಷ್ಟ–ಜೀವನೋಪಯುಕ್ತ ಶಿಕ್ಷಣ; ಪ್ರೌಢರಿಗಾಗಿ ಆರೋಗ್ಯ–ನೈರ್ಮಲ್ಯ–ಹವ್ಯಾಸ–ನಡವಳಿಕೆ ಇತ್ಯಾದಿ ವಿಷಯಗಳನ್ನು ಕುರಿತ ಸಮಾಲೋಚನೆ; ಸಲಹೆ ಮತ್ತು ಬದುಕುವ ಕುಶಲತೆಗಳಲ್ಲಿ ತರಬೇತಿ; ಸ್ತ್ರೀಸಬಲೀಕರಣಕ್ಕಾಗಿ ಶಿಬಿರಗಳು, ಚರ್ಚಾಕೂಟಗಳು, ಸಂಸ್ಥೆಗಳ ಸಂದರ್ಶನ ಮತ್ತು ಜ್ಞಾನೋನ್ನತೀಕರಣ ಕಾರ್ಯಕ್ರಮಗಳು; ದೈಹಿಕ ಮತ್ತು ಮಾನಸಿಕ ಶೋಷಣೆಯಿಂದ ತಮ್ಮನ್ನು ತಾವು ಕಾಪಾಡಿಕೊಳ್ಳಲು ಸ್ತ್ರೀಯರಿಗೆ ಸರಳ ವರಸೆಗಳ ಪರಿಚಯ – ಇಂಥ ವಿವಿಧೋದ್ದೇಶ ಕಾರ್ಯಕ್ರಮಗಳು ಈ ಸೋದರ ಸಂಸ್ಥೆಯ ಹರವಿನಲ್ಲಿವೆ.

### ಸಮುದಾಯ ಸ್ವಾಸ್ಥ್ಯ ಪ್ರಶಿಕ್ಷಣ ಕೇಂದ್ರ

ನವೋನ್ಮುಖ ಪ್ರಯೋಗ–ಪ್ರಯತ್ನಗಳ ಮೂಲಕ ಸಾರ್ವಜನಿಕ ಆರೋಗ್ಯದ ವಿಷಯದಲ್ಲಿ ತಾನು ಸಂಗ್ರಹಿಸಿರುವ ಅಪಾರ ಅನುಭವ ಭಂಡಾರವನ್ನು ಹಂಚುವ ಸಲುವಾಗಿ, ಅಮೇರಿಕಾದ ಷೇರ್ ಆ್ಯಂಡ್ ಕೇರ್ ಪ್ರತಿಷ್ಠಾನದ ಅನುದಾನದಡಿಯಲ್ಲಿ ಸೇವಾ ರೂರಲ್ ಈ ಕೇಂದ್ರವನ್ನು ೧೯೯೦ರಲ್ಲಿ ತೆರೆಯಿತು. ಅರೆಚಿಕಿತ್ಸೀಯ (Paramedical) ಕಾರ್ಯಕರ್ತರು, ನೇತ್ರಾರೋಗ್ಯಪಾಲನೆ ಮತ್ತು ದೃಷ್ಟಿಹೀನರ ಪುನರ್ವಸತೀಕರಣದಲ್ಲಿ ತೊಡಗಿರುವವರು, ಸಮುದಾಯ ಆರೋಗ್ಯ ಸ್ವಯಂಸೇವಕರು, ವೈದ್ಯಕೀಯ ಅಧ್ಯಯನೋತ್ತರ ಅಭ್ಯಾಸಕ್ಕಾಗಿ ಗುಜರಾತ್ ಮತ್ತು ಅಮೇರಿಕಾದ ವಿದ್ಯಾರ್ಥಿಗಳು ಮತ್ತು ಇತರ ಹಲಬಗೆಯ ಕ್ಷೇತ್ರಗಳ ವಿದ್ಯಾಕಾಂಕ್ಷಿಗಳು ಇಲ್ಲಿಗೆ ಬರುತ್ತಿದ್ದು, ಈ ಕೇಂದ್ರವು ಈಗ ವರ್ಷಕ್ಕೆ ೧,೦೦೦ ಶಿಕ್ಷಣಾರ್ಥಿಗಳಿಗೂ ಮೀರಿ ತನ್ನ ತಿಳಿವು–ಅನುಭವಗಳನ್ನು ಹಂಚುತ್ತಿದೆ. ಸೇವಾ ರೂರಲ್‌ನ ಆರೋಗ್ಯ ಕಾರ್ಯಕರ್ತರ ಗುಣಮಟ್ಟವನ್ನು ಹೆಚ್ಚಿಸಲು ಇಲ್ಲಿ ಬಹುಮುಖ ಕಲಿಕೆ ಕಾರ್ಯಕ್ರಮಗಳನ್ನೂ ಆಯೋಜಿಸಲಾಗುತ್ತಿದೆ.

### ಎಲ್ಲಿ ರೋಗಿಯೋ ಅಲ್ಲೇ ಆಸ್ಪತ್ರೆ

ತನ್ನ ಆರೋಗ್ಯಸೇವೆಯು ಆಸ್ಪತ್ರೆಯ ನಾಲ್ಕು ಗೋಡೆಗಳಿಗಷ್ಟೇ ಸೀಮಿತಗೊಳ್ಳದೆ, ಸರ್ವರನ್ನೂ ಸೇರುವಂತಾಗಲು, ೧೯೮೨ರಲ್ಲಿ ಸೇವಾ ರೂರಲ್ ಈ ಸೇವೆಯನ್ನು ಝಘಡಿಯಾದ ಹತ್ತು ಹಳ್ಳಿಗಳ ಮನೆಮನೆಗೂ ಒಯ್ದು, ತರುವಾಯ ಅದನ್ನು ನಲವತ್ತು ಹಳ್ಳಿಗಳ ಮನೆಮನೆಗಳಿಗೂ ಹಿಗ್ಗಿಸಿ, ಸರ್ಕಾರ ವಹಿಸಿದ ಝಘಡಿಯಾ ಪ್ರಾಥಮಿಕ ಆರೋಗ್ಯ ಕೇಂದ್ರವನ್ನೂ ಒಂದು ದಶಕದಾದ್ಯಂತ ಸಕ್ಷಮವಾಗಿ ನಿಭಾಯಿಸಿ, ಆ ಮೂಲಕ ಸರ್ಕಾರಿ–ಖಾಸಗಿ ಸೃಜನಾತ್ಮಕ ಸಹಭಾಗಿತ್ವದಲ್ಲಿ ಭಾರತದಲ್ಲಿ ಮೊಟ್ಟಮೊದಲಿಗೆ ಒಂದು ಮಾದರಿ ಪ್ರಯೋಗವನ್ನು ಯಶಸ್ವಿಗೊಳಿಸಿತು. ಹೀಗೆ ತನ್ನ ಪ್ರಗತಿಪ್ರೇಮಿ ಧೋರಣೆಯಿಂದಾಗಿ, ಸೇವಾ ರೂರಲ್ **'ಸರ್ವರಿಗೂ ಆರೋಗ್ಯ – ೨೦೦೦'** ಅಭಿಯಾನದ ಗುರಿಗಳನ್ನು ನಿಗದಿತ ಕಾಲಕ್ಕೆ ಬಹಳ ಮುಂಚಿತವಾಗಿಯೇ ತಲುಪಿ ಖ್ಯಾತಿಯನ್ನು ಗಳಿಸಿತು.

### ತಾಯ್ತನದ ಕಾಪಾಡುವಿಕೆ ಮತ್ತು ಹೊಸಮಗುವಿನ ಆರೈಕೆ

ಸಂಪನ್ಮೂಲ–ನ್ಯೂನ ಪರಿಸರಗಳಲ್ಲಿ ನವಜಾತ ಶಿಶುಗಳ ಮತ್ತು ಅವರ ತಾಯಂದಿರ ರೋಗ ಹಾಗೂ ಮರಣ ಪ್ರಮಾಣವನ್ನು ತಗ್ಗಿಸಲು ಒಂದು ಸಾಕ್ಷ್ಯಾಧಾರಿತ, ಸರ್ವಾನ್ವಯ ನಮೂನೆಯನ್ನು ನಿರ್ಮಿಸುವ ಸಲುವಾಗಿ, ಸೇವಾ ರೂರಲ್ ಸಂಸ್ಥೆಯು ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಆರೋಗ್ಯ ಇಲಾಖೆಯ ಸಹವರ್ತನೆಯಲ್ಲಿ, ೧,೭೫,೦೦೦ ಜನಸಂಖ್ಯೆಯಿದ್ದ ಝಘಡಿಯಾ ತಾಲ್ಲೂಕಿನಲ್ಲಿ, ಮ್ಯಾಕ್ ಆರ್ಥರ್ ಪ್ರತಿಷ್ಠಾನ (ಶಿಕಾಗೊ) ಪ್ರಾಯೋಜಿತ **'ಕುಟುಂಬ–ಕೇಂದ್ರಿತ ಸುರಕ್ಷಿತ ಮಾತೃತ್ವ ಮತ್ತು ನವಜಾತ ಶಿಶು ಶುಶ್ರೂಷೆ'** (Family Centered Safe Motherhood and Newborn Care) ಸಮುದಾಯ ಸ್ವಾಸ್ಥ್ಯ ಯೋಜನೆಯನ್ನು ೨೦೦೩ರಲ್ಲಿ ಪ್ರಾರಂಭಿಸಿತು. ಇದಕ್ಕೆ ಬೇಕಾದ ನಿರಂತರ ಮಧ್ಯಪ್ರವೇಶಿಕ ಗಮನಕ್ಕಾಗಿ (Interventional Care) ಗ್ರಾಮಮಟ್ಟಗಳಲ್ಲಿ 'ಆರೋಗ್ಯ ಸಖಿ' ಮತ್ತು 'ಶಿಕ್ಷಿತ ಸೂಲಗಿತ್ತಿ'ಯರ ಒಂದು ಸ್ವಯಂಸೇನೆಯನ್ನೇ ಸಾಲ್ಗೊಳಿಸಿ, ನವಜಾತ ಶಿಶುಗಳ ಮತ್ತು ಅವರ ತಾಯಂದಿರ ಮರಣ ಪ್ರಮಾಣದಲ್ಲಿ ಕ್ರಮವಾಗಿ ೩೯% ಮತ್ತು ೭೪% ಇಳಿತವನ್ನೂ ಮತ್ತು ಆಸ್ಪತ್ರೆಯಿಂದಾಚಿನ ಕ್ಷೇತ್ರಮಟ್ಟದ ಆರೋಗ್ಯಪಾಲನೆಯಲ್ಲಿ ಮಹತ್ತ್ವದ ಸುಧಾರಣೆಯನ್ನೂ ಸಂಸ್ಥೆಯು ಸಾಧಿಸಿತು. ಈ ಘನ ಸಾಧನೆಗಾಗೆಂದೇ ಸೇವಾ ರೂರಲ್‌ಗೆ ೨೦೦೭ರಲ್ಲಿ ಬಹು ಮಾನ್ಯ ಮ್ಯಾಕ್ ಆರ್ಥರ್ ಪ್ರಶಸ್ತಿ ಪ್ರಾಪ್ತವಾಯಿತು. ಮೊಬೈಲ್ ಫೋನ್ ಆಧಾರಿತ ಆರೋಗ್ಯಸೇವೆಯಲ್ಲಿ ಮುಂದಾಳುವಾದ 'ಎನ್‌ಪವರ್ ಹೆಲ್ತ್' ಎಂಬ ಬಾಂಗ್ಲಾದೇಶೀ ಸಂಸ್ಥೆಯೊಡಗೂಡಿ ದೂರ ಗ್ರಾಮಗಳಲ್ಲಿ ಇದೇ ತಾಯಿ–ಮಗು ಆರೈಕೆಯನ್ನು ನೇರವಾಗಿ ಒದಗಿಸಲು ಸೇವಾ ರೂರಲ್ ಈಗ 'ಎಮ್‌ಹೆಲ್ತ್' ಎಂಬ ಯೋಜನೆಯನ್ನು ಹಮ್ಮಿಕೊಂಡಿದೆ.

### ಸ್ವಾಸ್ಥ್ಯ ಪ್ರಶಿಕ್ಷಣ ಮತ್ತು ಸಂಪನ್ಮೂಲ ಕೇಂದ್ರ

ಅಮೇರಿಕಾದ ವಿಶ್ವವಿಖ್ಯಾತ ಮ್ಯಾಕ್ ಆರ್ಥರ್ ಪ್ರತಿಷ್ಠಾನ ಮತ್ತು ಭಾರತ ಸರ್ಕಾರದ ಸಹಯೋಗದೊಡನೆ ೨೦೧೦ರಲ್ಲಿ ಈ ಆಧುನಿಕ ಸೌಲಭ್ಯವನ್ನು ಸೇವಾ ರೂರಲ್ ತನ್ನ ಗುಮಾನ್‌ದೇವ್ (ಝಘಡಿಯಾದಿಂದ ಮೂರು ಕಿ.ಮೀ.) ಆವರಣದಲ್ಲಿ ಸ್ಥಾಪಿಸಿತು. ನವಜಾತ ಶಿಶುವಿನ ಮತ್ತು ಬೆಳೆಯುತ್ತಿರುವ ಎಳೆಯರ ರೋಗಗಳ ಸಮನ್ವಿತ ನಿರ್ವಹಣೆಗಾಗಿ ಯೂನಿಸೆಫ್ ಮತ್ತು ಭಾರತ ಸರ್ಕಾರ

ಮಾನ್ಯ ಮಾಡಿರುವ ಸ್ವಯಂಸೇವಾ ಕ್ಷೇತ್ರದ ಮೊಟ್ಟಮೊದಲ ವಿದ್ಯಾ ಕೇಂದ್ರ ಇದಾಗಿದೆ.

### ಸಮಗ್ರ ನೇತ್ರೋಪಚಾರ ಯೋಜನೆ

ಈ ವಿಶೇಷ ಯೋಜನೆಯಡಿಯಲ್ಲಿ ಸೇವಾ ರೂರಲ್ ಸಂಸ್ಥೆಯು ಗುಜರಾತ್‌ನ ಭರೂಚ್, ನರ್ಮದಾ, ಸೂರತ್ ಮತ್ತು ವಡೋದರಾ ಜಿಲ್ಲೆಗಳಲ್ಲಿ ಮತ್ತು ಗಡಿಮಹಾರಾಷ್ಟ್ರದಲ್ಲಿ ಚದುರಿರುವ ಸಹಸ್ರಾರು ಹಳ್ಳಿಗಳಲ್ಲಿ ಎರಡು ದಶಲಕ್ಷ ಜನರಿಗೆ ಕಣ್ಣಿನ ಪ್ರಾಥಮಿಕ ಮತ್ತು ಉನ್ನತ ವೈದ್ಯಕೀಯ ಉಪಚಾರವನ್ನು ತೆರೆದಿಟ್ಟಿದೆ. ಇದರಿಂದಾಗಿ, ೧೯೯೮ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯ ಮಾನಕಗಳ ನಿರೀಕ್ಷೆಯಂತೆ ಝಘಡಿಯಾ ಮತ್ತು ವಾಲಿಯಾ ತಾಲ್ಲೂಕುಗಳನ್ನು 'ಕಣ್ಪೊರೆ-ಮುಕ್ತ' (cataract-free) ಎಂದು ಘೋಷಿಸಲು ಸಾಧ್ಯವಾಯಿತು. ಕಣ್ಣಿನ ವಿವಿಧ ಉಪಾಂಗಗಳ ಖಾಯಿಲೆಗಳಿಗೆ ಅತಿವಿಶಿಷ್ಟ ಚಿಕಿತ್ಸೆ, ಸೂಕ್ಷ್ಮತಮ ಶಸ್ತ್ರಚಿಕಿತ್ಸೆ (microsurgery), ಕಣ್ಣುಗುಡ್ಡೆಯ ಕಸಿ (keratoplasty) ಮೊದಲಾದ ಉತ್ಕೃಷ್ಟ ಸೌಲಭ್ಯಗಳನ್ನುಳ್ಳ 'ನೇತ್ರರಕ್ಷಾ ಕೇಂದ್ರ' ಎಂಬ ಅತ್ಯಾಧುನಿಕ ಆಸ್ಪತ್ರೆಯು ಈ ಯೋಜನೆಯ ಒಂದು ಭಾಗವಾಗಿದೆ.

ಸೇವಾ ರೂರಲ್ ಒಳನಾಡ ಹಳ್ಳಿಗಳಲ್ಲಿ ವಾರಕ್ಕೊಮ್ಮೆ ನೇತ್ರ ಆರೋಗ್ಯ ಶಿಬಿರಗಳನ್ನು ಏರ್ಪಡಿಸುತ್ತದೆ ಮತ್ತು ಆಗಿಂದಾಗ್ಗೆ, ಗುಜರಾತ್ ಮತ್ತು ಆಚೆಗಿರುವ ಸ್ವಯಂಸೇವಾಸಂಸ್ಥೆಗಳಿಂದ ಬರುವ ನೇತ್ರವೈದ್ಯಕೀಯ ಸಹಾಯಕರಿಗಾಗಿ ವೃತ್ತಿಕ ತರಬೇತಿ ಕಾರ್ಯಕ್ರಮಗಳನ್ನೂ ನಡೆಸುತ್ತದೆ. ರಾಷ್ಟ್ರೀಯ ಅಂಧತ್ವ ನಿಯಂತ್ರಣ ಕಾರ್ಯಕ್ರಮಕ್ಕೆ ಪೂರಕವಾಗಿ, **'ವಿಷನ್-೨೦೨೦ : ದೃಷ್ಟಿ ಎಲ್ಲರ ಹಕ್ಕು'** ಪ್ರತಿಪಾದನಾ ತಂಡದಲ್ಲಿರುವ ಸೇವಾ ರೂರಲ್, ಈ ಸಂಬಂಧದಲ್ಲಿಯೂ ಸಾಕಷ್ಟು ಶೈಕ್ಷಣಿಕ ಕಾರ್ಯಗಳನ್ನು ಜಾರಿಗೆ ತಂದಿದೆ.

ದೃಷ್ಟಿಹೀನ ಮಕ್ಕಳ ಮತ್ತು ಹಿರಿಯರ ಸಮಗ್ರ ಪುನರ್ವಸತೀಕರಣವೂ ಸೇವಾ ರೂರಲ್‌ನ ಪ್ರಮುಖ ಯೋಜನೆಗಳಲ್ಲಿ ಒಂದಾಗಿದ್ದು, ಇದರಿಂದಾಗಿ ಇದುವರೆಗೆ ಝಘಡಿಯಾ ಮತ್ತು ಸುತ್ತಮುತ್ತಲ ತಾಲ್ಲೂಕುಗಳಲ್ಲಿನ ೮೦೦ಕ್ಕೂ ಹೆಚ್ಚು ವ್ಯಕ್ತಿಗಳಿಗೆ ಪ್ರಯೋಜನವಾಗಿದೆ. ಸಣ್ಣ ಕಸುಬುಗಳನ್ನು ನಡೆಸಲು ಮತ್ತು ವಿಶೇಷ ಸರ್ಕಾರಿ ಸುವಿಧತೆಗಳನ್ನು ಪಡೆಯಲು ನೆರವಾಗುವುದು, ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಡುವುದು – ಇಂಥ ಸೇವೆಗಳೆಲ್ಲವೂ ಈ ಯೋಜನೆಯಲ್ಲಿ ಅಡಕವಾಗಿವೆ. ಶಾಲೆಗಳಲ್ಲಿ ನೇತ್ರಪರೀಕ್ಷೆ ಮುಂತಾದ ಪ್ರಾಥಮಿಕ ನೇತ್ರೋಪಚಾರವನ್ನೂ ಈ ಪುನರ್ವಸತೀಕರಣಕ್ಕೇ ಸೇರಿಸಿ, ಭಾರತದಲ್ಲಿಯೇ ಪ್ರಥಮ ಬಾರಿಗೆ ಒಂದು ಜನೋಪಯೋಗಿ ಪ್ರಯೋಗವನ್ನು ಪೂರೈಸಿದ ಕೀರ್ತಿಗೆ ಸೇವಾ ರೂರಲ್ ಭಾಜನವಾಗಿದೆ.

### ಲಕ್ಷ ಕಣ್ತೆರೆಸಿದ ಸಾಫಲ್ಯ

ಸೇವಾ ರೂರಲ್ ತನ್ನ ಅಭಿಯಾನದಲ್ಲಿ ಒಟ್ಟು ಒಂದು ಲಕ್ಷ ಕಣ್ಣುಗಳ ಶಸ್ತ್ರಚಿಕಿತ್ಸೆಯನ್ನು ನೆರವೇರಿಸಿ, ೨೦೧೩ರ ಜನವರಿಯಲ್ಲಿ ಒಂದು ಗಣನೀಯ ದಾಖಲೆಯನ್ನು ಸ್ಥಾಪಿಸಿತು.

### ವಿವೇಕಾನಂದ ಗ್ರಾಮೀಣ್ ತಕನೀಕೀ ಕೇಂದ್ರ

ಬಡತನ, ಮೌಢ್ಯ, ನಿರುದ್ಯೋಗ, ನಿರಾಕರಣೆ, ನಿರಾಶೆ – ಈ ವಿಷಚಕ್ರದಲ್ಲಿ ತೊಡಕಿ ತೊಳಲಾಡುತ್ತಿದ್ದ ಸ್ಥಳೀಯ ಯುವಜನರ ಜೀವನವನ್ನು ಮಾರ್ಪಡಿಸುವ ನಿಟ್ಟಿನಲ್ಲಿ, ಸೇವಾ ರೂರಲ್ ಈ ವೃತ್ತಿಶಿಕ್ಷಣ (ತಕನೀಕೀ= technical) ಸೌಲಭ್ಯವನ್ನು ೧೯೮೭ರಲ್ಲಿ ತೆರೆದಿಟ್ಟಿತು. ವರ್ಷಕ್ಕೆ ಸುಮಾರು ೨೦೦ ವಿದ್ಯಾರ್ಥಿಗಳಿಗೆ ಅವಕಾಶವುಳ್ಳ ಈ ಕೇಂದ್ರವು ವಿಭಿನ್ನ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಸಂಬಂಧಿತ ವೃತ್ತಿಗಳಲ್ಲಿ ಯುಕ್ತ ಶಿಕ್ಷಣವನ್ನೂ ಮತ್ತು ವೃತ್ತಿಮೌಲ್ಯಗಳ ಅರಿವನ್ನೂ ನೀಡಿ, ತೇರ್ಗಡೆಯಾದವರಿಗೆ ಸಮೀಪದ ಸಂಸ್ಥೆಗಳಲ್ಲಿ ಸೂಕ್ತ ಉದ್ಯೋಗಗಳನ್ನೂ ಏರ್ಪಡಿಸುತ್ತಿದೆ. ಇದರಿಂದಾಗಿ ಕಳೆದ ೨೫ ವರ್ಷಗಳಲ್ಲಿ, ಹೇಗೋ ಹೊಟ್ಟೆಹೊರೆದುಕೊಂಡಿರುತ್ತಿದ್ದ ಗ್ರಾಮೀಣ-ಬುಡಕಟ್ಟು ಕುಟುಂಬಗಳ ಬಹುತೇಕ ಜನರ ಜೀವನಮಟ್ಟವು ಉತ್ತಮವಾಗಿ, ಸಮುದಾಯದಲ್ಲಿಡೀ ಒಂದು ಹೊಸ ಶಕ್ತಿಸಂಚಾರವಾಗಿದೆ.

### ಪ್ರಜೆ-ಪಾಲಕ ಮುಖಾಮುಖಿ

ಸರ್ಕಾರಿ ಮತ್ತು ಪ್ರಜಾಪ್ರತಿನಿಧಿಗಳೊಡನೆ ಗ್ರಾಮಸ್ಥರು ನೇರವಾಗಿ ಸ್ಥಳೀಯ ಅಭಿವೃದ್ಧಿ ಕಾರ್ಯಗಳನ್ನು ಚರ್ಚಿಸಲು ಅನುವಾಗುವಂತೆ ಸೇವಾ ರೂರಲ್ ಸಂಸ್ಥೆಯು 'ಜನ್‌ಸಂವಾದ್' ಎಂಬ ವಿನೂತನ ವೇದಿಕೆಯನ್ನು ಹುಟ್ಟುಹಾಕಿ, ಚರ್ಚೆಯಿಂದ ಹೊರಬರುವ ಪರಿಹಾರಗಳನ್ನು ಜಾರಿಗೊಳಿಸಲೂ ವ್ಯವಸ್ಥೆಮಾಡಿದೆ.

### ಪುರಸ್ಕಾರ-ಪ್ರಶಂಸೆಗಳ ಸರಮಾಲೆ

* 'ಅನನ್ಯ, ನವೀನತಾಶೀಲ ಸಮುದಾಯ ಆರೋಗ್ಯ ಸೇವೆಗಾಗಿ' ವಿಶ್ವ ಆರೋಗ್ಯ ಸಂಸ್ಥೆಯ ಚೊಚ್ಚಲ 'ಸಾಸಾಕಾವ ಆರೋಗ್ಯ ಬಹುಮಾನ' (೧೯೮೫).
* 'ಸಂತಾನೋತ್ಪತ್ತಿ ವೈದ್ಯಕೀಯ ಕ್ಷೇತ್ರದಲ್ಲಿ ಸೃಜನಾತ್ಮಕ ಮತ್ತು ಪ್ರಭಾವಕಾರಿ ಸಂಸ್ಥೆ' ಎಂದು ಅಮೇರಿಕಾದ ಬಹುಪ್ರತಿಷ್ಠಿತ ಮ್ಯಾಕ್ ಆರ್ಥರ್ ಪ್ರಶಸ್ತಿ (೨೦೦೭).
* 'ಗುಜರಾತ್‌ನ ಬುಡಕಟ್ಟು ಪ್ರದೇಶಗಳಲ್ಲಿ ಅತ್ಯುತ್ತಮ ಪ್ರಾಥಮಿಕ ರೆಫ಼ರಲ್ ಘಟಕ' ಎಂದು ಸೇವಾ ರೂರಲ್ ಆಸ್ಪತ್ರೆಗೆ ಗುಜರಾತ್ ಸರ್ಕಾರದಿಂದ ಸತತವಾಗಿ ಎರಡನೆಯ ಬಾರಿಗೆ ಬಹುಮಾನ (೨೦೧೨).
* 'ಸುರಕ್ಷಿತ ಮಾತೃತ್ವ ಮತ್ತು ನವಜಾತ ಶಿಶು ಜೀವರಕ್ಷಣೆಯಲ್ಲಿ ಅಮೋಘ ಸೇವೆಗಾಗಿ' ರೋಟರಿ ಇಂಡಿಯಾ ಸಂಸ್ಥೆಯಿಂದ 'ಮಾನವೀಯ ಸೇವಾ ಪ್ರಶಸ್ತಿ' (೨೦೧೦-೧೧).
* 'ಕಾರ್ಯಾಚರಣೆಯಲ್ಲಿ ಮೇಲ್ತರದ ಫಲಿತಾಂಶಗಳಿಗಾಗಿ ಮತ್ತು ರೋಗಿಗಳಲ್ಲಿ ಹಾಗೂ ಒಟ್ಟು ಸಮುದಾಯದಲ್ಲಿ ತೃಪ್ತಿಯನ್ನುಂಟು ಮಾಡಿದ್ದಕ್ಕಾಗಿ, ಬಾಂಬೆ ಮ್ಯಾನೇಜ್‌ಮೆಂಟ್ ಅಸೋಸಿಯೇಶನ್ ಹಾಗೂ ಬಜಾಜ್ ಕೈಗಾರಿಕಾ ಸಮೂಹದಿಂದ ಅತ್ಯುತ್ತಮ ನಿರ್ವಹಿತ ಆಸ್ಪತ್ರೆ ಎಂಬ ರಾಷ್ಟ್ರೀಯ ಪುರಸ್ಕಾರ (೧೯೯೯).
* ಸಮಾಜಕಲ್ಯಾಣದಲ್ಲಿ ಅತಿಶಯ ಸಾಧನೆಗಾಗಿ, 'ದ ಸದರ್ನ್ ಗುಜರಾತ್ ಚೇಂಬರ್ ಆಫ಼್ ಕಾಮರ್ಸ್ ಆ್ಯಂಡ್ ಇಂಡಸ್ಟ್ರಿ, ಸೂರತ್' ಅವರ "ಸುವರ್ಣ ಮಹೋತ್ಸವ ಸ್ಮಾರಕ ಟ್ರಸ್ಟ್ ಶ್ರೇಷ್ಠತಾ ಸನ್ಮಾನ" (೨೦೦೩-೪).

* ಭರೂಚ್ ಜಿಲ್ಲೆಯ ಸ್ವಯಂಸೇವಾ ಕ್ಷೇತ್ರದಲ್ಲಿ ೧೯೯೪–೯೫ ಸಾಲಿನಲ್ಲಿ ಅತ್ಯಧಿಕ ಸಂಖ್ಯೆಯ ಕಣ್ಪೊರೆ ಶಸ್ತ್ರಚಿಕಿತ್ಸೆಗಳನ್ನು ನೆರವೇರಿಸಿದ್ದಕ್ಕಾಗಿ ಅಲ್ಲಿನ (ಕೇಂದ್ರ ಸರ್ಕಾರ ಪ್ರಾಯೋಜಿತ) ಅಂಧತ್ವ ನಿಯಂತ್ರಣ ಸಂಘದಿಂದ ಗೌರವಾರ್ಪಣೆ ಮತ್ತು ಸಮುದಾಯ ನೇತ್ರಾರೋಗ್ಯಪಾಲನೆಯಲ್ಲಿ ಸಮುನ್ನತ ಸೇವೆಗಾಗಿ ಭಾರತೀಯ ಸಮುದಾಯ ನೇತ್ರಾರೋಗ್ಯ ಸಂಘದಿಂದ ಪುರಸ್ಕಾರ (೨೦೦೮).

* ಗುಜರಾತ್‌ನ ಗ್ರಾಮೀಣ–ಬುಡಕಟ್ಟು ಜನಾಂಗಗಳ ಶ್ರೇಯಸ್ಸಿನೆಡೆಗೆ ಪ್ರಶಂಸನೀಯ ಕಾಣಿಕೆಗಾಗಿ, ರಾಮಕೃಷ್ಣ ಮಿಷನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್, ಕಲ್ಕತ್ತ ಅವರಿಂದ ವಿವೇಕಾನಂದ ಪದಕ (೨೦೦೬), ಮತ್ತು 'ಸ್ವಾಮಿ ವಿವೇಕಾನಂದರ ಸೇವೆ–ತ್ಯಾಗ ಎಂಬ ಅವಳಿ ಆದರ್ಶಗಳಿಗೆ ಅತ್ಯಂತ ಸಂಗತವಾಗಿ ಪರಿಶ್ರಮಿಸಿದ ಸಮಾಜ ಸೇವಕ' ಎಂದು ಸೇವಾ ರೂರಲ್‌ನ ಸ್ಥಾಪಕ ಮತ್ತು ಭೂತಪೂರ್ವ ನಿರ್ವಾಹಕ–ಟ್ರಸ್ಟಿ ಡಾ. ಅನಿಲ್ ದೇಸಾಯಿ ಅವರಿಗೆ ಕಲ್ಕತ್ತದ ಶ್ರೀ ಬಡಾ ಬಜ಼ಾರ್ ಕುಮಾರ್ ಸಭಾ ಪುಸ್ತಕಾಲಯದಿಂದ ವಿವೇಕಾನಂದ ಸೇವಾ ಪುರಸ್ಕಾರ (೧೯೯೨).

* ಆರೋಗ್ಯೋಪಚಾರ ಮತ್ತು ವೃತ್ತಿಶಿಕ್ಷಣ ಕ್ಷೇತ್ರಗಳಲ್ಲಿ ಜಾಗತಿಕ ಜ್ಞಾನಭಂಡಾರಕ್ಕೆ ಮತ್ತು ಭಾರತೀಯರ ಕ್ಷೇಮಾಭಿವೃದ್ಧಿಗೆ ವಿಶಿಷ್ಟ ಕಾಣಿಕೆಗಳನ್ನು ನೀಡಿದ್ದಕ್ಕಾಗಿ ಬೋಚಾಸಣ್‌ವಾಸೀ ಶ್ರೀ ಅಕ್ಷರ ಪುರುಷೋತ್ತಮ ಸ್ವಾಮಿ ನಾರಾಯಣ ಸಂಸ್ಥಾನದಿಂದ ಸನ್ಮಾನ (೧೯೯೨).

* ನಿರ್ಗತಿಕ ರೋಗಿಗಳಿಗೆ ೨೫ ವರ್ಷಗಳಿಗೂ ಮೇಲ್ಪಟ್ಟು ಉದಾರ ಮತ್ತು ಉತ್ತಮ ನೇತ್ರಾರೋಗ್ಯ ಸೇವೆಯನ್ನು ಸಲ್ಲಿಸಿದ್ದಕ್ಕಾಗಿ ಗುಜರಾತ್ ದಿವ್ಯಜೀವನ ಸಂಘ ಮತ್ತು ಅಹ್ಮದಾಬಾದ್‌ನ ಶಿವಾನಂದ ಆಶ್ರಮದವರಿಂದ 'ಶಿವಾನಂದ ರತ್ನ' ಬಿರುದು.

**ಮುಂಬರುವ ಪಯಣಕ್ಕೆ ಆದರದ ಆಹ್ವಾನ**

ಸೇವಾ ರೂರಲ್ ಸಾಗಿಬಂದಿರುವ ಮೂವತ್ತೆರಡು ವರ್ಷಗಳ ನಿಡಿದಾದ–ಕಡಿದಾದ ಹಾದಿಯತ್ತಲೊಮ್ಮೆ ಬಾಗಿದರೆ ಕಾಣಸಿಗುವುದು ಅದರ ಮುಂದಿನ ಓಟಕ್ಕೆ ಪ್ರೇರಕವಾಗುವ ಗೆಲವು ನೋಟವಷ್ಟೇ. ಈ ಮುನ್ನಡೆಯಲ್ಲಿ – ಅಂದರೆ, ದರಿದ್ರನಾರಾಯಣನ ಏಳಿಗೆಯ ಮುಂದುವರೆದ ಸೇವಾರ್ಥದಲ್ಲಿ ಪಾಲ್ಗೊಂಡು, ಅದರ ಸಫಲತೆಗೆ ಕಾರಣರಾಗಲು ಸಂಸ್ಥೆಯು ಸರ್ವರಿಗೂ ಸ್ವಾಗತ ಬಯಸುತ್ತದೆ. ತಮ್ಮ ವೃತ್ತಿಕ ಕೈಂಕರ್ಯದ ಮೂಲಕ ಕೈಜೋಡಿಸಬಯಸುವ ಭಾರತೀಯ ಮತ್ತು ವಿದೇಶೀ ವಿದ್ಯಾರ್ಥಿಗಳಿಗೂ ಮತ್ತು ಇತರ ಸ್ವಯಂಸೇವಕರಿಗೂ ಇಲ್ಲಿ ಅನೇಕ ಅವಕಾಶಗಳಿವೆ. ಹಾಗೆಯೇ, ಖಚಿತ ಉದ್ದೇಶಗಳಿಗೆ ಧನದಾನ ಮಾಡಲಿಚ್ಛಿಸುವವರಿಗೂ ಇಲ್ಲಿ ಅಪೂರ್ವ ಯೋಜನೆಗಳಿವೆ.

---

# ಗಿರಿಜನರ ನಾಡಿನಲ್ಲಿ ಬೆಳಕು : ಅಲಾಂಗ್ -

**ವಂದನಾ ಸತೀಶ್**

**ರಾಮಕೃಷ್ಣ ಮಿಷನ್ ಭಾರತದ ಈಶಾನ್ಯ ರಾಜ್ಯಗಳಲ್ಲಿರುವ ಗಿರಿಜನರಿಗೆ ಶಿಕ್ಷಣವನ್ನು ನೀಡುವ ಸ್ತುತ್ಯ ಕಾರ್ಯವನ್ನು ಮಾಡುತ್ತಿದೆ. ಸ್ವಾಮಿ ವಿವೇಕಾನಂದರ ಆದರ್ಶದ ಅತ್ಯುತ್ತಮ ಅನುಷ್ಠಾನವ-ಾದ ಈ ಕಾರ್ಯದ ರೋಚಕ ಕಥೆ ಯನ್ನು ವಿವರಿಸಿರುವ ಲೇಖಕಿ ಬೆಂಗಳೂರು ನಿವಾಸಿಗಳು; ಉತ್ತಮ ಬರಹಗಾರರು.**

ಸ್ವಾಮಿ ವಿವೇಕಾನಂದರ ವ್ಯಕ್ತಿತ್ವವನ್ನು ನೆನೆದೊಡನೆ ನಮಗೆ ಥಟ್ಟನೆ ಹೊಳೆಯುವ ಅಂಶಗಳೆಂದರೆ ಅವರಲ್ಲಿದ್ದ ಕೆಚ್ಚೆದೆ ಮತ್ತು ಅಪಾರವಾದ ಜೀವಕಾರುಣ್ಯ. ಜೀವನಲ್ಲಿ ಶಿವನನ್ನು ಕಂಡು ನರನೇ ನಾರಾಯಣ ಎಂದ ಅವರು ದೀನದುಃಖಿಗಳ ಸೇವೆಗಿಂತ ಮಿಗಿಲಾದ ಶ್ರೇಷ್ಠ ಪೂಜೆ ಮತ್ತೊಂದಿಲ್ಲ ಎಂದೇ ನಂಬಿದ್ದರು. ಅವರಲ್ಲಿ ಮನುಕುಲದ, ಅದರಲ್ಲೂ ದೀನದಲಿತರ ಮೇಲಿನ ಪ್ರೇಮ ಎಷ್ಟು ಗಾಢವಾಗಿತ್ತೆಂದರೆ, "ನನಗೆ ಮೋಕ್ಷವೇ ಬೇಡ. ದುಃಖಿಗಳ ಕಣ್ಣೀರೊರೆಸಲು ನಾನು ಮತ್ತೆ ಮತ್ತೆ ಜನ್ಮವೆತ್ತಿ ಬರಲು ಬಯಸುತ್ತೇನೆ" ಎಂದು ನುಡಿದಿದ್ದರು. ಸ್ವಾಮೀಜಿಯವರು ಕರುಣಾಮಯಿಗಳು. ಅಂದಿನ ಸಮಾಜದಲ್ಲಿದ್ದ ನ್ಯೂನತೆಗಳ ಬಗ್ಗೆ ಅತೀವ ಕಳಕಳಿ ಹೊಂದಿದ್ದ ಅವರು ಹಲವು ಶತಮಾನಗಳಿಂದ ಶೋಷಣೆಗೊಳಗಾದ ದೀನದಲಿತರ ಉದ್ಧಾರದ ಬಗ್ಗೆ ಸದಾ ಚಿಂತಿಸುತ್ತಿದ್ದರು. ಅವರ ಉನ್ನತಿಗೆ ಶಿಕ್ಷಣವೊಂದೇ ಪರಿಹಾರವೆಂದು ಪ್ರತಿಪಾದಿಸುತ್ತಿದ್ದರು. ಈ ವಿಷಯದಲ್ಲಿ ಅವರ ಮನಸ್ಸು ಅದೆಷ್ಟು ಮರುಗುತ್ತಿತ್ತೆಂದರೆ, ಸ್ವಾಮೀಜಿ ಹೀಗೆ ಹೇಳುತ್ತಾರೆ: "ವಿದ್ಯೆ, ವಿದ್ಯೆ ಮತ್ತು ವಿದ್ಯೆಯೊಂದೇ ಏಕೈಕ ಪರಿಹಾರ. ಯೂರೋಪಿನ ದೇಶಗಳಲ್ಲಿ ಪ್ರಯಾಣ ಮಾಡುತ್ತಿದ್ದಾಗ ಅತಿ ದೀನರಿಗೂ ಅಲ್ಲಿ ಲಭಿಸಿರುವ ಸೌಕರ್ಯ ಮತ್ತು ವಿದ್ಯೆ – ಇವುಗಳನ್ನು ಕಂಡಾಗ, ನನ್ನ ದೇಶದ ಬಡಜನರ ಸ್ಥಿತಿಯು ನನಗೆ ನೆನಪಾಗಿ ಕಂಬನಿಯನ್ನು ಸುರಿಸುತ್ತಿದ್ದೆ. ಈ ವ್ಯತ್ಯಾಸ ಹೇಗೆ ಆಯಿತು ಎಂದು ಚಿಂತಿಸಿದಾಗ ನನಗೆ ಸಿಕ್ಕಿದ ಉತ್ತರವೇ ವಿದ್ಯೆ" (*ಕೃತಿಶ್ರೇಣಿ*, ೪ : ೪೯೦).

ಹೀಗೆ ನಮ್ಮ ದೇಶದ ಜ್ವಲಂತ ಸಮಸ್ಯೆಗಳ ಬಗ್ಗೆ ತೀವ್ರವಾಗಿ ಚಿಂತಿಸಿ, ಹಲವು ಪರಿಹಾರಗಳನ್ನು ಸೂಚಿಸಿದ ಸ್ವಾಮೀಜಿಯವರು ಅವುಗಳನ್ನು ಕಾರ್ಯರೂಪದಲ್ಲಿಳಿಸಲು ಸ್ಥಾಪಿಸಿದ ಸಂಸ್ಥೆಯೇ ರಾಮಕೃಷ್ಣ ಮಹಾಸಂಘ. ಮಹಾಸಂಘಕ್ಕೆ ಸ್ವಾಮೀಜಿ ನೀಡಿದ ಸೂತ್ರವೆಂದರೆ **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'**. ಇದರ ಅರ್ಥವೆಂದರೆ, 'ತನ್ನ ಮೋಕ್ಷಕ್ಕಾಗಿ ಮತ್ತು ಜಗತ್ತಿನ ಹಿತಕ್ಕಾಗಿ' ಎಂದು. "ಹಳ್ಳಿಯಿಂದ ಹಳ್ಳಿಗೆ ತಿರುಗಿ, ಮಾನವಕಲ್ಯಾಣಕ್ಕಾಗಿ ಮತ್ತು ಒಟ್ಟಾರೆ ಜಗದ ಒಳಿತಿಗಾಗಿ ಶ್ರಮಿಸಿರಿ", "ಇತರರ ಉದ್ಧಾರಕ್ಕಾಗಿ ನೀವು ನರಕಕ್ಕೆ ಹೋಗಲೂ ಸಿದ್ಧರಾಗಿ" ಎಂದು ಸಂಘದ ಸಂನ್ಯಾಸಿಗಳಲ್ಲಿ ಸ್ವಾಮೀಜಿ ಉದಾತ್ತ ಧ್ಯೇಯವನ್ನು ತುಂಬಿದರು. ಮಹಾಸಂಘ ಪ್ರಾರಂಭವಾಗಿ ಇಂದಿಗೆ ನೂರಾ ಹದಿನೈದು ವರ್ಷಗಳು ಸಂದಿದೆ. ಮಹಾಸಂಘದ ಅನೇಕ ಸಂನ್ಯಾಸಿಗಳು, ಸ್ವಾಮಿ ವಿವೇಕಾನಂದರು ನೀಡಿದ ಧ್ಯೇಯಕ್ಕೆ ಬದ್ಧರಾಗಿ, ತಮ್ಮ ಸರ್ವಸ್ವವನ್ನೂ ಜನಹಿತಕ್ಕಾಗಿ ಸಮರ್ಪಿಸಿ, ಧೈರ್ಯ ಮತ್ತು ಪ್ರೇಮ ತುಂಬಿದ ಹೃದಯ ಹೊತ್ತು ಮಹಾಸಂಘದ ಕಾರ್ಯಕ್ಕಿಳಿದಿದ್ದಾರೆ. ಶಿಕ್ಷಣದೊಡನೆ ಇನ್ನೂ ಅನೇಕ ಸಮಾಜಮುಖಿ ಕಾರ್ಯಗಳಲ್ಲಿ, ಜಗತ್ತಿನೆಲ್ಲೆಡೆ ತೊಡಗಿಕೊಂಡಿರುವ ಈ ತ್ಯಾಗಿಪುರುಷರ ಉದಾತ್ತ ಸೇವಾಕಾರ್ಯ ಅನ್ಯಾದೃಶ.

## ಅರುಣಾಚಲ ಪ್ರದೇಶದಲ್ಲಿ ಶಿಕ್ಷಣ ಕ್ರಾಂತಿ

ಸುಮಾರು ಐದು ದಶಕಗಳ ಹಿಂದೆ, ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದ ಭಾರತ ಚೀನಾ ಗಡಿಯಲ್ಲಿನ ಅರುಣಾಚಲ ಪ್ರದೇಶದಲ್ಲಿ, ರಾಮಕೃಷ್ಣ ಮಹಾಸಂಘವು ನಡೆಸಿದ ಶಿಕ್ಷಣ ಕ್ರಾಂತಿಯು ಬಹಳ ಆಸಕ್ತಿಕರ ಹಾಗೂ ಸ್ಫೂರ್ತಿದಾಯಕವಾಗಿದೆ. ೧೯೬೨ರ ಅಕ್ಟೋಬರ್‌ನಲ್ಲಿ ಹಿಮಾಲಯದ ವಿವಾದಿತ ಗಡಿಯನ್ನು ನೆಪವಾಗಿಟ್ಟುಕೊಂಡು ಚೀನಾ ದೇಶವು ಭಾರತದ ಮೇಲೆ ದಾಳಿ ನಡೆಸಿತು. ಈ ದಾಳಿ ನಡೆದಿದ್ದು ಈಗಿನ ಅರುಣಾಚಲ ಪ್ರದೇಶದ (ಆಗ ಅದನ್ನು ನೇಫಾ – NEFA- North East Frontier Agency ಎಂದು ಕರೆಯಲಾಗುತ್ತಿತ್ತು.) ಈಶಾನ್ಯ ಗಡಿಯಲ್ಲಿ. ೧೪,೦೦೦ ಅಡಿಗಳ ಎತ್ತರದಲ್ಲಿ, ಅತ್ಯಂತ ಪ್ರತಿಕೂಲ ಹವಾಮಾನದಲ್ಲಿ ನಡೆದ ಆ ಯುದ್ಧ ಬಹಳ ಕಠೋರವಾದುದಾಗಿತ್ತು. ಮುಂದಿನ ಒಂದು ತಿಂಗಳಲ್ಲಿ ಚೀನಾದ ಪ್ರಧಾನಿ ಚೌ–ಎನ್–ಲಾಯ್‌ರವರು ಕದನವಿರಾಮವನ್ನು ಘೋಷಿಸಿ ಸೇನೆಯನ್ನು ಹಿಂತೆಗೆದುಕೊಂಡಿದ್ದರು. ಯುದ್ಧವೇನೋ ಕೊನೆಗೊಂಡಿತ್ತು.

# - ನರೋತ್ತಮ ನಗರದ ಜ್ಞಾನದೇಗುಲಗಳು

ಆದರೆ ಅಷ್ಟರಲ್ಲಿ ಸ್ಥಳೀಯ ಗಿರಿಜನರು ಅಲ್ಲಿಯ ಸೈನ್ಯ ಮತ್ತು ಸರ್ಕಾರಿ ವ್ಯವಸ್ಥೆ ತಮ್ಮನ್ನು ರಕ್ಷಿಸಬಲ್ಲವೆಂಬ ಭರವಸೆಯನ್ನೇ ಕಳೆದುಕೊಂಡಿದ್ದರು. 'ಚೀನಾದವರು ಹೇಗೋ ಹಾಗೆಯೇ, ಭಾರತೀಯರೂ ತಮಗೆ ಅನ್ಯರು' ಎಂಬ ಮನೋಭಾವ ಅವರಲ್ಲಿ ಮನೆಮಾಡಿತ್ತು. ಪಕ್ಕದ ನಾಗಾಲ್ಯಾಂಡಿನಲ್ಲಿದ್ದ ಬಂಡಾಯ ಪರಿಸ್ಥಿತಿ ಇಲ್ಲಿಯೂ ಉಂಟಾಗುವ ಸಾಧ್ಯತೆಗಳಿದ್ದವು. ಸರಕಾರಕ್ಕೆ, ಗಿರಿಜನರ ವಿಶ್ವಾಸವನ್ನು ಮರಳಿಪಡೆದು ಸೌಹಾರ್ದದ ವಾತಾವರಣವನ್ನು ತಿಳಿಗೊಳಿಸಬೇಕಾದ ತುರ್ತು ಆವಶ್ಯಕತೆಯಿತ್ತು. ಅಲ್ಲಿದ್ದ ಸರ್ಕಾರಿ ಅಧಿಕಾರಿಗಳು ಮತ್ತು ಕೆಲವು ಹಿರಿಯ ಪ್ರಜೆಗಳು ಆದಿವಾಸಿಗಳಿಗೆ ಸರಿಯಾದ ಶಿಕ್ಷಣ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವುದು ತತ್‌ಕ್ಷಣದ ಆದ್ಯತೆಯೆಂದು ಮನಗಂಡರು.

ಅಂದಿನ ಆಸ್ಸಾಂ ಗವರ್ನರ್ ಆಗಿದ್ದ ಶ್ರೀ ವಿಷ್ಣು ಸಹಾಯ್ ಅವರಿಗೆ, ರಾಮಕೃಷ್ಣ ಸಂಘವನ್ನು ಈಶಾನ್ಯದ ರಾಜ್ಯಗಳಿಗೆ, ಅದರಲ್ಲೂ ಮುಖ್ಯವಾಗಿ ನೇಫಾ ಆದಿವಾಸಿಗಳ ಅಭಿವೃದ್ಧಿಗಾಗಿ ಆಹ್ವಾನಿಸುವ ಮಹದಿಚ್ಛೆ ಇತ್ತು. ಈ ಮಹಾನ್‌ಕಾರ್ಯಕ್ಕೆ ಕೈಹಾಕಿ ಸಫಲಗೊಳಿಸುವ ಸಾಮರ್ಥ್ಯವಿರುವುದು ರಾಮಕೃಷ್ಣ ಮಹಾಸಂಘಕ್ಕೆ ಮಾತ್ರ ಎಂದು ಭಾವಿಸಿದ ಅವರು ಕೇಂದ್ರ ಸರಕಾರಕ್ಕೆ ಈ ವಿಷಯವಾಗಿ ಮನವಿ ಮಾಡಿದರು. ಅದೇ ಸಮಯಕ್ಕೆ ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರ ಮನಸ್ಸಿನಲ್ಲಿಯೂ ಇವೇ ವಿಚಾರಗಳು ಸುಳಿಯುತ್ತಿದ್ದವು. ಆದ್ದರಿಂದ ರಾಜ್ಯಪಾಲರಾದ ಶ್ರೀ ವಿಷ್ಣು ಸಹಾಯ್ ಅವರ ಮನವಿಗೆ ಪ್ರಧಾನಿಯವರು ತತ್‌ಕ್ಷಣವೇ ಒಪ್ಪಿಗೆ ಸೂಚಿಸಿದ್ದಲ್ಲದೆ, ತಾವೇ ಖುದ್ದಾಗಿ ಸಂಘದ ಹಿರಿಯ ಸಂನ್ಯಾಸಿಯೊಬ್ಬರಿಗೆ ಪತ್ರವನ್ನೂ ಬರೆದರು. ೧೯೬೫ರ ಜುಲೈ ೨೧ನೇ ತಾರೀಖು ಬರೆದ ಆ ಪತ್ರದಲ್ಲಿ ಅವರು ಹೀಗೆ ಹೇಳುತ್ತಾರೆ: "ನಾಗಾಲ್ಯಾಂಡ್ ಮತ್ತು ನೇಫಾ ಪ್ರದೇಶಗಳ ನನ್ನ ಮೊದಲ ಭೇಟಿಯಲ್ಲೇ ಅಲ್ಲಿ ನಿಸ್ವಾರ್ಥದಿಂದ ಮಹಾನ್ ಉದ್ದೇಶದ ಕಾರ್ಯಗಳನ್ನು ಕೈಗೊತ್ತಿಕೊಳ್ಳುವ ಸಂಸ್ಥೆಯೊಂದರ ಅಗತ್ಯವಿದೆ ಎಂಬುದು ನನಗೆ ಮನದಟ್ಟಾಯಿತು. ಆಗ ಸಹಜವಾಗಿ ನನ್ನ ಮನಸ್ಸಿಗೆ ಹೊಳೆದದ್ದೇ ರಾಮಕೃಷ್ಣ ಮಿಷನ್. ಕೆಲವು ದಿನಗಳ ಹಿಂದೆ ಅಸ್ಸಾಮಿನ ಗವರ್ನರ್ ಆದ ಶ್ರೀ ವಿಷ್ಣು ಸಹಾಯ್‌ರಿಂದ ನನಗೊಂದು ಪತ್ರ ಬಂದಿದೆ. ಅದರಲ್ಲಿ ಅವರು ರಾಮಕೃಷ್ಣ ಮಿಷನ್ನಿನ ಸನ್ಯಾಸಿಗಳು ನೇಫಾಗೆ ಬಂದು, ಶಿಕ್ಷಣ ಮತ್ತು ವೈದ್ಯಕೀಯ ಕ್ಷೇತ್ರದಲ್ಲಿ ತಮ್ಮ ಸೇವಾಕಾರ್ಯವನ್ನು ಆರಂಭಿಸಬಹುದೇ ಎಂಬ ಇಚ್ಛೆಯನ್ನು ವ್ಯಕ್ತಪಡಿಸಿದ್ದಾರೆ."

ರಾಮಕೃಷ್ಣ ಸಂಘವು ಎಲ್ಲಿಯೂ, ಯಾರ ಸಂಸ್ಕೃತಿಯೊಡನೆಯೂ ಸಂಘರ್ಷಕ್ಕಿಳಿಯದೆ, ಯಾರ ನಂಬಿಕೆಗಳನ್ನೂ ಸಡಲಿಸುವ ಪ್ರಯತ್ನದಲ್ಲಿ ತೊಡಗದೆ, ಪ್ರಾಮಾಣಿಕತೆ ಮತ್ತು ನಿರಪೇಕ್ಷತೆಯಿಂದ ಸಮಾಜೋದ್ಧಾರದ ಚಟುವಟಿಕೆಗಳಲ್ಲಿ ತೊಡಗಿದ್ದರಿಂದ, ಸಂಘದ ಬಗ್ಗೆ ಎಲ್ಲ ಸ್ತರದ ಜನರಿಗೂ ಅತೀವ ಭಕ್ತಿ-ಗೌರವಗಳಿದ್ದವು. ಹೀಗಾಗಿ ಪ್ರಧಾನಿಯವರಿಂದ ಈ ಆಹ್ವಾನ ಬಂದಿತ್ತು. ಸಂಘವು ತನಗಿದ್ದ ಅನೇಕ ಅಡೆತಡೆಗಳ ಮಧ್ಯೆಯೂ ಗಿರಿಜನರ ಬಾಳಿನಲ್ಲಿ ಜ್ಞಾನದೀಪವನ್ನು ಬೆಳಗುವ ಈ ಕಾರ್ಯಕ್ಕೆ ತನ್ನ ಒಪ್ಪಿಗೆಯನ್ನು ಸೂಚಿಸಿತು. ಅದೇ ಪ್ರಕಾರ, ೧೯೬೬ರ ಜುಲೈ ತಿಂಗಳಿನಲ್ಲಿ ಪಶ್ಚಿಮ ಸಿಯಾಂಗ್ ಜಿಲ್ಲೆಯ 'ಅಲಾಂಗ್' ಹಾಗೂ ೧೯೭೧ರ ಜುಲೈ ತಿಂಗಳಿನಲ್ಲಿ ತಿರಪ್ ಜಿಲ್ಲೆಯ 'ನರೋತ್ತಮ ನಗರ' ಎಂಬಲ್ಲಿ ಎರಡು ಶೈಕ್ಷಣಿಕ ಸಂಸ್ಥೆಗಳನ್ನು ಮತ್ತು ೧೯೭೯ರಲ್ಲಿ ಇಟಾನಗರದಲ್ಲಿ ಆಧುನಿಕ ಸೌಲಭ್ಯಗಳುಳ್ಳ ಆಸ್ಪತ್ರೆಯೊಂದನ್ನು ಆರಂಭಿಸಿತು.

## ಅಲಾಂಗ್ ಶಿಕ್ಷಣ ಸಂಸ್ಥೆ

೧೯೬೬ರಲ್ಲಿ ಸ್ವಾಮಿ ನಾಗೇಶಾನಂದರು ಅಲಾಂಗ್‌ನಲ್ಲಿ ಶಾಲೆಯ ಕೆಲಸಕ್ಕಾಗಿ ಬಂದಿಳಿದರು. ಸ್ಥಳೀಯ ಆದಿವಾಸಿಗಳು ಮತ್ತು ಅಲ್ಲಿಯ ಜಿಲ್ಲಾಧಿಕಾರಿಗಳೊಂದಿಗೆ ನಡೆದ ದೀರ್ಘ ಕಾಲದ ಹಲವು ಸುತ್ತುಗಳ ಚರ್ಚೆಗಳ ನಂತರ ಅಲ್ಲೊಂದು ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ವಸತಿ ಶಾಲೆಯನ್ನು ತೆರೆಯಲು ನಿರ್ಧರಿಸಿದರು. ಅದೊಂದು ಪ್ರಯೋಗಾತ್ಮಕ ಪ್ರಯತ್ನವಾಗಿತ್ತು. ಅದೇಕೆ ಇಂಗ್ಲೀಷ್ ಮಾಧ್ಯಮ ಎನ್ನುವುದಕ್ಕೆ ಆಸಕ್ತಿಕರ ಹಿನ್ನೆಲೆಯಿದೆ! ಚೀನಾ ಯುದ್ಧದ ನಂತರ ಆದಿವಾಸಿಗಳು ಸರಕಾರದಲ್ಲಿ ವಿಶ್ವಾಸ ಕಳೆದುಕೊಂಡ ಸಂದರ್ಭದಲ್ಲಿ, ಸರಕಾರವು ಆದಿವಾಸಿ ನಾಯಕರ ಒಂದು ತಂಡವನ್ನು ಶ್ರೀ ಬೋಕನ್ ಎಟೆ ಎಂಬುವವರ ನೇತೃತ್ವದಲ್ಲಿ ಭಾರತ ದರ್ಶನ ಪ್ರವಾಸಕ್ಕೆಂದು ಕಳುಹಿಸಿತ್ತು. ಆಗ ಅವರಿಗೆ ಆದ ಕೆಲವು ಕಹಿ ಅನುಭವಗಳಿಂದಾಗಿ, ಅವರು ತಿರುಗಿಬಂದ ಮೇಲೆ ತಮ್ಮ ಜನರಿಗೆ, "ನೀವು ಇಂಗ್ಲಿಷ್ ಕಲಿಯಲೇಬೇಕು, ಇಲ್ಲದಿದ್ದರೆ ಹೊರಗೆ ನಿಮ್ಮನ್ನು ನಾಯಿಗಳಷ್ಟು ಕೀಳಾಗಿ ಕಾಣಲಾಗುತ್ತದೆ"

ಎಂದು ಸಾರಿ ಸಾರಿ ಹೇಳತೊಡಗಿದ್ದರು. ತಮಗೊಂದು ಇಂಗ್ಲಿಷ್ ಶಾಲೆ ಬೇಕೇಬೇಕೆಂಬುದು ಅವರ ಬೇಡಿಕೆಯಾಗಿತ್ತು. ಅಲ್ಲಿನ ರಾಮಕೃಷ್ಣ ಆಶ್ರಮದ ಉದ್ಘಾಟನೆಯ ಸಂದರ್ಭದಲ್ಲಿ ಮಾತನಾಡಿದ ಬೋಕನ್ ಎಟೆ, "ನಮಗೆ ಇಂಗ್ಲಿಷ್ ಕಲಿಸಲೆಂದು ನಾವು ರಾಮಕೃಷ್ಣ ಸಂಘವನ್ನು ಇಲ್ಲಿಗೆ ಕರೆತಂದಿದ್ದೇವೆ. ಎಂದಿಗೆ ಅವರು ಅದನ್ನು ನಿಲ್ಲಿಸುವರೋ ಅಂದೇ ಅವರನ್ನು ಇಲ್ಲಿಂದ ಹೊರದಬ್ಬಲಾಗುವುದು" ಎಂದರಂತೆ!

### ಆರಂಭಿಕ ಪರಿಶ್ರಮ

ಹಿಮಾಲಯದ ಪರ್ವತ ಪ್ರದೇಶಗಳಲ್ಲಿ ಹೊರಗಿನಿಂದ ಬರುವ ವ್ಯಕ್ತಿಗಳಾಗಲೀ ಸಂಸ್ಥೆಯಾಗಲೀ ಭೂಮಿಯನ್ನು ಕೊಳ್ಳುವಂತಿರಲಿಲ್ಲ. ಅದು ಸ್ಥಳೀಯರ ಸ್ವತ್ತಾಗಿತ್ತು. ಬಹಳಷ್ಟು ಮನವೊಲಿಸಿದ ನಂತರ ಸ್ಥಳೀಯ ಆದಿವಾಸಿಗಳು ಹಿಂಜರಿಕೆಯಿಂದಲೇ ಅಲಾಂಗ್‌ನ ಹೊರವಲಯದಲ್ಲಿ ಪಾಳುಬಿದ್ದಿದ್ದ ಒಂದು ಭೂಮಿಯನ್ನು ಶಾಲೆಗಾಗಿ ಕೊಡಲೊಪ್ಪಿದರು. ೧೯೬೭ರಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರಿಂದ ಶಾಲೆಯ ಶಂಕುಸ್ಥಾಪನೆಯಾಯಿತು. ಆ ಜಾಗವು ಸಂಪೂರ್ಣ ಜೌಗು ಪ್ರದೇಶವಾಗಿದ್ದು, ದಟ್ಟವಾದ ಪೊದೆ, ಗಿಡಗಂಟೆಗಳು, ನಾಲ್ಕು ಅಡಿ ಎತ್ತರದ ಮುಳ್ಳುಮಯವಾದ ಹುಲ್ಲಿನಿಂದ ತುಂಬಿಹೋಗಿತ್ತು. ಆದಿವಾಸಿಗಳು ತಮ್ಮಲ್ಲಿದ್ದ ಕುಡುಗೋಲೊಂದನ್ನು ಸ್ವಾಮಿಗಳಿಗೆ ಕೊಟ್ಟು, ಇದರಿಂದ ಏನಾದರೂ ಮಾಡಿಕೊಳ್ಳಿ ಎಂದರಂತೆ! ನಗರದಲ್ಲಿ ಬೆಳೆದಿದ್ದ ಸ್ವಾಮಿಗಳಿಗೆ ಕುಡುಗೋಲನ್ನು ಉಪಯೋಗಿಸಿಯೇ ಗೊತ್ತಿರಲಿಲ್ಲ! ಆದರೆ ಅವರು ಎದೆಗುಂದಲಿಲ್ಲ. ತಾವೊಬ್ಬರೇ ಛಲ ಬಿಡದೆ, ದಿನವಿಡೀ ಕೆಲಸದಲ್ಲಿ ತೊಡಗಿದರು. ಸ್ಥಳೀಯ ಜನ ಕೌತುಕ ದಿಂದ ದೂರ ನಿಂತು ನೋಡಿದರು ಮಾತ್ರ. ಹೀಗೆಯೇ ಸ್ವಾಮಿಗಳ ಒಂದು ತಿಂಗಳ ಅವಿರತ ಪರಿಶ್ರಮದಿಂದ, ಭೂಮಿಯ ಒಂದು ಭಾಗ ಹಸನಾಯಿತು. ಅವರ ದೃಢನಿರ್ಧಾರ ಕಂಡ ಜನರು ನಿಧಾನವಾಗಿ ತಾವೂ ಕೆಲಸಕ್ಕೆ ಕೈಹಾಕತೊಡಗಿದರು.


ಅಲಾಂಗ್ ಶಾಲೆಯು ಪ್ರಾರಂಭವಾಗಿದ್ದು ಈ ಕಟ್ಟಡದಲ್ಲಿ

ಅವರೆಲ್ಲರ ಸಹಾಯದಿಂದ ಕೆಲವು ದಿನಗಳಲ್ಲಿ, ಬಿದಿರಿನಿಂದ ಕಟ್ಟಿದ ಶಾಲಾ ಕಟ್ಟಡ, ಹುಡುಗರಿಗಾಗಿ ವಸತಿಗೃಹ, ಸಭಾಂಗಣ ಮತ್ತು ಸ್ವಾಮಿಗಳು ಇರಲೊಂದು ಕೋಣೆ – ಇವಿಷ್ಟು ತಯಾರಾದವು. ಅಷ್ಟರಲ್ಲಿ ಸ್ವಾಮಿಗಳ ಮೇಲೆ ಸ್ಥಳೀಯ ಜನರ ವಿಶ್ವಾಸ ವೃದ್ಧಿಸತೊಡಗಿತು. ಸಂಭ್ರಮಾಚರಣೆಗಳ ಮಧ್ಯೆ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಾಲೆಯೊಂದು ಪ್ರಾರಂಭವಾಯಿತು. ಒಟ್ಟು ನೂರು ಜನ ಹುಡುಗ ಹುಡುಗಿಯರು ಶಾಲೆಗೂ, ಐವತ್ತು ಹುಡುಗರು ಹಾಸ್ಟೆಲಿಗೂ ದಾಖಲಾದರು. ಊರಲ್ಲೆಲ್ಲ ಶಾಲೆಯದೇ ಮಾತು! ತಮ್ಮ ದಣಿವರಿಯದ ಪ್ರಯತ್ನದಿಂದಾಗಿ ಸ್ವಾಮಿಗಳು ಸ್ವಲ್ಪ ಸಮಯದಲ್ಲಿಯೇ ಜನರ ವಿಶ್ವಾಸವನ್ನು ಗಳಿಸುವಲ್ಲಿ ಯಶಸ್ವಿಯಾಗಿದ್ದರು. ದುರದೃಷ್ಟವಶಾತ್ ಆಗ ಅವರು ತೀವ್ರ ಅನಾರೋಗ್ಯಕ್ಕೀಡಾಗಿದ್ದರಿಂದ, ಸ್ವಾಮಿ ಕೀರ್ತಿದಾನಂದರು ಅವರ ಬದಲಿಗೆ ಅಲ್ಲಿಗೆ ಬಂದರು. ಅದಾದ ಮೂರು ತಿಂಗಳಲ್ಲಿ ಶಾಲೆಯನ್ನು ಬೆಟ್ಟದ ಮೇಲಿನ ಇನ್ನೊಂದು ಸ್ಥಳಕ್ಕೆ ವರ್ಗಾಯಿಸಲಾಯಿತು.

ಶಾಲೆ ಮತ್ತು ವಸತಿಗೃಹಗಳನ್ನು ನಡೆಸಿಕೊಂಡು ಹೋಗುವುದು ಸುಲಭದ ಮಾತಾಗಿರಲಿಲ್ಲ. ಆರಂಭದಲ್ಲಿ ಗಿರಿಜನರ ವಿಶ್ವಾಸ ಗಳಿಸುವುದು ಬಹಳ ಕಷ್ಟವಿತ್ತು. ಮಾಂಸ, ಮದಿರೆಗಳು ದೈನಂದಿನ ಆಹಾರದ ಭಾಗವಾಗಿದ್ದ ಮತ್ತು ಬಹುಪತ್ನಿತ್ವ ಸಾಮಾನ್ಯವಾಗಿದ್ದ ಆದಿವಾಸಿಗಳಿಗೆ ಮಾಂಸ, ಮೊಟ್ಟೆಗಳನ್ನೇ ಮುಟ್ಟದ, ಮದುವೆಯಾಗಿರದ, ಬೋಳು ತಲೆಯ ಕಾವಿಧಾರಿ ಸಂನ್ಯಾಸಿಗಳು ವಿಚಿತ್ರವಾಗಿ ಕಾಣುತ್ತಿದ್ದರು! ಪ್ರತಿಯೊಂದನ್ನೂ ಸಂದೇಹದಿಂದಲೇ ನೋಡುತ್ತಿದ್ದ ಆ ಜನರಿಗೆ ಈ ಸಂನ್ಯಾಸಿಗಳಲ್ಲಿ ಎಳ್ಳಷ್ಟೂ ನಂಬಿಕೆಯಾಗಲಿ, ಗೌರವವಾಗಲಿ ಇರಲಿಲ್ಲ. ಹಿಂದೂ ಧರ್ಮ ಪ್ರಚಾರದ ಉದ್ದೇಶವಿಟ್ಟುಕೊಂಡೇ ಇವರಿಲ್ಲಿ ಬಂದಿದ್ದಾರೆಂಬುದು ಅವರ ಅನಿಸಿಕೆಯಾಗಿತ್ತು. ಬೋಕನ್ ಎಟೆ ಇವರಿಬ್ಬರ ಮಧ್ಯದ ಕೊಂಡಿಯಾಗಿದ್ದು, ತನ್ನ ಜನರ ವಿಶ್ವಾಸ, ನಂಬಿಕೆಗಳನ್ನು ಗಳಿಸಿಕೊಡಲು ಪ್ರಯತ್ನಿಸುತ್ತಿದ್ದರು. ಆದರೂ ಕ್ರೈಸ್ತ ಮಿಷನರಿಗಳ ಪ್ರಭಾವಕ್ಕೊಳಗಾಗಿದ್ದ ಒಂದು ಪಂಗಡದ ಗಿರಿಜನರಿಗೆ, ರಾಮಕೃಷ್ಣ ಸಂಘ ಅಲ್ಲಿ ತಲೆಯೆತ್ತುವುದು ಎಳ್ಳಷ್ಟೂ ಇಷ್ಟವಿರಲಿಲ್ಲ. ಸಂಘ ಅಲ್ಲಿರುವುದು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮಾತ್ರ ಎಂದು ನಂಬಲು ಅವರು ಸಿದ್ಧರಿರಲಿಲ್ಲ. ಇವರು ಆಗಾಗ್ಗೆ ಸಾಕಷ್ಟು ತೊಂದರೆಗಳನ್ನೊಡ್ಡುತ್ತಲೇ ಇದ್ದರು.

ಸಂಘವನ್ನು ತನ್ನ ಉದ್ದೇಶಕ್ಕಾಗಿ ಅಲ್ಲಿಗೆ ಕರೆತಂದಿದ್ದ ಸರಕಾರ, ಕೈಲಾದ ಸಹಕಾರ, ಬೆಂಬಲಗಳನ್ನು ನೀಡುತ್ತಿತ್ತಾದರೂ, ಅದಕ್ಕೆ ತನ್ನದೇ ಆದ ಮಿತಿಗಳಿದ್ದವು. ಭರವಸೆ ಕೊಟ್ಟಷ್ಟು ಹಣದ ಸಹಾಯ ಯಾವಾಗಲೂ ಸಿಗುತ್ತಿರಲಿಲ್ಲ. ಅಲ್ಲಿನ ಪ್ರತಿಯೊಬ್ಬ ಸೇನಾಧಿಕಾರಿ ಬದಲಾದಾಗಲೂ ಅನಿಶ್ಚಿತ ಪರಿಸ್ಥಿತಿ, ಆತಂಕಗಳಿರುತ್ತಿದ್ದವು. ಸಂಘದ ಘನ ಉದ್ದೇಶವನ್ನರಿಯದ ಎಷ್ಟೋ ಅಧಿಕಾರಿಗಳು ಅಸಹಕಾರವನ್ನು ತೋರುತ್ತಿದ್ದರು. ಆಶ್ರಮದ ಸಂನ್ಯಾಸಿಗಳಲ್ಲಿ ತಪ್ಪು ಹುಡುಕಿ ದೂಷಿಸುವ, ಅವರ ಪ್ರಾಮಾಣಿಕತೆಯನ್ನು ಸಂದೇಹಿಸುವ ಹಲವು ಘಟನೆಗಳು ನಡೆದವು. ವಿದ್ಯುಚ್ಛಕ್ತಿಯಿಲ್ಲದ, ಶೌಚಾಲಯಗಳಿಲ್ಲದ, ಆಹಾರ ವಸ್ತುಗಳ ಕೊರತೆಯಿದ್ದ ಪರಿಸ್ಥಿತಿಯಿತ್ತು. ಅಗತ್ಯವಸ್ತುಗಳು ಸಿಗುತ್ತಿದ್ದ ದಿಬ್ರೂಘರ್ ನಗರ ಇದ್ದದ್ದು ನೂರು ಮೈಲುಗಳ ಅಂತರದಲ್ಲಿ. ಇವೆಲ್ಲವುಗಳ ಜೊತೆಗೆ ಇನ್ನೂ ಅನೇಕ ಸಾಮಾಜಿಕ, ಸಾಂಸ್ಕೃತಿಕ ಕಿರಿಕಿರಿಗಳಿದ್ದವು. ಆದರೆ ಸ್ವಾಮಿಗಳು ಇದಾವುದಕ್ಕೂ ಅಂಜಲಿಲ್ಲ, ಅಳುಕಲಿಲ್ಲ. "ಪರರಿಗಾಗಿ ಜೀವಿಸುವವನು ಮಾತ್ರ ಜೀವಂತವಿದ್ದಂತೆ, ಇತರರು ಬದುಕಿದ್ದೂ ಸತ್ತಂತೆ... ಶ್ರೀಮಂತಿಕೆಯ ಕ್ರೂರ, ನಿರ್ಲಜ್ಜ ಅಟ್ಟಹಾಸ ಅಡಗಲಿ; ಬಿದ್ದವರಿಗಾಗಿ, ಸಾವಿರಾರು ವರುಷ ತುಳಿಸಿಕೊಂಡ ದೀನಜೀವಿಗಳಿಗಾಗಿ ದುಡಿಯಿರಿ" ಎಂಬ ಸ್ವಾಮಿ ವಿವೇಕಾನಂದರ ಧೀರವಾಣಿಯನ್ನು ಮೈಮನಗಳಲ್ಲಿ ತುಂಬಿಕೊಂಡು, ಆ ಅಸೀಮ ಶಕ್ತಿಯಿಂದ ಪ್ರೇರಿತರಾದ ಸಂಘದ ಸಂನ್ಯಾಸಿಗಳು ಯಾವ

ಪ್ರತಿರೋಧಗಳಿಗೂ ಹೆದರದೆ, ತಮ್ಮ ಗುರಿಸಾಧನೆಗಾಗಿ ಟೊಂಕಕಟ್ಟಿ ನಿಂತಿದ್ದರು. ಸ್ವಾಮಿ ವಿವೇಕಾನಂದರ, "ಪ್ರತಿಯೊಂದರಲ್ಲೂ ತಪ್ಪು ಹುಡುಕುವ ಜನರು ಎಲ್ಲೆಡೆಯೂ ಇದ್ದಾರೆ. ಎಲ್ಲರನ್ನೂ ತೃಪ್ತಿಪಡಿಸಬಲ್ಲವನು ಒಬ್ಬನೂ ಇಲ್ಲ. ಧೈರ್ಯವಾಗಿ ಎಲ್ಲವನ್ನೂ ಎದುರಿಸಿ. ಒಳಿತಿರಲಿ ಕೆಡುಕಿರಲಿ, ಎಲ್ಲವನ್ನೂ ಸ್ವಾಗತಿಸಿ. ಇಡೀ ವಿಶ್ವವೇ ನನ್ನೆದುರಾಗಲಿ, ಅದರಿಂದ ನನಗೇನು?! ನಾನು ಅವಿಚಲವಾದ ಪರಮಶಾಂತನು" ಎಂಬ ಮಾತು ಸಂನ್ಯಾಸಿಗಳಲ್ಲಿ ಅಲೌಕಿಕ ಧೈರ್ಯ ಮತ್ತು ಶಕ್ತಿಯನ್ನು ತುಂಬಿತ್ತು.



## ಕತ್ತಲೆಯಿಂದ ಬೆಳಕಿನತ್ತ

ಹೊರಜಗತ್ತಿನ ಪರಿಚಯವೇ ಇಲ್ಲದೆ ಕಾಡಿನಲ್ಲಿ ಬೆಳೆದ ಮಕ್ಕಳು ಶಾಲೆಗೆ ಬಂದಾಗ ಕೊಳೆಬಟ್ಟೆಗಳನ್ನು ಧರಿಸಿ ಮೈಯೆಲ್ಲಾ ಧೂಳು ತುಂಬಿ, ಹಲವು ದಿನಗಳು ಸ್ನಾನವಿಲ್ಲದೆ ಕೊಳಕಾಗಿರುತ್ತಿದ್ದರು. ಅವರಿಗೆ ವಸತಿಗೃಹದಲ್ಲಿ ಹಲ್ಲುಜ್ಜುವುದು, ಸ್ನಾನ ಮಾಡುವುದು, ತಲೆ ಬಾಚುವುದು ಮೊದಲುಗೊಂಡು ಎಲ್ಲವನ್ನೂ ಕಲಿಸಬೇಕಿತ್ತು. ಸ್ವಾಮೀಜಿಯವರು ಇದನ್ನೆಲ್ಲಾ ತಾವೇ ಸ್ವತಃ ನಿಂತು, ಕಾಳಜಿ ವಹಿಸಿ ಪ್ರೀತಿಯಿಂದ ಕಲಿಸುತ್ತಿದ್ದರು. ಬಂದ ಕೆಲವು ದಿನಗಳಲ್ಲಿ ಮಕ್ಕಳು ಸ್ವಚ್ಛವಾಗಿ, ಹೊಸ ಬಟ್ಟೆಗಳಲ್ಲಿ, ತಮ್ಮ ಪ್ರಕೃತಿದತ್ತ ಹೊಳೆಯುವ ಬಣ್ಣ ಮತ್ತು ಸುಂದರವದನದಿಂದ ಕಂಗೊಳಿಸುತ್ತಿದ್ದರು! ಅವರಲ್ಲಿದ್ದ ದಿವ್ಯತ್ವವನ್ನು ಹೊರತರುವ ಮೊದಲ ಪ್ರಯತ್ನ ಇದಾಗಿತ್ತು ಎನ್ನುತ್ತಾರೆ ಸ್ವಾಮಿಗಳು! ಯಾವ ಬಂಧನವೂ ಇಲ್ಲದೆ, ಹಾಯಾಗಿ ಮನಸೋ ಇಚ್ಛೆ ಕಾಡಿನಲ್ಲಿ ಓಡಾಡಿಕೊಂಡಿದ್ದ ಮಕ್ಕಳಿಗೆ, ಶಿಸ್ತನ್ನು ಪಾಲಿಸುವುದು, ಒಂದು ಕಡೆ ಕುಳಿತು ಪಾಠ ಕೇಳಿಸಿಕೊಳ್ಳುವುದು, ಓದಿ ಬರೆಯುವುದು – ಇವೆಲ್ಲಾ ಮೊದಮೊದಲಿಗೆ ಕಷ್ಟದ ಕೆಲಸಗಳೇ ಆಗಿದ್ದವು. ಓದಿನ ಬಗ್ಗೆ ಸ್ವಾಮೀಜಿ ಕೊಡುತ್ತಿದ್ದ ಒತ್ತು ಅವರ ಬುದ್ಧಿಗೆ ನಿಲುಕದ್ದಾಗಿತ್ತು. ಆದರೆ, ಸ್ವಾಮೀಜಿಯವರ ಸತತ ಪರಿಶ್ರಮ, ತಾಳ್ಮೆ ಮತ್ತು ಪ್ರೇಮ ತುಂಬಿದ ವರ್ತನೆಯಿಂದಾಗಿ ಮಕ್ಕಳು ಕ್ರಮೇಣ ಎಲ್ಲದಕ್ಕೂ ಹೊಂದಿಕೊಂಡರು. ಓದಿನ ಹಿನ್ನೆಲೆಯಿಲ್ಲದ್ದಕ್ಕಾಗಿ ಹೆಚ್ಚಿನ ಪ್ರಯತ್ನ ದಿಂದ ಅವರು ಕಷ್ಟಪಟ್ಟು ಕಲಿಯಬೇಕಿತ್ತು. ಸ್ವಾಮೀಜಿ ಮತ್ತು ಶಿಕ್ಷಕರು ಸಾಧ್ಯವಾದಷ್ಟು ವಿವಿಧ ರೀತಿಯ ಕಲಿಸುವ ವಿಧಾನಗಳನ್ನು ಅನುಸರಿಸಿ ಮಕ್ಕಳನ್ನು ಪ್ರೋತ್ಸಾಹಿಸುತ್ತಿದ್ದರು. ಮಕ್ಕಳಲ್ಲಿದ್ದ ವಿವಿಧ ಪ್ರತಿಭೆಗಳನ್ನು ಗುರುತಿಸಿ ಅದಕ್ಕೆ ತಕ್ಕ ಅವಕಾಶಗಳನ್ನು ಕಲ್ಪಿಸುತ್ತಿದ್ದರು. ಹೆಚ್ಚಿನ ಮಕ್ಕಳು ಕಲಿಯುವುದರಲ್ಲಿ ಆಸಕ್ತಿ ತೋರ ತೊಡಗಿದರು. ಆದಿವಾಸಿಗಳಲ್ಲಿ ಹುಟ್ಟಿನಿಂದ ಇರುತ್ತಿದ್ದ ಕಲಿಕಾ ಸಾಮರ್ಥ್ಯಕ್ಕೆ ಅಲ್ಲಿ ತಕ್ಕ ಪ್ರೋತ್ಸಾಹ, ತರಬೇತಿ ದೊರೆತು, ಮಕ್ಕಳ ಪ್ರತಿಭೆ ಎಲ್ಲರೆದುರೂ ಪ್ರಕಾಶಿಸಿತು.

## ಪ್ರಶಂಸೆಯ ಹೂಮಳೆ

ಅಲಾಂಗಿನ ರಾಮಕೃಷ್ಣ ಆಶ್ರಮದ ಶಾಲೆ ಬರಬರುತ್ತಾ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿತ್ತು. ಜಿಲ್ಲೆಗೆ ಬಂದ ಯಾವುದೇ ಗಣ್ಯರೂ ಶಾಲೆಗೆ ಭೇಟಿ ನೀಡದೇ ಹೋಗುತ್ತಿರಲಿಲ್ಲ. ಹೆಸರು ಕೇಳಿಯೇ ಅನೇಕ ಮಕ್ಕಳು, ತಾವೂ ಆ ಶಾಲೆಗೆ ಸೇರಬೇಕೆಂದು ಬಹುದೂರದಿಂದ ಬರತೊಡಗಿದರು. ಈ ಶಾಲೆ ದೇಶದ ಯಾವುದೇ ಆಧುನಿಕ ಶಾಲೆಗೆ ಸರಿಸಾಟಿಯಾಗಿದೆ ಎಂಬ ಮಾತು ಗಣ್ಯರ ಬಾಯಲ್ಲಿ ಬರುತ್ತಿತ್ತು. ಒಮ್ಮೆ ಆದಿವಾಸಿ ಪಂಗಡ ವೊಂದರ ನಾಯಕನ ಪತ್ನಿ ತಮ್ಮ ಪತಿಯೊಂದಿಗೆ ಶಾಲೆಗೆ ಭೇಟಿಯಿತ್ತ ನಂತರ ಉದ್ಗರಿಸಿದ್ದು ಹೀಗೆ: "ಶಾಲೆ, ವಸತಿಗೃಹ, ಸ್ವಾಮೀಜಿಯವರ ವಾಸದ ಕೋಣೆ – ಇವೆಲ್ಲದರ ಸುತ್ತಮುತ್ತಲಿನ ಪರಿಸರ ಅದೆಷ್ಟು ಶುಭ್ರ, ಸುಂದರ ಮತ್ತು ಪವಿತ್ರವಾಗಿತ್ತೆಂದರೆ ನನ್ನ ಕೊಳೆಯಾದ ಕಾಲುಗಳನ್ನು ಅಲ್ಲಿಡಲು ನನಗೆ ಮನಸ್ಸೇ ಬರಲಿಲ್ಲ."

ಮೊದಮೊದಲು ಸಂಶಯದ ದೃಷ್ಟಿಯಿಂದ ಕಂಡಿದ್ದ ಗಿರಿ ಜನರು ರಾಮಕೃಷ್ಣ ಮಿಷನ್ನು ಸಾಧಿಸಿದ ಈ ಯಶಸ್ಸನ್ನು ನೋಡಿ, ನೇಫಾದ ಇತರ ಭಾಗಗಳಿಗೂ ಈ ಕೆಲಸವನ್ನು ಪ್ರಸರಿಸಲು ಉತ್ಸುಕರಾದರು. ಅಲ್ಲಿದ್ದ ಆಡಳಿತವರ್ಗವೂ ಇದರ ಬಗ್ಗೆ ಅಷ್ಟೇ ಉತ್ಸಾಹ ತೋರಿ ಈ ಥರದ ಇನ್ನೊಂದು ಸಂಸ್ಥೆಯನ್ನು ತಿರಪ್ ಜಿಲ್ಲೆಯಲ್ಲಿ ಮರುವರ್ಷ ಪ್ರಾರಂಭಿಸಲು ಒತ್ತಾಯಿಸಿದರು. ಸ್ವಾಮಿ ವಿವೇಕಾನಂದರ ಮಾತಿನಂತೆ ಕಗ್ಗಾಡಿನ ಹಳ್ಳಿಯಲ್ಲಿ ಸದ್ದಿಲ್ಲದೆ ಜ್ಞಾನದೀವಿಗೆ ಹೊತ್ತಿಸಿ ಬೆಳಕನ್ನು ಪ್ರಸರಿಸಿದ ಈ ಕೆಲಸಕ್ಕೆ, ಸ್ವಾಮಿ ಕೀರ್ತಿದಾನಂದರು ದಾಖಲಿಸಿರುವ ಈ ಘಟನೆಯಲ್ಲಿ, ಅಲ್ಲಿಯ ವಿದ್ಯಾರ್ಥಿಯೊಬ್ಬನಿಂದಲೇ ಬಂದ ಈ ಮಾತು ಬಹುಸೂಕ್ತವಾದ ಗೌರವವೆನಿಸುತ್ತದೆ. ಅದನ್ನು ಅವರದೇ ಮಾತುಗಳಲ್ಲಿ ಕೇಳೋಣ:

"ಟುಂಕೆನ್ ಬಾಗ್ರಾ ಎಂಬ ನಮ್ಮ ಶಾಲೆಯ ವಿದ್ಯಾರ್ಥಿಯೊಬ್ಬ (ಈಗ ಆತ ಅಡ್ವೋಕೇಟ್ ಆಗಿದ್ದಾನೆ) ೧೯೮೩–೮೪ರಲ್ಲಿ ಪಂಜಾಬ್ ವಿಶ್ವವಿದ್ಯಾನಿಲಯಕ್ಕೆ ಸ್ನಾತಕೋತ್ತರ ಪದವಿಗೆಂದು ಬಂದಿದ್ದನು. ಆಗ ನಾನು ಚಂಡೀಘರದ ರಾಮಕೃಷ್ಣ ಆಶ್ರಮದ ಮುಖ್ಯಸ್ಥನಾಗಿದ್ದೆ. ಅವನು ನನ್ನ ಬಳಿ ಬಂದು ಪಶ್ಚಾತ್ತಾಪದ ದನಿಯಲ್ಲಿ ತಪ್ಪೊಪ್ಪಿಕೊಳ್ಳುವಂತೆ ಹೇಳಿದ: "ಸ್ವಾಮೀಜಿ, ನೀವು ಆಗ ವಿದ್ಯಾಭ್ಯಾಸದ ಕಡೆಗೆ ಪೂರ್ಣ ಗಮನ ಹರಿಸುವಂತೆ ಹೇಳು ವಾಗೆಲ್ಲಾ ನಮಗೆ ಸಿಟ್ಟು ಬರುತ್ತಿತ್ತು. ಸ್ವಾಮೀಜಿ ಏಕೆ ನಮ್ಮನ್ನು ಈ ಓದು, ಹೋಂವರ್ಕ್, ಪುಸ್ತಕಗಳು, ಪಾಠಗಳು – ಇವುಗಳ ಗೊಡವೆಯಿಲ್ಲದೆ ಮಜವಾಗಿ ಆಟವಾಡಿಕೊಂಡಿರಲು ಬಿಡುವುದಿಲ್ಲ ಎಂದು ನಿಮ್ಮನ್ನು ಬೈದುಕೊಳ್ಳುತ್ತಿದ್ದೆವು. ನಿಮ್ಮೊಡನೆ ಇರಬೇಕಾಗಿ ಬಂದ ನಮ್ಮ ವಿಧಿಯನ್ನು ಹಳಿದುಕೊಳ್ಳುತ್ತಿದ್ದೆವು. ಆದರೆ ಈಗ






ರಾಮಕೃಷ್ಣ ಮಿಷನ್ನಿನ ಶಾಲೆಯನ್ನು ಬಿಟ್ಟ ಮೇಲೆ ನಾವು ಏನನ್ನೂ ಕಲಿತೇ ಇಲ್ಲ ಎಂಬುದು ನಮಗೆ ಗೊತ್ತಾಗಿದೆ. ನಮ್ಮಲ್ಲಿ ಈಗ ಡಿಗ್ರಿಗಳಿವೆ. ಆದರೆ ಅವು ಕಸಕ್ಕಿಂತ ಕಳಪೆ; ಅದಿಲ್ಲದೆಯೇ ನಾವು ಅಲ್ಲಿ ಹೆಚ್ಚು ಕಲಿತಿದ್ದೆವು.' "

ವಿದ್ಯೆಯ ಗಂಧ–ಗಾಳಿಯೂ ಇಲ್ಲದೆ, ಗುಡ್ಡಗಾಡು ಪ್ರದೇಶಗಳ ಕಾಡಿನಲ್ಲಿ ಓಡಾಡಿಕೊಂಡಿದ್ದ ಮಕ್ಕಳಿಗೆ ವಿದ್ಯೆಯ ಬೆಳಕು ನೀಡಿ, ಜೀವನದ ರೀತಿನೀತಿಗಳನ್ನು ಕಲಿಸಿ, ಸುಪ್ತ ಪ್ರತಿಭೆಗಳನ್ನು ಹೊರ ಗೆಳೆದು, ಅವರ ಬದುಕುಗಳು ಅರಳುವಂತೆ ಮಾಡಿದ ರಾಮಕೃಷ್ಣ ಸಂಘದ ಕೆಲಸ ಅದ್ವಿತೀಯ, ಅನುಕರಣೀಯ.

## ನರೋತ್ತಮ ನಗರದಲ್ಲಿ ಸಂಘದ ಕಾರ್ಯ

ಅಲಾಂಗ್‌ನ ಶಾಲೆಯಿಂದ ಸ್ಥಳೀಯ ಜನರು ಮತ್ತು ಅಧಿಕಾರಿಗಳು ಬಹಳಷ್ಟು ಪ್ರಭಾವಿತರಾಗಿದ್ದರು. ೧೯೭೧ರಲ್ಲಿ ಆಸ್ಸಾಂ ಸರಕಾರದ ಸಲಹಾಕಾರರಾಗಿದ್ದ ಶ್ರೀ ಕೆ. ಕೆ. ಎ. ರಾಜಾರವರು ಅರುಣಾಚಲದ ತಿರಪ್ ಜಿಲ್ಲೆಯನ್ನು ಅಭಿವೃದ್ಧಿಪಡಿಸುವಲ್ಲಿ ತೀವ್ರ ಆಸಕ್ತಿ ಹೊಂದಿದ್ದರು. ಅದಲ್ಲದೆ ಅಲ್ಲಿನ ಮುಖ್ಯ ಜನಾಂಗವಾದ ನಾಮ್ಸಂಗ್ ಬುಡಕಟ್ಟಿನ ಮುಖ್ಯಸ್ಥರಾದ ಶ್ರೀ ಡ್ಯಾಂಗ್ವಾಂಗ್ ಲೊವಾಂಗ್ಡಾಂಗ್ ಎಂಬುವವರು ಆ ಕಾಲದಲ್ಲಿಯೇ ಆಧುನಿಕ ಶಿಕ್ಷಣದ ಮಹತ್ವವನ್ನು ಅರಿತು, ಅದೊಂದೇ ತಮ್ಮ ಜನಾಂಗವನ್ನು ಇತರರಿಗೆ ಸಮವಾಗಿಸಬಲ್ಲುದು ಎಂಬ ದೂರದೃಷ್ಟಿ ಉಳ್ಳವರಾಗಿದ್ದರು. ಅವರು ನಾಮ್ಸಂಗ್ ಕಾಡಿನ ಪ್ರದೇಶದ ೨೫೦ ಎಕರೆ ಭೂಮಿಯನ್ನು ರಾಮಕೃಷ್ಣ ಸಂಘಕ್ಕೆ ದಾನವಾಗಿ ಕೊಟ್ಟರು. ರಾಮಕೃಷ್ಣ ಸಂಘದಲ್ಲಿ ಆಗ ಸಂನ್ಯಾಸಿಗಳ ಕೊರತೆಯಿದ್ದರೂ, ಈ ಉದಾತ್ತ ಕಾರ್ಯಕ್ಕೆ ಇಲ್ಲವೆನ್ನಲಾಗದೆ, ಅಲ್ಲೊಂದು ಶಾಲೆಯನ್ನು ಪ್ರಾರಂಭಿಸಲು ಸಂಘವು ಮುಂದಾಯಿತು.

## ಪ್ರಕೃತಿಯ ಮಡಿಲಲ್ಲಿ ಮಹತ್ಕಾರ್ಯ

ಪ್ರಾಚೀನ ಗುರುಕುಲವನ್ನು ನೆನಪಿಗೆ ತರುವ ಈ ವಿದ್ಯಾಲಯವು ಜನಜಂಗುಳಿಯಿಂದ ದೂರವಾಗಿ ಬೆಟ್ಟದ ಬುಡದ ದಟ್ಟ ಕಾಡಿನ ಮಧ್ಯದಲ್ಲಿರುವ, ನಯನ ಮನೋಹರವಾದ ಸ್ಥಳದಲ್ಲಿ ಸ್ಥಾಪನೆಗೊಂಡಿದೆ. ಈ ಸೊಬಗನ್ನು ಇನ್ನಷ್ಟು ಹೆಚ್ಚಿಸುವಂತೆ ಶಾಲೆಯ ಆವರಣದ ಉತ್ತರದ ಗಡಿಯ ಪಕ್ಕದಲ್ಲೇ ಬೂರಿ ದಿಹಿಂಗ್ ನದಿಯ ಹರಿವಿದೆ.

ಮಿಷನ್ನಿನ ಪ್ರಾಥಮಿಕ ಶಾಲೆಯು ೨೫ ಹುಡುಗಿಯರು ಮತ್ತು ೮೩ ಹುಡುಗರೊಂದಿಗೆ ಆರಂಭವಾಯಿತು. ನಂತರ ೧೯೭೫ರಲ್ಲಿ ಖೋನ್ಸಾದಲ್ಲಿ ರಾಮಕೃಷ್ಣ ಶಾರದಾ ಮಿಷನ್ನಿನ ಶಾಲೆ ಆರಂಭವಾದಾಗ ಹುಡುಗಿಯರನ್ನು ಅಲ್ಲಿಗೆ ಕಳಿಸಲಾಯಿತು. ೧೯೮೬ರಲ್ಲಿ ಮಾಧ್ಯಮಿಕ ಶಾಲೆಯೂ ಆರಂಭವಾಗಿ ನಂತರದ ದಿನಗಳಲ್ಲಿ, ಇನ್ನೂ ಬೇರೆ ಬೇರೆ ತೆರನಾಗಿ ಕೆಲಸ ವಿಸ್ತರಿಸುತ್ತಲೇ ಹೋಯಿತು. ಈ ಶಾಲೆಗಳು ಇಂಗ್ಲಿಷ್ ಮಾಧ್ಯಮದಲ್ಲಿದ್ದು ಸಿ.ಬಿ.ಎಸ್.ಇ. ಪಠ್ಯಕ್ರಮವನ್ನು ಅಳವಡಿಸಿಕೊಂಡಿವೆ.

ಶಾಲೆಗೆ ಸೇರುವ ಗಿರಿಜನ ಮಕ್ಕಳು ಎಂತಹ ಹಿನ್ನೆಲೆಯಿಂದ ಬರುತ್ತಿದ್ದರೆಂಬುದಕ್ಕೆ ಇಲ್ಲೊಂದು ಉದಾಹರಣೆ ! ಈಗ ಉನ್ನತ ಹುದ್ದೆಯಲ್ಲಿದ್ದು ಜನನಾಯಕರೆನಿಸಿಕೊಂಡಿರುವ ಶಾಲೆಯ ಹಳೆಯ ವಿದ್ಯಾರ್ಥಿಯೊಬ್ಬರು ತಮ್ಮ ಅನುಭವವನ್ನು ಹೀಗೆ ನೆನಪಿಸಿಕೊಳ್ಳುತ್ತಾರೆ:

"ನನ್ನ ತಂದೆ ನನ್ನನ್ನು ಒಂದು ಕುರಿಯಂತೆ ಎಳೆದುಕೊಂಡು ಬಂದು ಇಲ್ಲಿ ಓದಲೆಂದು ಬಿಟ್ಟುಹೋದರು. ನಾನು ಅಲ್ಲಿದ್ದ ಸಂನ್ಯಾಸಿಗಳು ಮತ್ತು ಶಿಕ್ಷಕರನ್ನು ಮೂಸಿ ನೋಡುತ್ತಿದ್ದೆ. ಅವರ ವಾಸನೆ ನಮ್ಮ ತಂದೆ ಮತ್ತು ಚಿಕ್ಕಪ್ಪಂದಿರಿಗಿಂತ ಬೇರೆಯಾಗಿರುತ್ತಿತ್ತು. ನಾನು ಮೊದಲ ಬಾರಿ ಶೌಚದ ಕೋಣೆಗೆ ಹೋದಾಗ ನನಗದು ವಿಚಿತ್ರವಾಗಿ ಕಾಣಿಸಿತ್ತು. ಇಷ್ಟೊಂದು ದೊಡ್ಡ ಬಯಲೇ ಇರುವಾಗ, ಈ ಚಿಕ್ಕ ಕೋಣೆಯೊಳಗೇಕೆ ಹೋಗಬೇಕು ಎನಿಸಿತ್ತು. ಅಲ್ಲಿ ಫ್ಲಷ್ ಮಾಡುವುದನ್ನು ತೋರಿಸಿದಾಗ, ಅದರೊಳಗಿಂದ ನುಗ್ಗಿದ ನೀರಿನ ಸದ್ದಿಗೆ ನಾನು ಬೆದರಿ, ಟೀಚರನ್ನು ತಳ್ಳಿ 'ಅಪಾಯ ಅಪಾಯ' ಎಂದು ಕೂಗುತ್ತಾ ಹೊರಗೆ ಓಡಿದೆ !! "

ದಿನಾಲೂ ಸಂಜೆ ನಮ್ಮ ಶಿಕ್ಷಕರು ಗೋಡೆಯ ಮೇಲೆ ಬೆರಳನ್ನು ಒತ್ತಿದೊಡನೆ ಎಲ್ಲೆಡೆ ಬೆಳಕು ಹರಡುತ್ತಿತ್ತು. ಮುಂದಿನ ಬಾರಿ ಮನೆಗೆ ಹೋಗುವಾಗ ಈ ಬೆಳಕನ್ನು ನನ್ನ ಮನೆಗೂ ಕೊಂಡೊಯ್ಯಬೇಕೆಂದು ಯೋಚಿಸಿದೆ. ರಜೆಯಲ್ಲಿ ಹಾಸ್ಟೆಲಿನ ರೂಮಿನಲ್ಲಿದ್ದ ಬಲ್ಬನ್ನು ತೆಗೆದುಕೊಂಡು ಹೋಗಿ ನಮ್ಮ ಗುಡಿಸಿಲಿನ ಬಿದಿರಿನ ಗೋಡೆಗೆ ಸಿಕ್ಕಿಸಿದೆ. ಗೋಡೆಯ ಎಲ್ಲ ಕಡೆ ಬೆರಳಿಂದ ಒತ್ತುತ್ತಾ ಹೋದೆ. ಬೆಳಕು ಬರಲೇ ಇಲ್ಲ. ವಿದ್ಯುತ್ ಇಲ್ಲದ ಆ ಗುಡಿಸಿಲಿನಲ್ಲಿ ಬೆಳಕೆಲ್ಲಿಂದ ತಾನೇ ಬರಬೇಕು!"

ಇಂಥ ಹಿನ್ನೆಲೆಯ ಮಕ್ಕಳು ಆಶ್ರಮದ ಶಾಲೆಯಲ್ಲಿ ಕಲಿತು, ಇಂದು ನಾಗರಿಕ ಸಮಾಜದ ಉನ್ನತ ಹುದ್ದೆಯಲ್ಲಿದ್ದಾರೆಂದರೆ, ಗಿರಿಜನರ ಬದುಕಿನಲ್ಲಿ ರಾಮಕೃಷ್ಣ ಸಂಘವು ತಂದ ಪರಿವರ್ತನೆಯ ಅಗಾಧತೆಯನ್ನು ನಾವು ಊಹಿಸಿಕೊಳ್ಳಬಹುದು.



ಸ್ವಾಮಿ ಭವಹರಾನಂದಜಿ ಹೀಗೆ ಹೇಳುತ್ತಾರೆ: "ಗಿರಿಜನರ ಮಕ್ಕಳು ಹೊರನೋಟಕ್ಕೆ ಒರಟರೆಂದೆನಿಸಬಹುದು. ಆದರೆ ತಾಳ್ಮೆ ಮತ್ತು ಧೈರ್ಯದಿಂದ ಅವರ ಮನಸ್ಸಿನಾಳಕ್ಕಿಳಿದು ನೋಡಿದರೆ ಹಸುಮಕ್ಕಳಂತಹ ಸರಳತೆ, ಪ್ರಕೃತಿಯನ್ನು ತಿಳಿದುಕೊಳ್ಳುವ ಕೌತುಕ, ಶಾಂತತೆ – ಇವನ್ನು ಅವರಲ್ಲಿ ಕಾಣುತ್ತೇವೆ. ಆದರೆ ಅವರಿಗೆ ಯಾವುದೇ ಒಂದು ವಿಷಯವನ್ನು ಆಳಕ್ಕಿಳಿದು ಯೋಚಿಸುವ ಸಹನೆ ಇಲ್ಲ. ಮಕ್ಕಳ ನೇರ ಸ್ವಭಾವದೊಂದಿಗೆ ವ್ಯವಹರಿಸಲು, ಪ್ರಾಮಾಣಿಕತೆ ಮತ್ತು ನೈತಿಕ ಧೈರ್ಯ ಬೇಕು. ಬಹುಶಃ ರಾಮಕೃಷ್ಣ ಆಶ್ರಮದ ಸಂನ್ಯಾಸಿಗಳಿಗಿರುವ ನೈತಿಕ ದಿಟ್ಟತೆ, ಪ್ರೇಮ ಮತ್ತು ತಾಳ್ಮೆಗಳೇ ಅವರನ್ನು ಈ ಮಕ್ಕಳೊಡನೆ ಒಂದುಗೂಡಿಸಿರಬೇಕು."

ಸುಸಜ್ಜಿತ ಶಾಲೆಯಲ್ಲದೆ, ಡೈರಿ ಮತ್ತು ಕೋಳಿ ಸಾಕಣಿಕೆ ಕೇಂದ್ರ, ಔಷಧಿ ಸಸ್ಯಗಳ ಉದ್ಯಾನವನ, ವಯಸ್ಕರ ಶಿಕ್ಷಣ, ಸುತ್ತಲಿನ ಗ್ರಾಮಾಭಿವೃದ್ಧಿ ಯೋಜನೆಗಳು, ಗಿರಿಜನ ಯುವಕರಿಗೆ ಔದ್ಯೋಗಿಕ ತರಬೇತಿ – ಹೀಗೆ ಹಲವಾರು ಸಮಾಜಮುಖಿ ಕಾರ್ಯಗಳಲ್ಲಿ ಇಲ್ಲಿಯ ಆಶ್ರಮ ತೊಡಗಿಕೊಂಡಿದೆ.

## ಸಾರ್ಥಕ ಸೇವೆ

ಗುಡ್ಡಗಾಡಿನ ದಟ್ಟ ಅರಣ್ಯಗಳ ಮಧ್ಯೆ, ಗಿರಿಜನ ಮಕ್ಕಳಿಗಾಗಿ ಸ್ಥಾಪಿತವಾದ ಈ ಎರಡೂ ಶಾಲೆಗಳು ಪಟ್ಟಣಗಳ ಆಧುನಿಕ ಸೌಲಭ್ಯಗಳುಳ್ಳ ಸುಸಜ್ಜಿತ ಶಾಲೆಗಳಿಗಿಂತ ಯಾವುದೇ ರೀತಿಯಲ್ಲಿ ಕಡಿಮೆಯಿಲ್ಲದಂತೆ ಯಶಸ್ವಿಯಾಗಿ ನಡೆಯುತ್ತಿವೆ. ಬಹಳಷ್ಟು ವರ್ಷಗಳಿಂದ ಅತ್ಯುತ್ತಮ ಶೈಕ್ಷಣಿಕ ಫಲಿತಾಂಶವನ್ನು ಗಳಿಸಿವೆ. ಮಕ್ಕಳು ಅನೇಕ ರಾಷ್ಟ್ರಮಟ್ಟದ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಸರ್ಕಾರದ ಮೆರಿಟ್ ಸ್ಕಾಲರ್‌ಶಿಪ್‌ಗಳೂ ಸಿಕ್ಕಿವೆ. ಇಲ್ಲಿನ ಮಕ್ಕಳು, ಶೈಕ್ಷಣಿಕವಾಗಿ ಮಾತ್ರವಲ್ಲದೆ



ಆಟ, ಕಲೆ, ಮತ್ತು ಇನ್ನೂ ಹಲವಾರು ಪಠ್ಯೇತರ ಕ್ಷೇತ್ರಗಳಲ್ಲಿ ರಾಷ್ಟ್ರಮಟ್ಟದ ಅನೇಕ ಪದಕಗಳನ್ನು ಗಳಿಸಿದ್ದಾರೆ. ಇಲ್ಲಿಂದ ಹೊರಬಂದ ಹಲವಾರು ವಿದ್ಯಾರ್ಥಿಗಳು ರಾಷ್ಟ್ರೀಯ ಮಟ್ಟದಲ್ಲಿ ಉನ್ನತ ಹುದ್ದೆಗಳಲ್ಲಿದ್ದು, ಯಶಸ್ವೀ ಜೀವನವನ್ನು ಕಟ್ಟಿಕೊಂಡಿದ್ದಾರೆ.

೨೦ನೆಯ ಶತಮಾನದಲ್ಲೂ ಅವಿದ್ಯೆಯ ಅಂಧಕಾರದಲ್ಲಿ ಆದಿಮಾನವರಂತೆ ಜೀವಿಸುತ್ತಿದ್ದ ಗಿರಿಜನರ ಸಮೀಪ ತೆರಳಿ, ತಮ್ಮ ಸುಖವನ್ನು ಲೆಕ್ಕಿಸದೆ, ದುರ್ಗಮ ಪ್ರದೇಶಗಳಲ್ಲಿ ಸುಂದರ ಶಾಲೆಗಳನ್ನು ಕಟ್ಟಿ, ಬೆಳೆಸಿ, ಕಗ್ಗಲ್ಲಿನಂತಿದ್ದ ಮಕ್ಕಳನ್ನು ಪ್ರೇಮ, ನಿಸ್ವಾರ್ಥ ಮತ್ತು ತಾಳ್ಮೆಗಳ ಉಳಿಯಿಂದ ಕೆತ್ತಿ, ಸುಂದರ ಶಿಲ್ಪಗಳನ್ನಾಗಿಸಿ ರಾಷ್ಟ್ರಕ್ಕೆ ಅರ್ಪಿಸುತ್ತಿರುವ ರಾಮಕೃಷ್ಣ ಸಂಘದ ಸಂನ್ಯಾಸಿಗಳ ಸಾರ್ಥಕ ಸೇವೆ ವರ್ಣನಾತೀತ. "ನಮ್ಮ ಸಮಾಜದಲ್ಲಿರುವ ಕೆಡುಕುಗಳಿಗೆಲ್ಲಾ ಶಿಕ್ಷಣವೊಂದೇ ರಾಮಬಾಣ" ಎಂದ ಸ್ವಾಮಿ ವಿವೇಕಾನಂದರ ಮಾತನ್ನು ಅಕ್ಷರಶಃ ಪಾಲಿಸುತ್ತಿರುವ ಇದಕ್ಕಿಂತ ಮಿಗಿಲಾದ ಭಗವಂತನ ಸೇವೆ ಇನ್ನಾವುದಿದೆ?




# ಕೊಯಮತ್ತೂರಿನ ವಿದ್ಯಾಲಯ

ಎಸ್. ಆರ್. ರಮೇಶ್



**ರಾಮಕೃಷ್ಣ ಮಿಷನ್ನಿನ ಪ್ರತಿಯೊಂದು ಶಿಕ್ಷಣಸಂಸ್ಥೆಗೂ ತನ್ನದೇ ಆದ ವಿಶಿಷ್ಟ ಸೇವಾಗಾಥೆ ಇದೆ. ಮಹಾಸಂಘದ ಅತಿ ದೊಡ್ಡ ಶೈಕ್ಷಣಿಕ ಕೇಂದ್ರವಾದ ಕೊಯಮತ್ತೂರಿನ ರಾಮಕೃಷ್ಣ ವಿದ್ಯಾಲಯದ ರಮಣೀಯ ಕಥೆಯನ್ನು ಬಣ್ಣಿಸಿರುವ ಲೇಖಕರು, ಮೈಸೂರಿನ ಶ್ರೀರಾಮಕೃಷ್ಣ ವಿದ್ಯಾಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ. ಇವರು ಉತ್ತಮ ವಾಗ್ಮಿಗಳು ಮತ್ತು ಬರಹಗಾರರು.**

ಭಾರತದಲ್ಲಿ ಕ್ರಿಯಾರೂಪಿಯಾದ ಸ್ವಾಮಿ ವಿವೇಕಾನಂದರ ವಿರಾಟ್ ಚೈತನ್ಯದ ಸಾಂಸ್ಥಿಕ ರೂಪಗಳನ್ನು ಪರಿಗಣಿಸಿದರೆ, ಒಂದು ಬೃಹತ್ ಪ್ರತಿಮೆಯಾಗಿ ನಮ್ಮ ಕಣ್ಣೆದುರು ಮೈವೆತ್ತಿ ನಿಂತಿರುವುದು ಕೊಯಮತ್ತೂರಿನ **'ರಾಮಕೃಷ್ಣ ಮಿಷನ್ ವಿದ್ಯಾಲಯ.'** ಈ ಭವ್ಯಸಂಸ್ಥೆಯ ಆರಂಭ, ಬೆಳವಣಿಗೆ ಮತ್ತು ವಿಕಾಸವೆಲ್ಲವೂ ಅದ್ಭುತವಾದದ್ದು, ಅಧ್ಯಯನಯೋಗ್ಯವಾದದ್ದು. ರಾಮಕೃಷ್ಣ ಮಿಷನ್ ವಿದ್ಯಾಲಯವು ಸ್ವಾತಂತ್ರ್ಯಪೂರ್ವ ಭಾರತದಲ್ಲಿ, ೧೯೩೦ನೇ ಇಸವಿಯಲ್ಲಿ, ಮಹಾಶ್ರದ್ಧಾವಂತರೂ, ದೂರದರ್ಶಿಗಳೂ ಆದ ಶ್ರೀ ಟಿ. ಎಸ್. ಅವಿನಾಶಿಲಿಂಗಮ್ ಚೆಟ್ಟಿಯಾರ್ ಅವರು ಉದಕಮಂಡಲಂ ರಾಮಕೃಷ್ಣ ಆಶ್ರಮದ ಅಂದಿನ ಅಧ್ಯಕ್ಷರಾದ ಸ್ವಾಮಿ ಚಿದ್ಭವಾನಂದಜಿ ಮಹಾರಾಜ್‌ರೊಂದಿಗೆ ನಡೆಸಿದ ನಿರಂತರ ಜಿಜ್ಞಾಸೆ ಮತ್ತು ಸಂವಾದದ ಫಲವಾಗಿ ಹುಟ್ಟಿಕೊಂಡಿತು. ತಮ್ಮ ಈ ಸೇವಾಯಾತ್ರೆಯಲ್ಲಿ ಶ್ರೀ ಅವಿನಾಶಿಲಿಂಗಮ್‌ರವರು ಏಕಾಂಗಿಯಾಗಿರಲಿಲ್ಲ ಎಂಬುದಂತೂ ಸುಸ್ಪಷ್ಟ. ಅವರಿಗೆ ಶ್ರೀರಾಮಕೃಷ್ಣ ಪರಮಹಂಸರ ಕೃಪೆಯ ಆಧಾರವು ನಿರಂತರವಾಗಿದ್ದಿತು. ಆದರೂ ಅವರ ಉಜ್ವಲ ಶ್ರದ್ಧೆ ಮತ್ತು ನಿಷ್ಠೆ ಅಮೋಘವಾದುದು. ಗುರುಮಹಾರಾಜರ ನೇರಶಿಷ್ಯರಾದ, ಮಹಾಪುರುಷರೆಂದೇ ಕರೆಯಲ್ಪಡುವ, ಪರಮಪೂಜ್ಯ ಸ್ವಾಮಿ ಶಿವಾನಂದಜಿ ಮಹಾರಾಜರು ೧೯೨೮ ನವೆಂಬರ್ ೧೯ರಂದು ಶ್ರೀ ಅವಿನಾಶಿ ಲಿಂಗಮ್‌ರವರಿಗೆ ಬರೆದ ಪತ್ರವು ಆಶೀರ್ವಾದ, ಭರವಸೆ, ಬೆಂಬಲಗಳ ಆಗರವನ್ನೇ ಹೊತ್ತುತಂದಿತು. ಅವರು ಆ ಪತ್ರದಲ್ಲಿ ಹೀಗೆ ಹೇಳಿದ್ದರು: "ನೀವು ಈ ಕಾರ್ಯದಲ್ಲಿ ನಿಸ್ವಾರ್ಥವಾಗಿ ನಿರತರಾದರೆ, ಮುಂದಿನ ಹಂತಗಳಲ್ಲಿ ಹಣವು ತಾನಾಗಿಯೇ ಒದಗಿಬರುವುದು." ಅಂತೂ ಈ ಕನಸು ಸಾಕಾರಗೊಂಡಿತು. ೧೯೩೦ರ ಫೆಬ್ರವರಿ ೩ ರಂದು ಕೊಯಮತ್ತೂರಿನ ಒಂದು ಸಾಧಾರಣ ಹೆಂಚಿನ ಮನೆಯಲ್ಲಿ ವಿದ್ಯಾಲಯವು ತನ್ನ ಕಾರ್ಯಾರಂಭ ಮಾಡಿತು. ದೀನರನ್ನು ಮೇಲೆತ್ತಬೇಕೆಂಬ ಸ್ವಾಮಿ ವಿವೇಕಾನಂದರ ಕರೆಗೆ ನಿದರ್ಶನವಾಗಿ, ಈ ವಿದ್ಯಾಲಯಕ್ಕೆ ಬಂದ ಮೊಟ್ಟಮೊದಲ ವಿದ್ಯಾರ್ಥಿಯು ಹಿಂದುಳಿದ ಹರಿಜನ ಸಮುದಾಯಕ್ಕೆ ಸೇರಿದವನಾಗಿದ್ದನು. ಚೆನ್ನೈ ಮಠದ ಅಂದಿನ ಅಧ್ಯಕ್ಷರಾದ ಪೂಜ್ಯ ಸ್ವಾಮಿ ಯತೀಶ್ವರಾನಂದಜಿ ಮಹಾರಾಜರ ದಿವ್ಯಸನ್ನಿಧಿಯಲ್ಲಿ, ಅನೇಕ ಸ್ಥಳೀಯ ಗಣ್ಯರ ಹಾರೈಕೆಯೊಂದಿಗೆ ಉದ್ಘಾಟನೆಯು ನೆರವೇರಿತು.

# ಬೃಹತ್ ಶೈಕ್ಷಣಿಕ ಸಂಸ್ಥೆ

ವ್ಯಕ್ತಿಯ ಜೀವನದಂತೆಯೇ ಒಂದು ಸಂಸ್ಥೆಯ ಬೆಳವಣಿಗೆ ಕೂಡ ಹೂವಿನ ಹಾಸಿಗೆಯಂತೆ ಸುಗಮವಲ್ಲ. ಅನೇಕ ಏರಿಳಿತಗಳಿಂದ ಈ ಮಾರ್ಗವು ಕೂಡಿರುತ್ತದೆ. ಜವಾಬ್ದಾರಿಯನ್ನು ಹೊತ್ತವರು ಹಲವು ಕಷ್ಟಕಾರ್ಪಣ್ಯಗಳನ್ನು ಎದುರಿಸಬೇಕಾಗಿಬರುತ್ತದೆ. ಅಂದಿನ ದಿನಗಳಲ್ಲಿ ಜನರ ಬಳಿ ಹಣವೇನೂ ಅಪಾರವಾಗಿರಲಿಲ್ಲ. ಶ್ರೀ ಸಿ. ವಿ. ವೆರಿವಡ ಚೆಟ್ಟಿಯಾರ್ ಎಂಬ ಗಣ್ಯರು ನೀಡಿದ ನೂರು ರೂಪಾಯಿ ದೇಣಿಗೆಯೇ ವಿದ್ಯಾಲಯದ ಚಟುವಟಿಕೆಗಳಿಗೆ ಚಾಲನೆ ನೀಡಿತು. ಇಲ್ಲಿಂದ ನಾವು ಶ್ರೀ ಅವಿನಾಶಿಲಿಂಗಮ್ ಚೆಟ್ಟಿಯಾರ್ ಅವರನ್ನು ಎಲ್ಲರೂ ಗೌರವದಿಂದ ಸಂಬೋಧಿಸುವಂತೆ 'ಅಯ್ಯಾ' ಎಂದೇ ಈ ಲೇಖನದಲ್ಲಿ ಕರೆಯೋಣ.

ಆರಂಭದಲ್ಲಿ ಸಂಪನ್ಮೂಲಗಳ ಕೊರತೆಯೇನೋ ಅಪಾರವಾಗಿತ್ತು. ಆದರೆ ದಿವ್ಯತ್ರಯರ ಕೃಪೆ ಅನೇಕ ಧೀಮಂತರ ಮನಸ್ಸನ್ನು ಪ್ರೇರೇಪಿಸಿತು. ಹಲವಾರು ಉದಾರಿಗಳು ತುಂಬು ಹೃದಯದಿಂದ ಅನೇಕ ರೀತಿಯಲ್ಲಿ ನೆರವಾಗತೊಡಗಿದರು. ಅಯ್ಯಾರವರ ತಂದೆ-ತಾಯಿಗಳಾದ ಶ್ರೀ ಕೆ. ಸುಬ್ರಮಣ್ಯ ಅಯ್ಯರ್ ಮತ್ತು ಶ್ರೀಮತಿ ಪಳನಿ ಅಮ್ಮಾಳ್ ದಂಪತಿಗಳು ರೂ. ೧೦,೦೦೧ ಅನ್ನು ತಮ್ಮ ಮಗನಿಗೆ ನೀಡುತ್ತಾ, "ನಿನ್ನ ಪವಿತ್ರ ಕೆಲಸವನ್ನು ಈ ಹಣದಿಂದ ಆರಂಭಿಸು. ದೇವರ ಕೃಪೆಯಿಂದ ಅದು ಮುಂದೆ ಬೆಳೆಯುತ್ತದೆ" ಎಂದು ಹೇಳಿ ಆಶೀರ್ವದಿಸಿದರು. ಪೊದನೂರಿನಲ್ಲಿ ಬಾಡಿಗೆ ಮನೆಯೊಂದರಲ್ಲಿ ನಡೆಯುತ್ತಿದ್ದ ವಿದ್ಯಾಲಯಕ್ಕೆ ಶ್ರೀ ಆರ್. ರಾಮಕೃಷ್ಣ ನಾಯ್ಡು ಅವರು ಆಗಿನ ಕಾಲದಲ್ಲಿಯೇ ೧೪ ಎಕರೆ ಜಾಗವನ್ನು ಪೆರಿಯ ನಾಯಕನಪಾಳ್ಯಂನಲ್ಲಿ ನೀಡಿದರು. ತಾವೇ ಸ್ವತಃ ವಿದ್ಯಾಲಯದ ಖಚಾಂಚಿಗಳೂ ಆಗಿ ಬಹುಕಾಲ ದುಡಿದರು. ವಿದ್ಯಾಲಯವು ಒಂದು ಆವಾಸಿಕ ಶಾಲೆಯಾಗಿ ಬೆಳೆಯಬೇಕೆಂಬ ಹಂಬಲವನ್ನು ಅಯ್ಯಾ ಹೊಂದಿದ್ದರು. ಅದಕ್ಕೆ ಸ್ಪಂದಿಸಿದ ಶ್ರೀ ವಿ. ಸಿ. ವೆಳ್ಳಂಗಿರಿ ಗೌಂಡರ್ ಎಂಬುವವರು ನಾಲ್ಕು ಎಕರೆ ಜಾಗವನ್ನು ದಾನವಾಗಿ ನೀಡಿದರು. ಇದರ ಪರಿಣಾಮವಾಗಿ, ೧೯೩೧ರಲ್ಲಿಯೇ ವಿದ್ಯಾಲಯವು ಒಂದು ಮಾದರಿ ಗುರುಕುಲವಾಯಿತು. ಸ್ವಯಂ ಅಯ್ಯಾರವರ ಸಹೋದರರಾದ ಶ್ರೀ ಟಿ. ಎಸ್. ಕಲ್ಯಾಣಸುಂದರಂ ಚೆಟ್ಟಿಯಾರ್ ಅವರು ವಿದ್ಯಾಲಯದ ಆಡಳಿತಾಧಿಕಾರಿಗಳಾಗಿ ನೇಮಕಗೊಂಡು ಆರಂಭದಿಂದಲೂ ದುಡಿದರು. ೧೯೫೭ರಲ್ಲಿ ತಾವು ಸಾವನ್ನಪ್ಪುವವರೆಗೂ ಅವಿಶ್ರಾಂತವಾಗಿ ಸೇವೆ ಸಲ್ಲಿಸಿದರು. ಇಂತಹ ಮಹನೀಯರುಗಳನ್ನು ಕುರಿತು ಅಯ್ಯಾರವರು ಆಗಾಗ್ಗೆ ಹೇಳುತ್ತಿದ್ದ ಮಾತಿದು: "ಸಂಸ್ಥೆಯ ಉದ್ಧಾರಕ್ಕಾಗಿ ತಮ್ಮನ್ನು ಹೃತ್ಪೂರ್ವಕವಾಗಿ ಅರ್ಪಿಸಿಕೊಂಡ ಜೀವಗಳೇ ವಿದ್ಯಾಲಯದ ನಿಜವಾದ ಆಸ್ತಿ".

ಪೂಜ್ಯ ಸ್ವಾಮಿ ಚಿದ್ಭವಾನಂದಜೀ ಮಹಾರಾಜ್ ರಾಮಕೃಷ್ಣ ಮಿಷನ್ ವಿದ್ಯಾಲಯದ ನಿರ್ವಹಣಾ ಸಮಿತಿಯ ಪ್ರಥಮ ಅಧ್ಯಕ್ಷರಾಗಿ ೧೯೩೦ರಿಂದ ೧೯೪೪ರವರೆಗೆ ಮಾರ್ಗದರ್ಶನ ಮಾಡಿದರು; ಪ್ರಥಮ ಕಾರ್ಯದರ್ಶಿಗಳಾದವರು ಸರ್ವರ ಆದರ, ಗೌರವಗಳಿಗೆ ಪಾತ್ರರಾದ 'ಅಯ್ಯಾ' ಶ್ರೀ ಟಿ.ಎಸ್. ಅವಿನಾಶಿಲಿಂಗಮ್ ಚೆಟ್ಟಿಯಾರ್ (೧೯೩೦-೧೯೪೫ ಮತ್ತು ೧೯೪೯-೧೯೮೬). ಮದ್ರಾಸ್ ಮಠದ ಅಧ್ಯಕ್ಷರಾಗಿದ್ದ ಸ್ವಾಮಿ ತಪಸ್ಯಾನಂದಜಿ ಮಹಾರಾಜ್ ಅವರು ೧೯೮೬ರ ತನಕ ವಿದ್ಯಾಲಯದ ನಿರ್ವಹಣಾ ಸಮಿತಿಯ ಅಧ್ಯಕ್ಷರೂ ಆಗಿದ್ದರು. ಅನಂತರ ಸ್ವತಃ ಅಯ್ಯಾರವರೇ ಅಧ್ಯಕ್ಷರಾಗಿ, ೧೯೯೧ರವರೆಗೂ ಮಾರ್ಗದರ್ಶನ ಮಾಡುತ್ತಾ, ತಮ್ಮ ಬಾಳನ್ನೇ ಈ ಮಹಾಯಜ್ಞಕ್ಕೆ ಸಮರ್ಪಿಸಿದರು.

**೧೯೩೪ರ ಫೆಬ್ರವರಿ ೨** – ವಿದ್ಯಾಲಯದ ಇತಿಹಾಸದಲ್ಲಿಯೇ ಸುವರ್ಣಾಕ್ಷರದಿಂದ ದಾಖಲಿಸಬೇಕಾದ ದಿನ. ಅಯ್ಯಾರವರು ರಾಷ್ಟ್ರಪಿತ ಮಹಾತ್ಮಗಾಂಧಿಯವರನ್ನು ವಿದ್ಯಾಲಯದ ಶಂಕುಸ್ಥಾಪನೆಯನ್ನು ನೆರವೇರಿಸಿಕೊಡಬೇಕೆಂದು ಆಹ್ವಾನಿಸಿದರು. ಆ ಕರೆಗೆ ಓಗೊಟ್ಟ ಪೂಜ್ಯ ಮಹಾತ್ಮ ಗಾಂಧೀಜಿಯವರು ಭದ್ರವಾದ ಬುನಾದಿಯನ್ನು ಈ ಸಂಸ್ಥೆಗೆ ಹಾಕಿಕೊಟ್ಟದ್ದು ಮಾತ್ರವಲ್ಲ, "ವಿದ್ಯಾಲಯದ ವಿದ್ಯಾರ್ಥಿಗಳು ಭಗವಂತನಲ್ಲಿ



ರಾಮಕೃಷ್ಣ ಮಠ ಮತ್ತು ಮಿಷನ್ನಿನ ಏಳನೆಯ ಅಧ್ಯಕ್ಷರಾದ ಪೂಜ್ಯ ಸ್ವಾಮಿ ಶಂಕರಾನಂದಜಿ ಮಹಾರಾಜರು ೧೯೫೭ ರಲ್ಲಿ ನಡೆದ ಗುರುಪೂಜೆಯ ಉತ್ಸವದಲ್ಲಿ ಭಾಗವಹಿಸಿ ಸಂಸ್ಥೆಯನ್ನು ಹರಸಿದರು. ಒಂಬತ್ತನೆಯ ಅಧ್ಯಕ್ಷರಾದ ಪೂಜ್ಯ ಸ್ವಾಮಿ ಮಾಧವಾನಂದಜಿ ಮಹಾರಾಜರು ವಿದ್ಯಾಲಯದ ಕಲಾವಿಭಾಗಕ್ಕೆ ಶಂಕುಸ್ಥಾಪನೆ ನೆರವೇರಿಸಿದರು. ಹತ್ತನೆಯ ಅಧ್ಯಕ್ಷರಾದ ಪೂಜ್ಯ ಸ್ವಾಮಿ ವೀರೇಶ್ವರಾನಂದಜಿ ಮಹಾರಾಜರು ಶ್ರೀ ಟಿ. ಎಸ್. ದಂಡಪಾಣಿ ಚೆಟ್ಟಿಯಾರ್ ಅವರನ್ನು ಪ್ರೋತ್ಸಾಹಿಸಿ, ವಿದ್ಯಾಲಯದ ಅಂಗಣದಲ್ಲಿರುವ 'ವಿನಾಯಕ ದೇವಸ್ಥಾನ' ವನ್ನು ನಿರ್ಮಿಸಲು ಕಾರಣರಾದರು. ನಂತರ ಅವರು ೧೯೬೯ರಲ್ಲಿ ವಿದ್ಯಾಲಯದ ಗ್ರಾಮೀಣ ಶಿಕ್ಷಣಸಂಸ್ಥೆಯ ಘಟಿಕೋತ್ಸವದಲ್ಲಿ ಮತ್ತು ೧೯೭೮ ರಲ್ಲಿ ನಡೆದ ವಿವೇಕಾನಂದ ವಿದ್ಯಾರ್ಥಿನಿಲಯದ ಉದ್ಘಾಟನೆಯಲ್ಲಿ ಪಾಲ್ಗೊಂಡರು. ಹನ್ನೊಂದನೆಯ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಗಂಭೀರಾನಂದಜಿ ಮಹಾರಾಜರು ೧೯೭೦ರಲ್ಲಿ ನಡೆದ ವಿಚಾರಸಂಕಿರಣದಲ್ಲಿ ಉಪಸ್ಥಿತರಿದ್ದರು.

೧೯೮೦ ಸೆಪ್ಟೆಂಬರ್ ೧೫ರಂದು ಜರುಗಿದ ವಿದ್ಯಾಲಯದ ಸುವರ್ಣ ಮಹೋತ್ಸವದಲ್ಲಿ ೧೨ನೆಯ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಭೂತೇಶಾನಂದಜಿ ಮಹಾರಾಜರು ಉಪಸ್ಥಿತರಿದ್ದು, ಆಶೀರ್ವಚನ ನೀಡಿದರು. ೧೯೮೭ ಅಕ್ಟೋಬರ್ ೩೦ ರಂದು ಶ್ರೀರಾಮಕೃಷ್ಣ ಪರಮಹಂಸರ ೧೫೦ನೇ ಜನ್ಮವರ್ಷದ ಸ್ಮಾರಕವಾಗಿ ನಿರ್ಮಾಣವಾಗಲಿರುವ ಭವನದ ಬುನಾದಿಯನ್ನು ಹಾಕಿದವರು ಅಂದಿನ ಉಪಾಧ್ಯಕ್ಷರಾದ ಪೂಜ್ಯ ಸ್ವಾಮಿ ತಪಸ್ಯಾನಂದಜಿ ಮಹಾರಾಜ್ ಮತ್ತು ಪೂಜ್ಯ ಸ್ವಾಮಿ ರಂಗನಾಥಾನಂದಜಿ ಮಹಾರಾಜ್ (೧೩ನೇ ಅಧ್ಯಕ್ಷರು). ಪೂಜ್ಯ ಸ್ವಾಮಿ ಹಿರಣ್ಮಯಾನಂದಜಿ ಮಹಾರಾಜ್, ಪೂಜ್ಯ ಸ್ವಾಮಿ ಸರ್ವಜ್ಞಾನಂದಜಿ ಮಹಾರಾಜ್ ಮತ್ತು ಪಾಲಿಟೆಕ್ನಿಕ್ ಕಾಲೇಜಿನ ಬೆಳ್ಳಿ ಹಬ್ಬದ ಸ್ಮಾರಕ ಭವನವನ್ನು ಉದ್ಘಾಟಿಸಿದ ಪೂಜ್ಯ ಸ್ವಾಮಿ ಗಹನಾನಂದಜೀ ಮಹಾರಾಜ್ – ಹೀಗೆ ಸಂಸ್ಥೆಗೆ ಭೇಟಿ ನೀಡಿದ ಸಾಧುಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

"ಸ್ವಂತ ಮುಕ್ತಿಗಾಗಿ ಮಾತ್ರ ಹಂಬಲಿಸದೆ ವಿಶಾಲವೃಕ್ಷವಾಗಿ ಸಹಸ್ರಾರು ಜೀವರುಗಳಿಗೆ ಆಶ್ರಯವಾಗು" ಎಂದು ಶ್ರೀರಾಮಕೃಷ್ಣರು ಸ್ವಾಮಿ ವಿವೇಕಾನಂದರಿಗೆ ಹೇಳಿದ್ದರು. ಅವರ ಕೃಪೆಯಿಂದ ಮೂರ್ತರೂಪ ತಳೆದ ಈ ವಿದ್ಯಾಲಯವೂ ಸಹಸ್ರ ಸಹಸ್ರ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ, ಅವರಲ್ಲಿ ಜ್ಞಾನವನ್ನು ಉದ್ದೀಪಿಸಿ, ಆತ್ಮವಿಶ್ವಾಸವನ್ನು ತುಂಬಿ, ಭವಿಷ್ಯದ ಬಾಳಿನಲ್ಲಿ ತಮ್ಮ ಕಾಲ ಮೇಲೆ ತಾವು ಸ್ವತಂತ್ರವಾಗಿ ನಿಲ್ಲಲು ನೆರವಾಗುತ್ತಿದೆ.

ಇನ್ನು ಈ ವಿದ್ಯಾಲಯಕ್ಕೆ ಅತಿಥಿಗಳಾಗಿ ಆಗಮಿಸಿ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿಯನ್ನು ತುಂಬಿದ ರಾಷ್ಟ್ರೀಯ ನಾಯಕ

ಶ್ರದ್ಧೆಯುಳ್ಳವರಾಗುತ್ತಾರೆ; ಜೊತೆಗೆ ಅವರು ಸತ್ಯಮಾರ್ಗದಲ್ಲಿ ನಡೆಯುವವರೂ ಆಗಿರುತ್ತಾರೆ" ಎಂದು ಭವಿಷ್ಯ ನುಡಿದರು.

ಈ ಚಿಕ್ಕ ವಿದ್ಯಾಲಯವು ಒಂದು ಬೃಹತ್ ಶೈಕ್ಷಣಿಕ ಸಂಸ್ಥೆಯಾಗಿ ಬೆಳೆಯಬೇಕೆಂಬ ಹಂಬಲ ಮತ್ತು ಕನಸನ್ನು ಹೊಂದಿದ್ದ ಅಯ್ಯಾ ಅವಿನಾಶಿಲಿಂಗಮ್‌ರವರು ಅದನ್ನು ತನ್ನ ಒಂದು ಶಾಖೆಯನ್ನಾಗಿ ಮಾಡಿಕೊಳ್ಳಬೇಕೆಂದು ರಾಮಕೃಷ್ಣ ಮಿಷನ್‌ಗೆ ಮನವಿ ಮಾಡಿಕೊಂಡರು. ಅವರ ಕೋರಿಕೆಯನ್ನು ಪರಿಗಣಿಸಿದ ರಾಮಕೃಷ್ಣ ಮಿಷನ್, ೧೯೩೫ರ ಜನವರಿ ೭ರಂದು ವಿದ್ಯಾಲಯವನ್ನು ತನ್ನ ಸ್ವಂತ ಶಾಖೆಯಾಗಿ ಮಾನ್ಯ ಮಾಡಿತು. ಕೊನೆಗೆ ೧೯೩೬ರಲ್ಲಿ ವಿದ್ಯಾಲಯವನ್ನು ಪೊದನೂರಿನಿಂದ ಪೆರಿಯನಾಯ್ಕನಪಾಳ್ಯಂಗೆ ಸ್ಥಳಾಂತರಿಸಲಾಯಿತು. ಈ ಮೊದಲೇ ತಿಳಿಸಿದಂತೆ ಶ್ರೀ ರಾಮಕೃಷ್ಣ ನಾಯ್ಡುರವರು ದಾನ ಮಾಡಿದ್ದ ೧೪ ಎಕರೆ ಜಾಗವಿದ್ದದ್ದೂ ಅಲ್ಲಿಯೇ! ಸುತ್ತಲೂ ಒಂದು ಮೈಲಿಯವರೆಗೆ ಯಾರೂ ವಾಸ ಮಾಡದೇ ಇದ್ದ ಜಾಗವದು.

ಹೀಗೆ ತನ್ನ ಹುಟ್ಟನ್ನು ಪಡೆದು ಅಂಬೆಗಾಲಿಟ್ಟು, ಬಾಲ ಹೆಜ್ಜೆಗಳನ್ನಿಡುತ್ತಾ ಬೆಳೆದ ವಿದ್ಯಾಲಯವು ರಾಷ್ಟ್ರದಲ್ಲಿಯೇ ಒಂದು ಬೃಹತ್ತಾದ ಶೈಕ್ಷಣಿಕ ಸಂಕೀರ್ಣವಾಗಿ ಬೆಳೆಯಿತು; ಎಲ್ಲರ ಗೌರವಕ್ಕೆ ಪಾತ್ರವಾಯಿತು. ಶಿಶುವಿಹಾರದ ಹಂತದಿಂದ ಡಾಕ್ಟರೇಟ್ ಪದವಿ ನೀಡುವವರೆಗಿನ ಮೌಲ್ಯಾಧಾರಿತ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ೧೫ ವಿಭಿನ್ನ ವಿದ್ಯಾ ಸಂಸ್ಥೆಗಳಿರುವ ಜ್ಞಾನಾರ್ಜನೆಯ ಬೃಹತ್ ತಪೋರಂಗವಾಗಿದೆ ಈ ವಿದ್ಯಾಲಯ.

ಶ್ರೀರಾಮಕೃಷ್ಣರು ಸಾಧಕನಲ್ಲಿ ಮೊಳೆತು ಬೆಳೆಯುವ ಸಸಿಯಂತಿರುವ ಶ್ರದ್ಧಾಭಕ್ತಿಗಳನ್ನು ಬೇಲಿಹಾಕಿ ಸಂರಕ್ಷಿಸುವ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಆಗ ಮಾತ್ರ ಆ ಸಸಿ ಬೆಳೆದು ವಿಶಾಲವಾದ ವೃಕ್ಷವಾಗುತ್ತದೆ. ಅಂತೆಯೇ ರಾಮಕೃಷ್ಣ ಮಹಾಸಂಘದ ಪೂಜನೀಯ ಸ್ವಾಮೀಜಿಗಳ ತಪಸ್ಸಿನ ಶ್ರೀರಕ್ಷೆಯು ಅಯ್ಯಾರವರ ಪ್ರಯತ್ನಕ್ಕೂ, ವಿದ್ಯಾಲಯದ ಬದುಕಿಗೂ ಭಿತ್ತಿಯಾಯಿತು.

ನಕ್ಷತ್ರಗಳ ಮತ್ತು ಧೀಮಂತ ಸಮಾಜ ಸೇವಾಧುರೀಣರ ಪಟ್ಟಿಯೇನೂ ಚಿಕ್ಕ ದಾಗಿಲ್ಲ. ಶಿಕ್ಷಣತಜ್ಞರೂ, ರಾಷ್ಟ್ರಪತಿ ಗಳೂ ಆಗಿದ್ದ ಡಾ. ಸರ್ವೆಪಲ್ಲಿ ರಾಧಾಕೃಷ್ಣನ್ ಅವರು ೧೯೫೩ ಡಿಸೆಂಬರ್ ೧೭ರಂದು ಶ್ರೀಮಾತೆಯವರ ಜನ್ಮಶತಮಾನೋತ್ಸವದಲ್ಲಿ ಪಾಲ್ಗೊಂಡರು. ಹಾಗೆಯೇ, ಅವರು ೧೯೬೩ ಮಾರ್ಚ್ ೩೧ರಂದು ಸ್ವಾಮಿ ವಿವೇಕಾನಂದರ ಜನ್ಮ ಶತಮಾನೋತ್ಸವದಲ್ಲಿ ಉಪಸ್ಥಿತರಿದ್ದು ಸ್ವಾಮಿ ವಿವೇಕಾನಂದ ಶತಮಾನೋತ್ಸವ ಭವನವನ್ನು ಉದ್ಘಾಟಿಸಿದರು. ೧೯೬೦ ರಲ್ಲಿ ಭಾರತದ ರಾಷ್ಟ್ರಪತಿಗಳಾಗಿದ್ದ ಡಾ. ಬಾಬು ರಾಜೇಂದ್ರ ಪ್ರಸಾದರು ಆಗಮಿಸಿ ಗ್ರಾಮೀಣ ಶಿಕ್ಷಣದ ಸ್ನಾತಕೋತ್ತರ ವಿಭಾಗದ ಘಟಿಕೋತ್ಸವದಲ್ಲಿ ಪ್ರಧಾನ ಭಾಷಣ ವನ್ನು ಮಾಡಿದರು. ಬಿಹಾರದ ರಾಜ್ಯಪಾಲರಾಗಿದ್ದ (ನಂತರ ರಾಷ್ಟ್ರಪತಿಗಳಾದರು) ಡಾ. ಜಾಕಿರ್ ಹುಸೇನ್‌ರವರು ಕೂಡಾ ಘಟಿಕೋತ್ಸವ ಮತ್ತು ಸ್ವಾಮೀಜಿಯವರ ಜನ್ಮಶತಮಾನೋತ್ಸವ ಸಮಾರಂಭಗಳಲ್ಲಿ ಭಾಗವಹಿಸಿದರು; ಅಲ್ಲದೆ, ಅಯ್ಯಾರವರ ೭೧ನೇ ಹುಟ್ಟಹಬ್ಬದಲ್ಲಿ ಪಾಲ್ಗೊಂಡು ಅವರನ್ನು ಮನಸಾರೆ ಹರಸಿದರು. ಕೇರಳದ ರಾಜ್ಯಪಾಲರಾಗಿದ್ದ ಶ್ರೀ ವಿ. ವಿ. ಗಿರಿ ಯವರು (ನಂತರ ರಾಷ್ಟ್ರಪತಿಗಳಾದರು) ವಿದ್ಯಾಲಯದ ಪಾಲಿಟೆಕ್ನಿಕ್ ಕಾಲೇಜಿನ ಲಾಲ್‌ಬಹದ್ದೂರ್ ಶಾಸ್ತ್ರಿ ಸಭಾಂಗಣದ ಶಂಕುಸ್ಥಾಪನೆಯನ್ನು ನೆರವೇರಿಸಿದರು.

೧೯೮೦, ಆಗಸ್ಟ್ ೧೫ರಂದು ನಡೆದ ಸಂಸ್ಥೆಯ ಸುವರ್ಣ ಮಹೋತ್ಸವಕ್ಕೆ, ಅಂದಿನ ರಾಷ್ಟ್ರಪತಿಗಳಾಗಿದ್ದ ಶ್ರೀ ನೀಲಂ ಸಂಜೀವರೆಡ್ಡಿಯವರು ಆಗಮಿಸಿ ಹಿರಿಯ ಸಿಬ್ಬಂದಿಗಳಿಗೆ ತಾಮ್ರದ ಪದಕಗಳನ್ನು ವಿತರಿಸಿದರು. ನಂತರ ರಾಷ್ಟ್ರಪತಿಗಳಾದ ಶ್ರೀ ಆರ್. ವೆಂಕಟರಾಮನ್‌ರವರು ವಿದ್ಯಾಲಯದ ವಜ್ರ ಮಹೋತ್ಸವದ ಮುಖ್ಯ ಅತಿಥಿಯಾಗಿದ್ದರು.

ವಿಶೇಷವಾಗಿ ಉಲ್ಲೇಖಿಸಬೇಕಾದ ಘಟನೆ ಯೆಂದರೆ ೧೯೬೩ನೇ ಇಸವಿಯ ಘಟಿಕೋತ್ಸವ. ಆ ಸಮಾರಂಭಕ್ಕೆ ಆಗಮಿಸಿದವರು ಭಾರತದ ಪ್ರಧಾನಮಂತ್ರಿಗಳೂ, "ಜೈ ಜವಾನ್, ಜೈ ಕಿಸಾನ್" ಮಂತ್ರ ಕೊಟ್ಟವರೂ ಆದ ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿಯವರು. ಇವರಲ್ಲದೆ ಡಾ. ಎ. ಪಿ. ಜೆ. ಅಬ್ದುಲ್ ಕಲಾಂ, ಶ್ರೀ ಗುಲ್ಜಾರಿಲಾಲ್ ನಂದ, ಶ್ರೀ ಜಯಪ್ರಕಾಶ್ ನಾರಾಯಣ್, ತಮಿಳುನಾಡಿನ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಕೆ. ಕಾಮರಾಜ್ ಮತ್ತು ಶ್ರೀ ಎಂ. ಭಕ್ತವತ್ಸಲಂ, ಭೂದಾನ ಚಳುವಳಿಯ ರೂವಾರಿಗಳಾದ ಆಚಾರ್ಯ ಶ್ರೀ ವಿನೋಬಾಜಿ, ಶೃಂಗೇರಿಯ ಶಂಕರಾಚಾರ್ಯರಾಗಿದ್ದ ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳು ಮುಂತಾದ ಮಹನೀಯರುಗಳು ವಿದ್ಯಾ ಲಯದ ಭವಿತವ್ಯವನ್ನು ಸಮೃದ್ಧಗೊಳಿಸಿದರು.



ಸಣ್ಣತೊರೆಯಾಗಿ ಜನ್ಮಪಡೆದು, ನಿಧಾನವಾಗಿ ತನ್ನ ಪಾತ್ರ ವನ್ನು ಹಿಗ್ಗಿಸಿಕೊಂಡು, ಹರಹನ್ನು ವಿಸ್ತಾರಗೊಳಿಸಿಕೊಳ್ಳುತ್ತಾ ಅಪಾರ ವೇಗದಿಂದ ಮುನ್ನುಗ್ಗಿ ಹರಿಯುವ ಒಂದು ಜೀವನದಿ ಯಂತೆ ಕೊಯಮತ್ತೂರಿನ ವಿದ್ಯಾಲಯವು ಸಾಧಾರಣ ಹಂಚಿನ ಮನೆಯಲ್ಲಿ ಹುಟ್ಟು ಪಡೆದು, ಭರತಖಂಡದಲ್ಲೇ ಒಂದು ವಿರಾಟ್ ಶಿಕ್ಷಣಸಂಸ್ಥೆಯಾಗಿ ಬೆಳೆದುನಿಂತಿದೆ. ತನ್ನ ಬಳಿಗೆ ಬಂದ ಜ್ಞಾನಪಿಪಾಸುಗಳಿಗೆ ಆಶ್ರಯ ನೀಡಿ ಅವರನ್ನೂ ಬೆಳೆಸಿ ಉತ್ತುಂಗಕ್ಕೇರಿಸಿದೆ.

ಕ್ರಿಯಾರೂಪಿ ವಿವೇಕಾನಂದರು ಸಮಾಜದಲ್ಲಿ ಸುಪ್ತ ವಾಗಿರುವ ಶಕ್ತಿಯನ್ನು ಜಾಗೃತಗೊಳಿಸಿ ಹೇಗೆ ಒಂದು ಸಂಸ್ಥೆಯ ರೂಪದಲ್ಲಿ ಸಾಕಾರಗೊಂಡಿದ್ದಾರೆ ಎಂಬುದಕ್ಕೆ ಕೊಯಮತ್ತೂರಿನ ವಿದ್ಯಾಲಯಕ್ಕಿಂತಲೂ ಬೇರೆ ನಿದರ್ಶನದ ಅಗತ್ಯವಿದೆಯೇ?













# ‘ಯುವ ಭಾರತ ಜಾಗೃತವಾಗಲಿ!’

## ಕೊಯಮತ್ತೂರಿನಲ್ಲಿ ದಕ್ಷಿಣಭಾರತ ಪ್ರಾದೇಶಿಕ ಯುವ ಸಮ್ಮೇಳನ – ೨೦೧೩

ಸ್ವಾಮಿ ವಿವೇಕಾನಂದರ ೧೫೦ನೇ ಜನ್ಮೋತ್ಸವದ ಅಂಗವಾಗಿ ೨೦೧೩ರ ನವೆಂಬರ್ ೨೮ ರಿಂದ ೩೦ರ ವರೆಗೆ – **‘ಯುವ ಭಾರತ! ಜಾಗೃತವಾಗಲಿ!’** ಎಂಬ ಶೀರ್ಷಿಕೆಯ ಅಡಿಯಲ್ಲಿ ‘ದಕ್ಷಿಣ ಭಾರತ ಪ್ರಾದೇಶಿಕ ಯುವ ಸಮ್ಮೇಳನ’ವನ್ನು ಕೊಯಮತ್ತೂರಿನ ರಾಮಕೃಷ್ಣ ಮಿಷನ್ ವಿದ್ಯಾಲಯದ ಆಶ್ರಯದಲ್ಲಿ ಏರ್ಪಡಿಸಲಾಗಿತ್ತು. ಈ ಬೃಹತ್ ಆವಾಸಿ ಸಮಾವೇಶದಲ್ಲಿ ತಮಿಳುನಾಡು, ಕೇರಳ, ಕರ್ನಾಟಕ ಮತ್ತು ಆಂಧ್ರಪ್ರದೇಶಗಳಿಂದ ಭಾಗವಹಿಸಿದ ೧,೨೦೦ಕ್ಕೂ ಹೆಚ್ಚು ಯುವಪ್ರತಿನಿಧಿಗಳು ಭಾಗವಹಿಸಿದ್ದರು.

ಮೂರು ದಿನಗಳ ಈ ಆವಾಸಿ ಶಿಬಿರದಲ್ಲಿ ಮಾರ್ಗದರ್ಶಿತ ಧ್ಯಾನ–ಪ್ರಾರ್ಥನೆ ಮತ್ತು ಯೋಗ, ಮೌಲಿಕ ವಿಷಯಗಳ ಕುರಿತು ನುರಿತ ಪ್ರವೀಣರಿಂದ ಪ್ರವಚನಗಳು, ಪ್ರಸ್ತುತ ಸಾಮಾಜಿಕ ವಿಷಯಗಳ ಕುರಿತು ಸಮೂಹ ಚರ್ಚೆಗಳು, ಹಲವಾರು ಗುಂಪುಗಳ ನಾಯಕರಿಂದ ಚರ್ಚೆ ಮತ್ತು ಸೇವಾವ್ರತ ಸ್ವೀಕಾರ – ಇವೇ ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳು ನಡೆದವು. ಇವೆಲ್ಲವೂ ಈ ಯುವಸಮಾವೇಶವನ್ನು ಹೆಚ್ಚು ಅರ್ಥಪೂರ್ಣವನ್ನಾಗಿ ಮಾಡಿದ್ದವು. ಸಾಮಾಜಿಕ ಮಹತ್ವವುಳ್ಳ ಚಲನಚಿತ್ರದ ಪ್ರದರ್ಶನ ಮತ್ತು ಸಂಜೆಗಳಲ್ಲಿ ನಡೆದ ವಿವಿಧ ಕ್ರೀಡಾ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಈ ಸಮಾವೇಶದ ವಿಶಿಷ್ಟ ಆಕರ್ಷಣೆಯಾಗಿದ್ದವು. ಕಡೆಯದಾಗಿ, ಶ್ರೀ ಎ.ಎಸ್. ರಾಮ್ ಅವರಿಂದ ವಾದ್ಯಗೋಷ್ಠಿ ಏರ್ಪಾಡಾಗಿತ್ತು. ಈ ಯುವ ಅಧಿವೇಶನದ ಸಂಪನ್ಮೂಲ ವ್ಯಕ್ತಿಗಳು ವಿವಿಧ ವಿಷಯಗಳ ಬಗ್ಗೆ ಮಾರ್ಗದರ್ಶನ ನೀಡಿದರು. ಅವರೆಂದರೆ, ಸ್ವಾಮಿ ಅಭಿರಾಮಾನಂದಜಿ, ಸ್ವಾಮಿ ನಿಖಿಲೇಶ್ವರಾನಂದಜಿ, ಸ್ವಾಮಿ ಆತ್ಮಪ್ರಿಯಾನಂದಜಿ, ಸ್ವಾಮಿ ಬೋಧಮಯಾನಂದಜಿ, ಸ್ವಾಮಿ ಆತ್ಮಶ್ರದ್ಧಾನಂದಜಿ, ಡಾ. ಗುರುರಾಜ ಕರ್ಜಗಿ, ಅರುಣಿಮಾ ಸಿನ್ಹಾ, ನಿವೇದಿತಾ ಭಿಡೆ, ಡಾ. ಬಿ.ಕೆ. ಕೃಷ್ಣರಾಜ ವನವಾರಯರ್, ಡಾ. ಟಿ.ಜಿ.ಕೆ. ಮೂರ್ತಿ ಮತ್ತು ನ್ಯಾಯಮೂರ್ತಿ ರಾಮಸುಬ್ರಮಣಿಯನ್.

ಭಾರತ ದೇಶದ ಅಪರೂಪದ ಶಾಲೆ

# ವಿದ್ಯಾಸಾಗರ ರೆಸಿಡೆನ್ಸಿಯಲ್ ಸ್ಕೂಲ್

ಕೆ.ಬಿ.ಬಡಾವಣೆ, ದಾವಣಗೆರೆ.

ಬರೀ ಓದು-ಬರಹ ಕಲಿಸೋದಷ್ಟೇ ಅಲ್ಲ.....

5 ರಿಂದ 10ನೇ ತರಗತಿ
ಆಂಗ್ಲ ಮಾಧ್ಯಮ



Contact:
R.Bharath Singh
#1693,K.B.Extn
Davanagere

ಪ್ರವೇಶ ಪಡೆಯಲು ಸಂಪರ್ಕಿಸಿ:
9060458833, 8722299544,
9035110229, vidyaoasisdvg@gmail
www.vscdavangere.com

ಮಕ್ಕಳು ಮುಂದೆ...
ಬದುಕಿನ ಪ್ರತೀಕ್ಷಣ ಆನಂದಿಸುವಂತಾಗಬೇಕು
ಮನುಷ್ಯತ್ವ ಅವರಲ್ಲಿರಬೇಕು
ನಾಯಕತ್ವದ ಗುಣದೊಂದಿಗೆ ಸ್ವ-ಅರಿವು,ಅಭಿವ್ಯಕ್ತಿ ಶಕ್ತಿ ಹೊಂದಿರಬೇಕು
ನಾಡಿಗೆ, ದೇಶಕ್ಕೆ ಕೀರ್ತಿ ತರುವಂತವರಾಗಬೇಕು
ಸ್ವತಂತ್ರವಾಗಿ ಬದುಕೊದನ್ನ ಕಲಿಬೇಕು, ತಂದೆ ತಾಯಿಯನ್ನ ಮರೆಯಬಾರದು.

ಇದೆಲ್ಲ ಸಾಧ್ಯವಾಗಬೇಕಾದರೆ ನಿಮ್ಮ ಆಯ್ಕೆ... **ವಿದ್ಯಾಸಾಗರ**

ನಾವು ಬರೀ ಓದು-ಬರಹ ಕಲಿಸೋದಷ್ಟೇ ಅಲ್ಲ.......
ಪಠ್ಯದೊಂದಿಗೆ, ವೈಜ್ಞಾನಿಕ, ಸಾಂಸ್ಕೃತಿಕ ಶಿಕ್ಷಣ ನೀಡುತ್ತೇವೆ.

ಇದರಿಂದ ಮಕ್ಕಳಲ್ಲಿ ಸ್ವ-ಅರಿವು, ವೈಜ್ಞಾನಿಕ ಮನೋಭಾವ, ಭಾಷಾ ಕೌಶಲ್ಯ, ಅಭಿವ್ಯಕ್ತಿ ಶಕ್ತಿ ಮತ್ತು ಇವೆಲ್ಲದರೊಂದಿಗೆ ಕಲಿಕಾ ಸಾಮರ್ಥ್ಯ ಬೆಳೆಸಿ ಅವರನ್ನು ದೈಹಿಕವಾಗಿ, ಮಾನಸಿಕವಾಗಿ ಸದೃಢರನ್ನಾಗಿ ಮಾಡಿ ನಾಯಕತ್ವದ ಗುಣದೊಂದಿಗೆ ಸಮಾಜಕ್ಕೆ ಕೊಡುಗೆಯಾಗಿ ನೀಡುವುದೇ ನಮ್ಮ ಉದ್ದೇಶ.





ಸಾಂಸ್ಕೃತಿಕ ಶಿಕ್ಷಣ ನೀಡುತ್ತಿರುವ ಭಾರತದೇಶದ ಅಪರೂಪದ ಶಾಲೆ

"ಮಗು, ನಿನಗೆ ಮನಶ್ಶಾಂತಿ ಬೇಕಾಗಿದ್ದರೆ, ಇನ್ನೊಬ್ಬರಲ್ಲಿ ದೋಷವನ್ನು ನೋಡಬೇಡ. ಅದಕ್ಕೆ ಬದಲು ನಿನ್ನ ತಪ್ಪನ್ನೇ ನೋಡಿಕೋ. ಜಗತ್ತೆಲ್ಲವನ್ನೂ ನಿನ್ನದನ್ನಾಗಿ ಮಾಡಿಕೊಳ್ಳು ಕಲಿತುಕೋ. ಮಗೂ, ಯಾರೂ ನಿನಗೆ ಪರಕೀಯರಲ್ಲ. ಇಡೀ ಜಗತ್ತೇ ನಿನ್ನದು."

*ಶ್ರೀಮಾತೆ ಶಾರದಾದೇವಿ*

# ವಿಶೇಷ ಪ್ರವಾಸಗಳು-2014






## 13 ದಿನಗಳ ಕೈಲಾಸ ಮಾನಸ ಸರೋವರ ಯಾತ್ರೆ

ಬೆಂಗಳೂರಿನಿಂದ ಬೆಂಗಳೂರಿಗೆ ವಿಮಾನದಲ್ಲಿ

30,000 ರೂ. ಧನ ಸಹಾಯ ಕರ್ನಾಟಕ ಸರ್ಕಾರದ ವತಿಯಿಂದ

ಹೊರಡುವ ತಿಂಗಳು : ಮೇ, ಜೂನ್, ಜುಲೈ, ಆಗಸ್ಟ್

**ಸಂಪರ್ಕಿಸಿ**
9900080799
9900080792

**ಸಂಪರ್ಕಿಸಿ**
9900080794
9900080797

## 15 ದಿನಗಳ ಗ್ರ್ಯಾಂಡ್ ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ,

ಹೊರಡುವ ತಿಂಗಳು : ಏಪ್ರಿಲ್, ಮೇ, ಜೂನ್





## 7 ದಿನಗಳ ಸಿಂಗಾಪುರ - ಮಲೇಶಿಯ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್, ಬರ್ಡ್‌ಪಾರ್ಕ್, ಸಾಂಗ್ ಆಫ್ ಸೀ

ಮಲೇಶಿಯ : ಕೌಲಲೊಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಜುಹೊರ್‌ಬರ್ ಸಿಟಿ ಟೂರ್

ಹೊರಡುವ ತಿಂಗಳು : ಮಾರ್ಚ್, ಏಪ್ರಿಲ್, ಮೇ

**ಸಂಪರ್ಕಿಸಿ**
9900080795
9900080799

**ಸಂಪರ್ಕಿಸಿ**
9900080799
9900080793

## 8 ದಿನಗಳ ಕಾಂಬೋಡಿಯಾ - ಥೈಲ್ಯಾಂಡ್ ಪ್ರವಾಸ

ಕಾಂಬೋಡಿಯಾ - ಸಿಯಾಮ್‌ರಿಪ್, ಅಂಕೂರ್‌ವಾಟ್, ಟೋನ್ ಸ್ಯಾಪ್ ಸರೋವರ, ತಾಪ್ರಾಮ್, ಬಯಾನ್, ಬಫೂನ್ ದೇವಾಲಯಗಳು, ಥೈಲ್ಯಾಂಡ್ - ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ವಾಕರ್ ಸ್ಟ್ರೀಟ್

ಹೊರಡುವ ತಿಂಗಳು : ಫೆಬ್ರವರಿ, ಮಾರ್ಚ್, ಏಪ್ರಿಲ್





## 6 ದಿನಗಳ ಶ್ರೀಲಂಕಾ ಪ್ರವಾಸ

ರಾಮಾಯಣ ಕಾಲದ ಸ್ಥಳ ವೀಕ್ಷಣೆ

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು

ಹೊರಡುವ ತಿಂಗಳು : ಫೆಬ್ರವರಿ, ಮಾರ್ಚ್, ಏಪ್ರಿಲ್

**ಸಂಪರ್ಕಿಸಿ**
9900080799
9900080795

**ಸಂಪರ್ಕಿಸಿ**
9900080792
9900080793

## 3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ

ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ, ಕಾರಂಜಿನರಸಿಂಹ, ಮಾಲೋಲನರಸಿಂಹ, ಯೋಗನರಸಿಂಹ, ಭಾರ್ಗವನರಸಿಂಹ, ಛತ್ರವಟನರಸಿಂಹ

ಹೊರಡುವ ತಿಂಗಳು : ಜನವರಿ, ಫೆಬ್ರವರಿ, ಮಾರ್ಚ್






# 98, 1st Floor, D.V.G. Road, Basavanagudi, Bangalore - 560 004.

www.orchidtours.net

**Tel : 080-26670646**
**26621983, 26670647**
**26617178**

Printed at mayur graphics,Bangalore



Managing Editor : Swami Muktidananda

Editor : Swami Vireshananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.D-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ)

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.
ಎಂ.ಎಲ್.ಹಳ್ಳಿ, ಸಾಗರ ತಾಲೂಕು
ಶಿವಮೊಗ್ಗ ಜಿಲ್ಲೆ
ಫೋನ್: 08183-296516

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ
ಪ್ರವಾಸಿ ಮಂದಿರ ಹತ್ತಿರ,
ಹೊಸನಗರ-577418
ಶಿವಮೊಗ್ಗ ಜಿಲ್ಲೆ
ಫೋನ್: 08185-221915



ಮಾನ್ಯ ವಿದ್ಯಾಕಾಂಕ್ಷಿಗಳೇ.

"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸ ಖಂಡಗಳು ಮತ್ತು ಉಕ್ಕಿನಂತಹ ನರಗಳು. ನಾವು ಬಹಳ ಕಾಲ ಅತ್ತಿದ್ದೇವೆ. ಇನ್ನು ಮುಂದೆ ಅಳುವುದು ಬೇಡ. ನಿಮ್ಮ ಕಾಲ ಮೇಲೆ ನೀವು ನಿಂತುಕೊಂಡು ಮನುಷ್ಯರಾಗಿ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣದ ಧರ್ಮ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣ ಸಿದ್ಧಾಂತಗಳು. ಸಮಗ್ರ ಮಾನವ- ನಿರ್ಮಾಣದ ಶಿಕ್ಷಣವೇ ನಮಗಿಂದು ಬೇಕಾಗಿರುವುದು" ಎಂದು ಸ್ವಾಮಿ ವಿವೇಕಾನಂದರು ಬಹಳ ಹಿಂದೆಯೇ ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಸಚ್ಚಾರಿತ್ರ್ಯವುಳ್ಳ ಧೀಮಂತ, ವಿನಯವಂತ, ಸತ್ಪುರುಷರ ನಿರ್ಮಾಣವು ಸುಸಂಸ್ಕೃತ ಹಾಗೂ ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣದ ಮೂಲಕವೇ ಆಗಬೇಕಾಗಿದೆ.

ರಾಜ್ಯದಾದ್ಯಂತ ಬಂದಿರುವ ನೂರಾರು ಮಕ್ಕಳು ಇಲ್ಲಿ ಕಲಿಯುತ್ತಿದ್ದು, ಸಂಸ್ಥೆಯು ಅವರನ್ನು ಅಕ್ಕರೆಯಿಂದ, ಮಮತೆಯಿಂದ, ಪೋಷಿಸಿ ಹೃದಯವರಳಿಸಿ, ಅವರ ಅಂತರಂಗದಲ್ಲಿ ಹುದುಗಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ, ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನಾಗಿ ರೂಪಿಸುತ್ತಿದೆ.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕ್ರಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ವಿದ್ಯಾಸಂಸ್ಥೆಗಳು ಮಕ್ಕಳ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುತ್ತಿವೆ. ದೇಶದಾದ್ಯಂತ ಖ್ಯಾತಿ ಹೊತ್ತ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ, ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:-** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :-** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:-** ಎಲ್.ಕೆ.ಜಿ ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:-**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ.

5) **ವಸತಿ ಶಾಲೆಗೆ ಪ್ರವೇಶ:-**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ
* ಪ್ರವೇಶ ಪರೀಕ್ಷೆ, ಸಂದರ್ಶನವಿರುತ್ತದೆ
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿರುತ್ತದೆ
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಶಾಲೆಯನ್ನು ಸಂಪರ್ಕಿಸಿ
* ಹೆಚ್ಚಿನ ವಿವರ ಶಾಲೆಯಲ್ಲಿ ಲಭ್ಯ





VIVEKA PRABHA (KANNADA MONTHLY)
January 2014, Vol. 15, No.01,
No.of pages:136

Registered With Registrar of News Papers of India under 72356/2000.Postal Regn.No.KA/SK/MYS/480/2012-14. LICENSED TO POST W.P.P.AT YADAVAGIRI MYSORE 570 020,VIDE LICENSE NO.SK/WPP/MYS/155/2013-15.



Printed at mayur graphics,Bangalore